ವಾಸುದೇವ ಸಾಹಿತ್ಯರತ್ನಮಾಲೆ—೬

ಮತ್ತು

ಮನೋಹರ ಗ್ರಂಥಮಾಲೆಯ ೧೧೩ನೆಯ ಕುಸುಮ

# ಬೆಳಗಿದ ದೀಪಗಳು

( ಚಾರಿತ್ರಿಕ-ಕಥೆಗಳು )

ಬರೆದವರು :

ಕೆರೂರ. ವಾಸುದೇವಾಚಾರ್ಯರು.

ಎಪ್ರಿಲ್
೧೯೫೨

ಬೆಲೆ
೧-೧೨-೦

ಪ್ರಕಾಶಕರು :
ಧೀರೇಂದ್ರ ವಾಸುದೇವಾಚಾರ್ಯ ಕೆರೂರ
ಬಾಗಿಲುಕೋಟೆ.

ಸಂಪಾದಕರು :
ಜಿ. ಬಿ. ಜೋಶಿ

( ಮೊದಲನೆ ಆವೃತ್ತಿ ೨೫೦೦ ಪ್ರತಿಗಳು )

ಪುಸ್ತಕ ಮಾರಾಟಗಾರರು :

ವಾಸುದೇವ ಪುಸ್ತಕಾಲಯ
ಬಾಗಿಲುಕೋಟೆ.

ಮನೋಹರ ಗ್ರಂಥಮಾಲೆ
ಧಾರವಾಡ.

ಮುದ್ರಕರು :
ವಿ. ವಾಯ್. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ.

# ಪ್ರಕಾಶಕರ ಮಾತು

ನಾನು ಮನೋಹರ ಗ್ರಂಥಮಾಲೆಯ ಸಂಪಾದಕರಾದ ಶ್ರೀ. ಜಿ. ಬಿ. ಜೋಶಿಯವರ ಸಹಾಯದಿಂದ ದಿವಂಗತ ಕೆರೂರ ವಾಸುದೇವಾಚಾರ್ಯರು ಬರೆದ ಸಾಹಿತ್ಯವನ್ನೆಲ್ಲ ಒಂದು ಕ್ರಮಬದ್ಧವಾದ ರೀತಿಯಲ್ಲಿ ಪುಸ್ತಕರೂಪವಾಗಿ ಪ್ರಕಟಿಸಬೇಕೆಂದೆಣಿಸಿ ಈ "ವಾಸುದೇವ ಸಾಹಿತ್ಯರತ್ನಮಾಲೆ"ಯನ್ನು ಪ್ರಾರಂಭಿಸಿದ್ದೇನೆ. ಒಂಬತ್ತು ಚಾರಿತ್ರಿಕ ಕಥೆಗಳ ಸಂಗ್ರಹವಾದ "ಬೇಗಿದ ದೀಪಗಳು" ಆ ಮಾಲೆಯಲ್ಲಿಯ ಆರನೆಯ ರತ್ನ.

ನಂಜನಗೂಡಿನ ಸತಿಹಿತೈಷಿಣೀ ಗ್ರಂಥಮಾಲೆಯ ಸಂಪಾದಿಕೆಯರಾದ ಶ್ರೀಮತಿ ತಿರುಮಲಾಂಬಾ ಅವರು ದಿವಂಗತ ವಾಸುದೇವಾಚಾರ್ಯರ ಮೇಲಿನ ತಮ್ಮ ಗೌರವದಿಂದ, ತಮ್ಮಲ್ಲಿದ್ದ 'ಸಚಿತ್ರಭಾರತ'ದ ಮೊದಲ ಸಂಪುಟವನ್ನು ಸಮಯಕ್ಕೆ ಒದಗಿಸಿಕೊಟ್ಟು ಸಹಾಯಮಾಡಿದ್ದಾರೆ; ಅದಕ್ಕಾಗಿ ನಾನು ಅವರಿಗೆ ಉಪಕೃತನಾಗಿದ್ದೇನೆ. ಅಲ್ಲದೆ ಈ ಮೊದಲೆ ಸಚಿತ್ರಭಾರತದ ಮೂರೂ ಸಂಪುಟಗಳನ್ನು ಕೊಟ್ಟು ಗ್ರಂಥಪ್ರಕಟನೆಗೆ ಸಹಾಯ ಮಾಡಿದ ಹುಬ್ಬಳ್ಳಿಯ ಶ್ರೀ ಸರಸ್ವತಿ ವಿದ್ಯಾರಣ್ಯ ವಾಚನಾಲಯದ ಸಂಚಾಲಕರಿಗೂ ಮೂರನೆಯ ಸಂಪುಟವೊಂದನ್ನು ಕೊಟ್ಟ ಶ್ರೀಮಂಗಳವೇಢೆ ಶ್ರೀನಿವಾಸರಾಯರಿಗೂ ನಾನು ಋಣಿಯಾಗಿದ್ದೇನೆ.

—ಧೀರೇಂದ್ರ ವಾ. ಕೆರೂರ

# ಅರಿಕೆ

ವಾಸುದೇವಾಚಾರ್ಯರು ಆಗೀಗ ತಮ್ಮ ' ಸಚಿತ್ರಭಾರತ ' ದಲ್ಲಿ ಈ ಕತೆಗಳನ್ನು ಬರೆದು ಪ್ರಕಟಿಸಿದರು. ' ಸಂಪೂರ್ಣಕಥೆ ' ಎಂದು ಇವಕ್ಕೆ ಅವರೇ ನಾಮಕರಣ ಮಾಡಿದರು. ಅವುಗಳಲ್ಲಿ ಕಾಲ್ಪನಿಕ ಮತ್ತು ಐತಿಹಾಸಿಕ ಕಥೆಗಳದೊಂದು, ಚಾರಿತ್ರಿಕ-ಕಥೆಗಳದೊಂದು, ಪತ್ತೇದಾರಿ-ಕಥೆಗಳದೊಂದು, ಸಾಮಾಜಿಕ ಕಥೆಗಳದೊಂದು ಹೀಗೆ ಬೇರೆ ಬೇರೆ ಸಂಕಲನಗಳನ್ನು ಮಾಡಿ, ಪ್ರತಿಯೊಂದು ಸಂಕಲನಕ್ಕೂ ಬೇರೆ ಬೇರೆ ಹೆಸರಿಟ್ಟು ಪ್ರಕಟಿಸಲಾಗಿದೆ. ' ಪ್ರೇಮ ವಿಜಯ ' ಅವುಗಳಲ್ಲಿಯ ಮೊದಲನೆಯ ಸಂಕಲನ. ' ಬೆಳಗಿದ ದೀಪಗಳು ' ಎರಡನೆಯದು. ' ತೊಳೆದ ಮುತ್ತು ' ಮೂರನೆಯದು. ' ಬೆಳ್ಳೀ ಚಿಕ್ಕೆ ' ನಾಲ್ಕನೆಯದು.

ಏಕಸಮಯದಲ್ಲಿ ಈ ಗ್ರಂಥಗಳು ವಾಸುದೇವ ಸಾಹಿತ್ಯರತ್ನ ಮಾಲೆಯಲ್ಲಿ ಪ್ರಕಟವಾಗಿಯೂ, 'ಮನೋಹರ ಗ್ರಂಥಮಾಲೆಯಲ್ಲಿಯ ಗ್ರಾಹಕರಿಗೂ ದೊರೆಯುವಂತಾದುದು, ಮತ್ತು ಅದಕ್ಕೆ ಅನುಕೂಲ ಮಾಡಿ-ಕೊಟ್ಟದು ಶ್ರೀ ಧೀರೇಂದ್ರ ವಾ. ಕೆರೂರ ಅವರ ಸಹಕಾರ ಸಹಾಯದಿಂದ ಎಂಬದನ್ನು ಬೇರೆ ಹೇಳಬೇಕಾಗಿಲ್ಲ. ಅದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ

— ಜಿ. ಬಿ. ಜೋಶಿ.

# ಪರಿವಿಡಿ



## ಬರಲಿರುವ ಗ್ರಂಥಗಳು

**ದಿವಂಗತ ಕೆರೂರ ವಾಸುದೇವಾಚಾರ್ಯರ**

೧. ತೊಳೆದ ಮುತ್ತು

( ಸಾಮಾಜಿಕ ಕಥೆಗಳು )

೨. ಬೆಳ್ಳಿ ಚಿಕ್ಕೆ

( ಪತ್ತೇದಾರಿ ಕಥೆಗಳು )

**ಶ್ರೀ. ವಿ. ಕೃ. ಗೋಕಾಕರ**

೩. ಸಮರಸವೇ ಜೀವನ

( ಇಜ್ಜೋಡಿನ ಮುಂದಿನಭಾಗ )

**ಶ್ರೀ. ಕೆ. ಆರ್. ಮುಹಿಷಿಯವರ**

೪. ಗಾಳಿಯ ಉಡಿಯಲ್ಲಿ

( ಸರಸ ಪ್ರಬಂಧಗಳು )

**ಶ್ರೀ. ಜಿ. ಬಿ. ಜೋಶಿಯವರಿಂದ ಸಂಪಾದಿತ**

೫. ಆಶುನಾಟಕಗಳು

( ಏಕಾಂಕಗಳು )

# ನರಗುಂದದ ಸಾವಿತ್ರೀಬಾಯಿ

ಶುಭಾಂಗಿಯಾದ ವನಿತೆಯೆಂದರೆ ಈ ಜಗತೀತಲದಲ್ಲಿ ನಯನಾಭಿರಾಮವಾಗಿ ತೋರುವ ನವಕುಸುಮವಲ್ಲದೆ ಮತ್ತೊಂದಲ್ಲ. ಹೊಸ ಚಿಗುರಿನಿಂದೊಪ್ಪುವ ಕುಡಿವಳ್ಳಿಯಲ್ಲಿ ಹೊಂಬಣ್ಣದಿಂದೊಪ್ಪಿ ನಲಿದಾಡುವ ಅರಳುಮೊಗ್ಗೆಯ ಅಂದವನ್ನು ಕಂಡು ಮನಸೋತು ಬೆರಗಾಗಿ ನಿಂದಿರದವರಾರು? ಆ ಪೊಗರೊಗುವ ಪೂವಿನ ತನಿಗಂಪಿನ ಸೊಂಪಿಗೆ ಮೆಚ್ಚಿ ತಲೆದೂಗದಿರುವವರಾದರೂ ಯಾರು? ಅದರಂತೆಯೇ ಕೋಮಲಾಂಗಿಯೂ ಸರ್ವಾಂಗಸುಂದರಿಯೂ ಚಾರುತರ ವಿಲಾಸವತಿಯೂ ಮೃದುಭಾಷಿಣಿಯೂ ಸೌಜನ್ಯಯುತಳೂ ಕಲಂಕರಹಿತವಾದ ಆಚರಣದವಳೂ ಆದ ಲಲನಾಮಣಿಯನ್ನು ಕಂಡು ಕೌತುಕವನ್ನು ಪಡೆಯದಿರುವ ಮನುಷ್ಯನು ಪಶುಸಮಾನನೇ. ಪ್ರೇಮ ಮಮತೆ ದಯಾಪರತೆಗಳ ಸುರುಚಿರವಾದ ಮೂರುತಿಯಾದ ಸೀಮಂತಿನಿಯು ಲೀಲಾವಿಲಾಸಗಳಿಂದ ನಲಿದಾಡಿ ಮೃದುಹಾಸಗೈಯುತ್ತ ಚಿಂತಾರಹಿತಳಾಗಿ ಸಂತೋಷದಿಂದ ಮೆರೆಯುತ್ತಿರಬೇಕಲ್ಲದೆ ಅವಳು ನಿಷ್ಕಾರಣವಾದ ದುಃಸ್ಥಿತಿಗೀಡಾಗಿ ಕೊರಗಿ ಸೊರಗಿ ಅಕಾಲ ಮೃತ್ಯುವಿನ ತುತ್ತಾಗಿ ಹೋಗುತ್ತಿರುವ ನೋಟವು ಶೋಚನೀಯವಾದದ್ದಲ್ಲವೆ? ಕಲ್ಲುಕಣೆಯಾಗಿರುವ ಪುರುಷನು ದುಃಖಸಾಗರದಲ್ಲಿ ಮುಳುಮುಳುಗಿ ಎದ್ದರೇನಾಗುವದು? ಆದರೆ ಕೋಮಲೆಯರಾದ ಭಾಮಿನಿಯರಿಗೆ ಕಷ್ಟಕ್ಲೇಶಗಳ ಗಾಳಿ ತಗಲಿದರೆ ಸಾಕು, ಅವರು ಕಂದಿಕುಂದಿಹೋಗದಿರುವರೆ? ಆದರೂ ಮಕರಂದಮಯವಾದ ಪುಷ್ಪಗಳಲ್ಲಿಯ ಸಾರವನ್ನು ಸಂಗ್ರಹಿಸುವಾಗ ಗಂಧಿಗನು ಅವುಗಳನ್ನು ಹಿಂಡಿ ಹಿಪ್ಪೆಯಾಗಿ ಮಾಡುವಂತೆ, ಸುಚರಿತೆಯರ ಸುಭಾವಗಳನ್ನು ಪರೀಕ್ಷಿಸುವದಕ್ಕಾಗಿ ಪರಮಾತ್ಮನು ಅವರನ್ನು ಬಾಧೆಗೀಡುಮಾಡುವದುಂಟು. ದಮಯಂತಿ ತಾರಾಮತಿಯರೂ ಸೀತೆ ದ್ರೌಪದಿಯರೂ ಭಗವಂತನೊಡ್ಡಿದ ಪಣದಲ್ಲಿ ತಾವೇ ವಿಜಯವನ್ನು ಹೊಂದಿದರೆಂಬ ಮಾತುಗಳನ್ನು ನಾವು ಪುರಾಣಗಳಲ್ಲಿ ಕೇಳುತ್ತೇವೆ. ಅಂಥ ಮಹಾಸತಿಯರು ಅರ್ವಾಚೀನವಾದ ಇತಿಹಾಸವನ್ನು ಅಲಂಕರಿಸಿದ ಉದಾಹರಣಗಳಾದರೂ ಅನೇಕವಾಗಿರುವವು.

ನರಗುಂದದ ಸಾವಿತ್ರೀಬಾಯಿಯು ಅಂಥ ಮಹಾಸತಿಯರ ಮಾಲಿಕೆಯಲ್ಲಿ ಕಂಗೊಳಿಸುವ ಅನರ್ಘವಾದ ರತ್ನವೇ ಆಗಿರುವಳು

ಸಾವಿತ್ರೀಬಾಯಿಯು ತೇಜಸ್ವಿನಿಯಾದ ಸುಂದರಿಯೂ ಸುಸ್ಸಂಸ್ಕೃತವಾದ ಆಚರಣದವಳೂ ಪ್ರೇಮಲವಾದ ಅಂತಃಕರಣದವಳೂ ಉದಾರಚರಿತಳೂ ಆದ ಮಾನಿನಿಯು. ಶುಚಿಸ್ಮಿತೆಯಾದ ಆ ಮೃದುಭಾಷಿಣಿಯು ಅತಿಥಿ ಅಭ್ಯಾಗತರಿಗೆ ಮಾಡುತ್ತಿರುವ ಆದರಾತಿಥ್ಯಗಳು ಇಮ್ಮಡಿಯಾಗಿ ಸುಖಪ್ರದವಾಗುತ್ತಿದ್ದವು. ಸೇವಕಜನ ಆಶ್ರಿತ ಮುಂತಾದವರ ಪರಿಪೋಷಣವನ್ನು ಮಾಡುವವರಲ್ಲಿ ಆ ಹಿತೈಷಿಣಿಯು ಯಾವಾಗಲೂ ದಕ್ಷಳಾಗಿರುತ್ತಿದ್ದಳು. ಸೊಬಗಿನ ಹೂವಿಳ್ಯ, ವಸಂತಪೂಜೆ, ಗೌರೀಪೂಜನ ಮುಂತಾದ ಮಹೋತ್ಸವಗಳ ಮೂಲಕ ನರಗುಂದದ ನಾರೀವೃಂದದಲ್ಲಿ ಆನಂದ ವಿನೋದ ಸ್ನೇಹಾಭಿವೃದ್ಧಿಗಳನ್ನು ಅವಳು ಹೆಚ್ಚಿಸುತ್ತಿದ್ದಳು. ಕಥೆ, ಕೀರ್ತನ, ಪುರಾಣ, ಪುಣ್ಯಕಥೆ ಮುಂತಾದ ಧರ್ಮಜಾಗ್ರತಿಯ ಕೃತ್ಯಗಳಾದರೂ ಆ ಸಾಧ್ವಿಯ ಪ್ರೋತ್ಸಾಹನದಿಂದಲೇ ನಡೆಯುತ್ತಿದ್ದವು. ಶಾಸ್ತ್ರೋಕ್ತವಾದ ವ್ರತ ಉದ್ಯಾಪನ ಜಪತಪಾದಿಗಳನ್ನು ಆ ಪುಣ್ಯವಂತಿಯಾದ ಮಹಾಸತಿಯು ಆಸಕ್ತಿಯಿಂದ ಮಾಡುತ್ತಿರುವದರಿಂದ ಅವಳಲ್ಲಿ ಕ್ರಿಯಾಸಿದ್ಧಿ ವಾಕ್‌ಸಿದ್ಧಿಗಳು ಪ್ರಾಪ್ತವಾಗಿದ್ದವೆಂಬದನ್ನು ಆಗಿನವರು ಮನಗಂಡಿದ್ದರು. ಮೈದೊಳೆದು ಮಡಿಯಾಗಿ ಆ ಶುಚಿವ್ರತೆಯು ವೃಂದಾವನಕ್ಕೆ ಬಂದು ತುಲಸೀಪೂಜನವನ್ನು ಮಾಡಿ ಪ್ರದಕ್ಷಿಣೆ ಮಾಡುವಾಗ ಭೂತಬಾಧೆಯುವರೂ ಹಾವು ಚೇಳುಗಳನ್ನು ಕಡಿಸಿಕೊಂಡವರೂ ಹೊಟ್ಟೆಕಡತ ಮುಂತಾದ ಬೇನೆಯುವರೂ ಅಲ್ಲಿಗೆ ಬಂದು ಅವಳು ಕೊಟ್ಟ ತೀರ್ಥವನ್ನು ಸೇವಿಸಿ ವಾಸಿಯಾಗುತ್ತಿದ್ದರು. "ನಿನಗೆ ಒಳಿತಾಗುವದು" "ನಿನ್ನ ಇಚ್ಛೆ ಕೈಗೂಡುವದು" ಎಂದು ಆ ಪುಣ್ಯಶೀಲೆಯು ಯಾರಿಗಾದರೂ ಹೇಳಿದ್ದರೆ ಅದರಂತೆಯೇ ಆಗುತ್ತಿತ್ತೆಂದು ಜನರು ಹೇಳುತ್ತಾರೆ. ಅನಸೂಯೆ ಅರುಂಧತಿ ಲೋಪಾಮುದ್ರೆ ಸಾವಿತ್ರಿ ಮುಂತಾದ ಮಹಾಸತಿಯರು ಪೂರ್ವಕಾಲದಲ್ಲಿ ತೋರಿಸಿದ ಮಾಹಾತ್ಮ್ಯಗಳು ಕಟ್ಟುಕಥೆಯೆಂದು ಸದ್ಗುಣಗಳ ಪ್ರಭಾವಕ್ಕೆ ಪರಕೀಯರಾದ ಜನರು ಹೇಳುತ್ತಿರುವರು. ಅಂಥವರು ನರಗುಂದದ ಸಾವಿತ್ರೀದೇವಿಯ ನಿನ್ನೆಮೊನ್ನಿನ ಪ್ರತ್ಯಕ್ಷವಾದ ಉದಾಹರಣವನ್ನು ಕಂಡು ಬುದ್ಧಿಗಲಿಯಲಿ. ಇಂಥ

ಅತ್ಯುಚ್ಚವಾದ ಸುವ್ರತೆಯರು ನಮ್ಮ ಆರ್ಯಭೂಮಿಯಲ್ಲಿ ಮಾತ್ರ ಜನಿಸಿದ ರೆಂದೂ ಇನ್ನಾದರೂ ಜನಿಸಿದರೆ ಆರ್ಯಭೂಮಿಯಲ್ಲಿಯೇ ಜನಿಸುವರೆಂದೂ ನಮ್ಮ ವಾಚಕರು ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದು.

"ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿ" ಎಂಬಂತೆ ನರಗುಂದದ ಬಾಬಾಸಾಹೇಬನು ಮನಃಪೂರ್ವಕರಾದ ದುರ್ಜನರ ದುರ್ಬೋಧನಕ್ಕೆ ಕಿವಿಗೊಟ್ಟು ಇಂಗ್ಲಿಶ್ ಸರಕಾರದ ಮೇಲೆ ಬಂಡುಮಾಡಿದನು. ಬಾಬಾಸಾಹೇಬನ ಕ್ಷುದ್ರವಾದ ಸಂಸ್ಥಾನವೆಷ್ಟು ಮಾತ್ರದ್ದು, ಅವನ ಬಲವೇನು ಸುಟ್ಟಿತು. ಕತ್ತಿ ತುಬಾಕಿಗಳ ಉಪಯೋಗವನ್ನರಿಯದವರೂ ಸಮರವನ್ನು ಕಣ್ಣಿಲೆ ನೋಡದವರೂ ಆದ ನೂರಾರು ಜನ ರೆಂಟೆಯ ಬಂಟರನ್ನು ಕೂಡಿಸಿಕೊಂಡು ಅವಿಚಾರಿಯೂ ಮೂರ್ಖನೂ ಆದ ಬಾಬಾಸಾಹೇಬನು ಬಲಾಢ್ಯರಾದ ಇಂಗ್ಲಿಶ್ ಸರಕಾರದವರ ಮೇಲೆ ಬಂಡು ಮಾಡಹೋದರೆ ಅದೆಲ್ಲಿಗೆ ಮುಟ್ಟುವದು? ಒಂದು ದಿನ ಒಪ್ಪತ್ತಿನಲ್ಲಿ ಬಾಬಾಸಾಹೇಬನ ಬಂಡು ಮುರಿದು ಹೋಗಿ ಅವನ ಸಂಸ್ಥಾನವು ಡಬ್ಬಬಿದ್ದು ಹೋಯಿತು. (ಕಾಲಯುಕ್ತ ಸಂವತ್ಸರದ ಜ್ಯೇಷ್ಠ ಶು. ೧೦ ಮಂಗಳವಾರ.)

ವಿಜಯಿಯಾದ ಇಂಗ್ಲಿಶ್ ಸೇನಾಧೀಶನು, ನರಗುಂದ ಗ್ರಾಮವನ್ನು ಸುಲಿಯುಬಹುದೆಂದು ತನ್ನ ಸೇನೆಗೆ ಅಪ್ಪಣೆಕೊಟ್ಟ ಮೇರಿಗೆ ಮರುದಿವಸ ಬುಧವಾರ ಪ್ರಾತಃಕಾಲದಲ್ಲಿಯೇ ಉದ್ರಿಕ್ತರಾದ ಆ ಸೈನಿಕರು ಕೇಕೆ ಹೊಡೆಯುತ್ತ ಊರಲ್ಲಿ ಹೊಕ್ಕರು. ಊರ ಅಗಸೆಯ ಬಾಗಿಲದಲ್ಲಿ ದೊಡ್ಡದೊಂದು ಆನೆಯು ಅಡ್ಡಾಗಿ ನಿಂತಿತ್ತು. ಗುಂಡುಗಳ ಕಡಾಟಕ್ಕೂ ಬರ್ಚಿಗಳ ಚುಚ್ಚುವಿಕೆಗೂ ಅಂಜಿ ಸಜೀವವಾಗಿರುವ ಆ ಮಾಂಸದ ಪರ್ವತವು ಹಿಂತಿರುಗಿ ಊರಲ್ಲಿ ಹೊಕ್ಕು, ಸೈನಿಕರ ಹಾವಳಿಗೆ ಭೀತಿಗೊಂಡು ಸತ್ತೆ ಕೆಟ್ಟೆನೆಂದು ಓಡಾಡುತ್ತಿರುವ ಗ್ರಾಮವಾಸಿಗಳನ್ನು ತುಳಿಯುತ್ತ ಹಾಃಹಾಃಕಾರವನ್ನೆಬ್ಬಿಸಿಬಿಟ್ಟಿತು.

ಇಂಗ್ಲಿಶ್ ಸೈನಿಕರು ಊರಲ್ಲಿ ಸೇರಿದವರೇ ನೆಟ್ಟಗೆ ಶ್ರೀವೆಂಕಟೇಶನ ಗುಡಿಗೆ ಬಂದರು. ಪೂಜಾರಿಯು ದೇವರ ಅರ್ಚೆಯನ್ನು ನಡಿಸಿದ್ದನು. ಅಶಿಕ್ಷಿತರಾದ ಸೈನಿಕರು ವೆಂಕಟೇಶನ ಮೂರ್ತಿಯ ಮೇಲೆ ಗುಂಡುಹಾರಿಸಿ ಆ ಮೂರ್ತಿಯನ್ನು ಒಡೆದುಹಾಕಿದರು. ಗುಡಿಯಲ್ಲಿ ಇದ್ದದ್ದು ಬಿದ್ದದ್ದನ್ನೆಲ್ಲ

ಸುಲುಕೊಂಡರು. ಬಳಿಕಲಾ ಸೈನಿಕರು ಊರ ಜನರ ಮನೆಮನೆ ಹೊಕ್ಕು ಸುಲಿಗೆಯನ್ನು ನಡಿಸಿದನು. ಅರ್ಥಹಾನಿ ಮಾನಹಾನಿ ಧರ್ಮಹಾನಿ ಪ್ರಾಣಹಾನಿಗಳು ಒದಗಿಬಂದಾಗ, ಪಾಪ, ಅಲ್ಲಿಯ ಜನರ ಮನಸ್ಸಿನ ಸ್ಥಿತಿ ಏನಾಗಿರಬೇಡ! ಎದೆಯೊಡೆದು ಕೈಕಾಲುಗಳಲ್ಲಿಯ ನಾಡಿಗಳು ಸತ್ತಂತಾಗಿ ಆ ಜನರು ಅಲ್ಲಲ್ಲಿ ಪ್ರೇತಪ್ರಾಯರಾಗಿ ಬಿದ್ದುಕೊಂಡಿದ್ದರು. ತನ್ನ ಮನೆಯಲ್ಲಿಯ ವಸ್ತುವಡವೆಗಳುಳಿದರೆ ಶ್ರೀ ವೆಂಕಟೇಶನಿಗೆ ಟೆಂಕಿಯ ಮುಡುಪು ಕೊಡುವೆನೆಂದು ಕೃಪಣನಾದ ಕೋಮಟಿಗನು ಮನಸ್ಸಿನಲ್ಲಿಯೇ ಬೇಡಿಕೊಳ್ಳುತ್ತಿದ್ದನು. ಏನು ಹೋದರೂ ತನ್ನ ಜನಿವಾರವೊಂದುಳಿಯಲೆಂದು ಚಿಂತಿಸಿ ಸಾಧುಭಾವನಾದ ಬ್ರಾಹ್ಮಣನೋರ್ವನು ತನ್ನ ಯಜ್ಞೋಪವೀತವನ್ನು ಟೊಂಕದಲ್ಲಿಯ ಪಂಚೆಯಲ್ಲಿ ಅಡಗಿಸಿಟ್ಟು, ವೆಂಕಟೇಶಸ್ತೋತ್ರವನ್ನು ಆರಂಭದಿಂದ **संग्रामे रिपुसंक**ಟೇದ ವರೆಗೆ ಕಣ್ಣುಮುಚ್ಚಿ ಪಠಿಸುವಷ್ಟರಲ್ಲಿ, ಸೋಲ್ಜರನೊಬ್ಬನು ಆ ಬಡಬ್ರಾಹ್ಮಣನ ಬೆನ್ನುಮೇಲೆ ಒಳಿತಾಗಿ ಗುದ್ದಿ ಅವನ ಮನೆಯಲ್ಲಿದ್ದ ವಸ್ತುಗಳನ್ನೆಲ್ಲ ಎತ್ತಿಕೊಂಡು ನಡೆದನು. ಮತ್ತೊಬ್ಬರ ಮನೆಯಲ್ಲಿಯ ಮಡಿವಸ್ತ್ರಗಳ ಮರೆಯನ್ನು ಹಾರಿಹೊಡೆದು ಮುಸಲ್ಮಾನನಾದ ಸೈನಿಕನೊಬ್ಬನು ಅಲ್ಲಿಯ ದೇವರಮನೆ ಹೊಕ್ಕು ದೇವರ ಪೆಟ್ಟಿಗೆ ದೊಡ್ಡದೇವರ ಪೆಟ್ಟಿಗೆಗಳನ್ನು ಬಿಚ್ಚಿಬಿಚ್ಚಿ ನೋಡಿದನು. ಜಂಗಮರ ಮಠವನ್ನು ಹೊಕ್ಕು ಅಡ್ಡಾಡಿ ನೋಡಿ ಹೋಗುವಾಗ ಸಿಪಾಯಿಯೊಬ್ಬನು ತರುಣಿಯಾದ ಶರಣಮ್ಮನ ಮುಖವನ್ನು ವಿನೋದಕ್ಕಾಗಿ ಚುಂಬಿಸಿದ್ದರೆ ಆ ದುರಾತ್ಮನನ್ನು ದಂಡಿಸುವವರಾರು? ಪಟ್ಟಣಸೆಟ್ಟಿಯು ತನ್ನ ಮನೆಯಲ್ಲಿದ್ದ ಮುತ್ತು ಬಂಗಾರಗಳನ್ನು ಕಟ್ಟಿಕೊಂಡು ಪಾರಾಗಿ ಹೋಗಬೇಕೆಂದು ಮಾಳಿಗೆಯನ್ನೇರಿರಲು ಸೈನಿಕನೊಬ್ಬನು ಅವನನ್ನು ಹಿಡಿದು "ಕಳ್ಳನೆ, ನಮ್ಮನ್ನು ವಂಚಿಸಬೇಕೆಂದು ಮಾಡಿದ್ದಿಯಾ?" ಎಂದು ನುಡಿದು ಆ ಅಪರಾಧಕ್ಕಾಗಿ ಅವನು ಆ ಸೆಟ್ಟಿಯನ್ನು ಒಳಿತಾಗಿ ತಳಿಸಿದನು. ಕಳ್ಳನಾರು? ಸೆಟ್ಟಿಯೋ? ದುಷ್ಕರ್ಮ! ಬಾವಲಿಗಾಗಿ ಸೈನಿಕರು ಪುರುಷರ ಕಿವಿಗಳನ್ನು ಹರಿದರು; ನತ್ತುಗಳಿಗಾಗಿ ಹೆಣ್ಣುಮಕ್ಕಳ ಮೂಗುಗಳನ್ನು ಹರಿದರು. ತಮಗೆ ಬೇಕಾಗದಿದ್ದ ಕಾಳುಕಡಿಗಳನ್ನು ಆ ಮೂಢರು ನೆಲದ ಪಾಲು ಮಾಡಿ ಹೋಗಬೇಕೆ? ಭಾಂಡಬಡಕಲುಗಳನ್ನು ಈಡಾಡಿ ಒಡೆದರು. ಅರಿವೆ-ಅಂಚಡಿಗಳಿಗೆ

ಬೆಂಕಿಹಚ್ಚಿದರು. ಸುಲಿಗೆಯೇ ಇದು. ಯಾರಿಗೆ ದೋಷವನ್ನಿಡುವಿರಿ ? ತನ್ನ ಅಚಾತುರ್ಯದ ಮೂಲಕವಾಗಿ ಪ್ರಜರಿಗೆ ಇಂಥ ವ್ಯಸನವನ್ನು ತಂದಿಟ್ಟ ಬಾಬಾಸಾಹೇಬನೇ ದೋಷಿಯು; ರಾಜಾ ಕಾಲಸ್ಯ ಕಾರಣಮ್.

ಸುಲಿಗೆಯು ಗೊಂದಲವು ಶಹರಕ್ಕೆ ಬಂದಿರುವಾಗ ಬಾಬಾಸಾಹೇಬನ ಮನೆಯ ಹೆಂಗಸರನ್ನು ಬಂದಿಗಳನ್ನಾಗಿ ಮಾಡಿತರಬೇಕೆಂದು ಸೇನಾಧಿಕಾರಿಯ ಅಪ್ಪಣೆಯಾಯಿತು. ಕೇಳುವದೇನು ? ಹೂಲಿಯು ಅರಮನೆಯ ಕಡೆಗೆ ಮತ್ತೆ ನಡೆದಿತು. ಬಾಬಾಸಾಹೇಬನ ಪತ್ನಿಯಾದ ಸಾವಿತ್ರೀಬಾಯಿಯನ್ನೂ ಅವನ ಮಲತಾಯಿಯಾದ ಯಮುನಾಬಾಯಿಯನ್ನೂ ಹಿಡಿತಂದುಕೊಟ್ಟವರಿಗೆ ಇನಾಮು ಸಿಕ್ಕುವದಿತ್ತಾದ ಕಾರಣ ಸೈನಿಕರು ಅರಮನೆಯನ್ನು ಬಹುಪರಿಯಾಗಿ ಶೋಧಿಸಿ ನೋಡಿದರು. ಆ ಹೆಣ್ಣುಮಕ್ಕಳು ಸಿಕ್ಕಲೇ ಇಲ್ಲ. ರಾಜನ ಕಾರಭಾರಿ ಪುರೋಹಿತ ಆಶ್ರಿತ ಮುಂತಾದವರ ಮನೆಗಳನ್ನು ಅವರು ಅಗಿದು ನೋಡಿದರು. ಆ ಸ್ತ್ರೀಯರೆಲ್ಲಿಯೂ ಸಿಕ್ಕಲಿಲ್ಲ. ಆ ರಾಜಸ್ತ್ರೀಯರನ್ನು ಹಿಡಿದು ಮಾನ ತೆಗೆದುಕೊಳ್ಳಬೇಕೆಂಬ ಆಗ್ರಹವು ಇಂಗ್ಲಿಶ್ ಅಧಿಕಾರಿಗಿಲ್ಲದಿದ್ದರೂ ಸ್ವಾಮಿದ್ರೋಹಿಗಳೂ ಉಂಡಮನೆಯ ಗಳಗಳನ್ನೆಣಿಸುವವರೂ ಆದ ನರಾಧಮರಾದ ಬ್ರಾಹ್ಮಣರಿಗೆ ಅಂಥ ಆಗ್ರಹವು ಅಧಿಕವಾಗಿತ್ತು. ಆದರೂ ಆ ಪಾಪಿಗಳ ಕೈಗೆ ಆ ಪುಣ್ಯಾತ್ಮೆಯರು ಸಿಕ್ಕಲೇ ಇಲ್ಲ.

* * * *

ಮಂಗಳವಾರ ಮಧ್ಯರಾತ್ರಿಯ ಸುಮಾರಕ್ಕೆ ಯಾರೋ ಇಬ್ಬರು ಕಂಬಳಿಯ ಮುಸುಗಿಟ್ಟುಕೊಂಡು ನರಗುಂದದಿಂದ ದಕ್ಷಿಣಾಭಿಮುಖಿಗಳಾಗಿ ನಡೆದಿದ್ದರು. ಬೆಳದಿಂಗಳು ಮುಳುಗಿಹೋಗಿದೆ; ಜನರು ಹೋಗಿಬರುವ ದಾರಿಯಲ್ಲಿಯೂ ಕಾಣಲೊಲ್ಲದು. ಆ ಪ್ರಯಾಣಸ್ಥರು ಬಹು ಕಷ್ಟದೊಂದಿಗೆ ನಡೆದಿದ್ದರು. ಯಾರವರು ? ಎಲ್ಲಿಗೆ ನಡೆದಿರುವರು ? ಅವರ ಆಕೃತಿಗಳನ್ನು ನೋಡಿದರೆ ಅವರು ಹೆಣ್ಣುಮಕ್ಕಳಾಗಿ ತೋರಿದರು. ಅಕೋ ಅಲ್ಲಿ ನೋಡಿರಿ; ಓರ್ವಳು ದೊಡ್ಡದೊಂದು ಮುಳ್ಳುಪೆಟ್ಟವನ್ನೆಡವಿ ಧಡಕ್ಕನೆ ಬಿದ್ದಳು. ಮತ್ತೋರ್ವಳು ಅವಳನ್ನು ಎತ್ತಿಕೊಳ್ಳಲು ಯತ್ನಮಾಡುತ್ತಿರುವಳು. ಬಿದ್ದವಳು ಸುವಾಸಿನಿಯಾದ ಸ್ತ್ರೀಯು. ಅವಳುಟ್ಟಿರುವ ಜರದ ದುಕೂಲದ

ಮೇಲಿಂದಲೂ ಮೈಮೇಲಿನ ರತ್ನಖಚಿತವಾದ ಆಭರಣಗಳ ಮೇಲಿಂದಲೂ ಅವಳು ಘನವಂತನೊರ್ವನ ಹೆಂಡತಿಯಾಗಿರಲಿಕ್ಕೆ ಸಾಕು. ಮತ್ತೊರ್ವಳು ಕೆಂಪು ಸೀರೆಯುನ್ನುಟ್ಟವಳು ಬ್ರಾಹ್ಮಣರ ವಿಧವೆಯು. ಅನನುಭೂತವಾದ ಶ್ರಮಕ್ಕಾಗಿಯೂ ಹೊಟ್ಟೆಯೊಳಗಿನ ದುಃಖಕ್ಕಾಗಿಯೂ ಆ ಕೋಮಲೆಯರ ಕುತ್ತಿಗೆ ಶಿರಬಿಗಿದು ಬಾಯೊಳಗಿಂದ ಶಬ್ದಗಳು ಚನ್ನಾಗಿ ಹೊರಡಲೊಲ್ಲವು.

"ಸಾವಿತ್ರೀಬಾಯಿ, ಮಗುವೆ, ಎಂಥ ಭರದಿಂದ ಮುಳ್ಳುಕೊಂಪೆಯನ್ನೆಡವಿದಿ ಅಮ್ಮಾ" ಎಂದು ನುಡಿದು ಆ ಮುದುಕೆಯು ತಾನೂ ಅಲ್ಲಿ ಕುಳಿತು ಸಾವಿತ್ರೀಬಾಯಿಯ ಕಾಲುಹಿಡಿದು ನೋಡಿದಳು.

"ಕೆಟ್ಟ ಕಗ್ಗತ್ತಲೆ. ನನ್ನ ಕಣ್ಣಿಗೆ ಈ ಮುಳ್ಳು ಕಾಣಿಸಲೇ ಇಲ್ಲ. ಕಾಲುತುಂಬ ಮುಳ್ಳು ಮುರಿದವು."

"ಅಯ್ಯೋ! ಕಲ್ಲುಮುಂಡೆಗಳನ್ನು ತುಳಿದು ತುಳಿದು ನಿನ್ನೀ ಕೋಮಲವಾದ ಪಾದಗಳು ಬಾತು ಹುಣ್ಣಾಗಿಹೋಗಿವೆ. ಅಂಥದರಲ್ಲಿ ಈ ಮುಳ್ಳುಗಳು ನಟ್ಟಿದ್ದರಿಂದ ನಿನ್ನ ಕಾಲೆಲ್ಲ ರಕ್ತಮಯವಾಗಿಹೋಗಿದೆ!" ಎಂದು ಸಾವಿತ್ರೀಬಾಯಿಯ ಅತ್ತೆಯು ಸೊಸೆಯ ಕಾಲುಹಿಡಿದು ನೋಡಿ ನಿಟ್ಟುಸುರು ಬಿಟ್ಟಳು.

"ಅತ್ತೆಯವರೆ, ಹಿರಿಯ ಮನುಷ್ಯರಾದ ನೀವು ನನ್ನ ಕಾಲುಹಿಡಿಯಬಹುದೆ? ಬಿಡಿರಿ; ನಾನೇ ಮುಳ್ಳುಗಳನ್ನು ಕಿತ್ತಿ ತೆಗೆಯುತ್ತೇನೆ." ಎಂದು ಸಾವಿತ್ರೀಬಾಯಿಯು ಆರ್ತಸ್ವರದಿಂದ ನುಡಿದಳು.

"ಇಂಥ ದುರ್ಘಟವಾದ ಪ್ರಸಂಗವು ಬಂದೊದಗಿದಾಗ ಹರಿ-ಕಿರಿತನಗಳನ್ನು ಕಟ್ಟಿಕೊಂಡೇನು ಪ್ರಯೋಜನ? ನನ್ನ ಸೊಸೆಯೇ, ನಿನ್ನ ಕಾಲಲ್ಲಿಯ ಮುಳ್ಳು ತೆಗೆಯಗೊಡು. ಇಲ್ಲಿ ನಿನಗೆ ಉಪಚಾರವನ್ನು ಮಾಡುವವರು ಯಾರಿದ್ದಾರೆ?"

"ಅಮ್ಮಾ, ಮುಳ್ಳುಗಳೆಲ್ಲ ಮುರಿದುಹೋಗಿವೆ. ತೆಗೆಯಲಿಕ್ಕೆ ಬರುವಂತಿಲ್ಲ. ಮೇಲಾಗಿ ಇಲ್ಲಿ ಹೊತ್ತುಗಳೆಯುವಂತೆಯೂ ಇಲ್ಲ. ಹೇಗಾದರೂ ಮಾಡಿ ನಾನು ನಡಿಯುವೆನು. ಏಳಿರಿ."

"ಹೇಗೆ ನಡೆಯುವಿ ನನ್ನ ಗೌರೀ! ದೈವವೇ, ನಮಗೆಂಥ ಕೆಟ್ಟ ಕಾಲವನ್ನು ತಂದಿಟ್ಟೆ? ಸಾವಿತ್ರೀಬಾಯಿ, ಒಂದು ಕ್ಷಣಹೊತ್ತಾದರೂ

ವಿಶ್ರಾಂತಿಯನ್ನು ಪಡೆ." ಎಂದು ಅತ್ತೆಯಾದ ಯಮುನಾಬಾಯಿಯು ಸೊಸೆಯ ಮೈದಡವಿ ಕಣ್ಣು ತುಂಬಾ ನೀರು ತಂದು ಬಿಕ್ಕಿಬಿಕ್ಕಿ ಅತ್ತಳು.

"ಅಮ್ಮಾ, ಯಮಪುರಿಯ ಮಾರ್ಗವನ್ನು ಹಿಡಿದು ನಡೆದವರಾದ ನಮಗಿನ್ನು ಮಧ್ಯದಲ್ಲಿ ವಿಶ್ರಾಂತಿಯ ಅಪೇಕ್ಷೆಯೇಕೆ? ಅಮಂಗಲವಾದ ದೇಹವು ಛಿನ್ನವಾದರೇನು, ವಿಚ್ಛಿನ್ನವಾದರೇನು? ಕಾಲು ಸೀಳಿ ರಕ್ತ ಸುರಿದರೇನು; ತಲೆಯೊಡೆದು ಜೋಲಿಯಾದರೇನು? ಅತ್ತೆಯವರೇ, ನಾವಿನ್ನು ಅಲ್ಲಲ್ಲಿ ಕುಳಿತು ಕಾಲಕಳೆದರೆ ಪ್ರಾಣಕ್ಕಿಂತಲೂ ಅಸಹ್ಯವಾಗಿರುವ ಅಮರ್ಯಾದೆಯು ನಮ್ಮನ್ನು ಆಕಳಿಸಿಕೊಳ್ಳದೆ ಬಿಡದು. ಶತ್ರುಗಳು ನಮ್ಮನ್ನು ಹುಡುಕುತ್ತಿರುವರಾದೀತು. ಅವರ ಕೈಗೆ ನಾವು ಸಿಕ್ಕಿದೆವಾದರೆ ನಮ್ಮ ಕೀರ್ತಿ ಕಲೇವರಗಳೆರಡೂ ಕೆಟ್ಟು ಹಾಳಾಗಿಹೋಗುವವು ಏಳಿರಿ!" ಎಂದು ನುಡಿದು ನರಗುಂದದ ರಾಣಿಯಾದ ಸಾವಿತ್ರೀದೇವಿಯು ವನಚರರಂತೆ ಅಡವಿಗೀಡಾಗಿ ನಡೆಯಲಾರಂಭಿಸಿದಳು.

"ಸಾವಿತ್ರೀ, ಪುರಾಣದಲ್ಲಿಯ ಸಾವಿತ್ರಿಗೆ ಮಿಗಿಲಾದ ನನ್ನ ಸಾವಿತ್ರೀ, ನಿನ್ನೀ ಪುಣ್ಯದ ದೇಹವು ಅಮಂಗಲವಾದದ್ದೆಂದು ಸರ್ವಥಾ ಹೇಳಬೇಡ ಕಂಡಿಯಾ. ಪತಿವ್ರತಾಮಣಿಯೇ, ಮತ್ತಾರಿಗೋಸ್ಕರವಾಗಿರದಿದ್ದರೂ ನಿನಗೋಸ್ಕರವಾಗಿಯಾದರೂ ಶ್ರೀವೆಂಕಟೇಶನು ನಮಗಿನ್ನಾದರೂ ಸುದಿವಸಗಳನ್ನು ತೋರದೆ ಇರನು."

"ಯಮುನಾಬಾಯೀಸಾಹೇಬ, ನಿಮ್ಮ ಹುಚ್ಚುತನವಿನ್ನೆಂದು ಹೋಗಬೇಕು? ಪ್ರಾಣ ಹೋದ ಬಳಿಕ ವೈದ್ಯನ ಚಿಕಿತ್ಸೆಯಿಂದೇನಾಗುವದು? ಯಜಮಾನರ ಪ್ರಾಣಕ್ಕೆಯೇ ಸಂಕಟವು ಬಂದೊದಗಿದೆಯಂತೆ! ಇನ್ನು ನಮಗೆ ಸುದಿವಸಗಳನ್ನು ತೋರುವದು ವೆಂಕಟೇಶನ ಕೈಯಲ್ಲಿಯೂ ಉಳಿದಿಲ್ಲ. ಸುಮ್ಮನೆ ಹಾದೀ ಹಿಡಿಯಿರಿ." ಎಂದು ಸಾವಿತ್ರೀಬಾಯಿಯು ನಿಶ್ಚಯದ ಮಾತುಗಳನ್ನಾಡಿದರೂ ಆವಳ ಹೊಟ್ಟೆಯಲ್ಲಿ ದುಃಖವು ಮೀರಿ ಬಂದಿತು ಪತಿಯು ನೆನಪಾದ ಕೂಡಲೆ ಹೊಟ್ಟೆಯಲ್ಲಿ ಕಾಡ್ಗಿಚ್ಚು ಹೊಕ್ಕಂತಾಗಿ ಆ ಸತಿಯು ದೊಡ್ಡ ದನಿ ತೆಗೆದು ಅತ್ತಳು.

ಯಮುನಾಬಾಯಿಯು ಸೊಸೆಯನ್ನು ತಬ್ಬಿಕೊಂಡು ತಾನೂ ಗೋಳಿಟ್ಟು ಅತ್ತು "ಪ್ರಜಾವತ್ಸಲೆಯಾದ ದೇವಿಯೆ, ನಿನಗಿಷ್ಟು ದುಃಖ

ಮಾಡೀತೆಂದು ನಾನು ಕನಸಿನಲ್ಲಿಯೂ ಕಂಡಿಲ್ಲ. ಭಕ್ತಾಭಿಮಾನಿಯಾದ ನಮ್ಮ ವೆಂಕಟೇಶನು ಹೀಗೆ ನಡುನೀರಲ್ಲಿ ಕೈಬಿಡಲಿಕ್ಕಿಲ್ಲ. ನನ್ನ ಬಾಬಾನಿಗೆ ಕಡೆಗೆ ವಿಜಯವಾಗುವದೆಂದು ರಾಜಜೋಯಿಸರು ಕೂಡ ಹೇಳಿರುವರು." ಎಂದು ಸಾವಿತ್ರೀಬಾಯಿಗೆ ಸಮಾಧಾನ ಹೇಳಲು ಯತ್ನಿಸಿದಳು.

"ಹುಚ್ಚು ಮಾತಿದು! ನವಗ್ರಹಗಳೂ ಜೋಯಿಸರೂ ನಮಗೆ ವಿಜಯವನ್ನು ಗಳಿಸಿಕೊಡಬಲ್ಲರಾದರೆ ರಾಜರಿಗೆ ನೀತಿಶಾಸ್ತ್ರಗಳೇಕೆ ಬೇಕು? ಚತುರೋಪಾಯ ಸೇನೆ ಸೇನಾಪತಿಗಳಿಂದೇನು ಪ್ರಯೋಜನ? ಜೋಯಿಸರ ಮಾತು ಕೇಳಿದಲ್ಲಿಯೇ ನಮ್ಮ ರಾಜ್ಯವು ಕ್ಷಣಾರ್ಧದಲ್ಲಿ ಕರ್ಪೂರದಂತೆ ಸುಟ್ಟುಹೋಗಿ ಅದರ ಬೂದಿ ಕೂಡ ಉಳಿಯಲಿಲ್ಲ ನಡೆಯಿರಿನ್ನು, ಹಾದೀ ಹಿಡಿಯೋಣ."

ಮುಂದೆ ಕೆಲಮಟ್ಟಿಗೆ ಹಾದೀ ನಡೆದ ಬಳಿಕ ಯಮುನಾಬಾಯಿಯು ಮತ್ತೆ ತನ್ನ ಸೊಸೆಯನ್ನು ಕುರಿತು "ಸಾವಿತ್ರೀಬಾಯಿ, ಇಷ್ಟು ಬೇಗನೆ ನಾವು ಆತ್ಮಹತ್ಯೆಯನ್ನು ಮಾಡಿಕೊಳ್ಳುವದು ಪಕ್ವವಿಚಾರದ ಮಾತಾಗಲಿಕ್ಕಿಲ್ಲ. ಪುರುಷರ ಭಾಗ್ಯವೆಂತಿರುವದೆಂಬ ಮಾತು ದೇವತೆಗಳಿಗೆ ಕೂಡ ತಿಳಿಯದ ಮಾತಂತೆ. ದೇವರ ಕೃಪೆಯಿಂದ ನಮ್ಮ ಬಾಬಾನಿಗೆ ವಿಜಯಪ್ರಾಪ್ತಿಯಾಗಿ ಅವನು ನರಗುಂದಕ್ಕೆ ರಾಜನಾಗಿ ಬಂದಾಗ, ನೀನು ಮಡಿದುಹೋದ ವಾರ್ತೆಯು ಅವನಿಗೆ ತಿಳಿದರೆ ಎಷ್ಟು ವ್ಯಸನವಾಗಬೇಡ!"

"ಅಮ್ಮಾ, ನಿಮಗೇಕೋ ದುರ್ಬುದ್ಧಿ ಹುಟ್ಟಿದಂತೆ ಕಾಣುತ್ತದೆ. ನಮ್ಮ ಯಜಮಾನರು ಅಡಗಿರುವ ಸ್ಥಳವನ್ನು ಗೃಹಭೇದಿಯಾದ ಆ ನರಾಧಮನು ನಮ್ಮ ಶತ್ರುಗಳಿಗೆ ತೋರಿಸಿಕೊಡಲಿಕ್ಕೆ ಹೊರಟಿದ್ದಾನಂತೆ. ಸಿಕ್ಕರೆ ಶತ್ರುಗಳು ಅವರ ಪ್ರಾಣವನ್ನು ತೆಗೆದುಕೊಳ್ಳದೆ ಬಿಡರು. ಅದನ್ನು ಸಂಭ್ರಮವನ್ನು ನೀವು ಕಣ್ಣು ಮುಟ್ಟಿ ನೋಡಿಯೇಬಿಡಬೇಕೆನ್ನುವಿರೇನು?" ಎಂದು ಸಾವಿತ್ರೀಬಾಯಿಯು ತಿರಸ್ಕಾರಪೂರ್ವಕ ನುಡಿದಳು.

ಆ ಮಾತು ಕೇಳಿ ಯಮುನಾಬಾಯಿಯ ಹೃದಯದಲ್ಲಿ ಭೀತಿ-ದುಃಖಗಳು ಒಮ್ಮೆಲೆ ಭರದಿಂದ ಹೊಕ್ಕವು ಅವಳು ಥರಥರನೆ ನಡುಗಿ ನೆಲಕ್ಕೆ ಕೂಡ್ರಬಿದ್ದಳು. ಕಟ್ಟಡವಿಯ ನಟ್ಟನಡುವೆ ಕುಳಿತು ಅವಳು ಗಟ್ಟಿಯಾಗಿ ಅಳುತ್ತಿರಲು, ಅದು ಅರಣ್ಯರೋದನವೆಂದು ನಾವು ಹೇಳಿದರೆ ಹೆಚ್ಚಿನದೇನಾಯಿತು?

ಐಹಿಕನಾದ ಸಕಲ ಬಂಧನಗಳನ್ನು ದೃಢನಿಶ್ಚಯವೆಂಬ ಶಸ್ತ್ರದಿಂದ ಹರಿದು ಚಲ್ಲಿ ವಿಕಾರರಹಿತಳಾಗಿದ್ದ ಸಾವಿತ್ರೀಬಾಯಿಯು ತನ್ನ ಮೇಲೆ ಕಡುಕೊಂಡು ಬಿದ್ದಿದ್ದ ದುಃಖದ ಪರ್ವತವನ್ನು ತೃಣಪ್ರಾಯವಾಗಿ ಲೆಕ್ಕಿಸಿ ಧೈರ್ಯವನ್ನವಲಂಬಿಸಿ ಮಾರ್ಗಕ್ರಮಣವನ್ನು ಮಾಡಲಾರಂಭಿಸಿದಳು. ಆದರೂ ಮನಸ್ಸು ಎಷ್ಟು ಗಟ್ಟಿಯಾಗಿದ್ದರೇನು, ನಡೆಯಲು ಕಾಲುಗಳಲ್ಲಿ ತ್ರಾಣ ಬೇಡವೆ ? ಆ ಸಾಧ್ವಿಯು ಕೋಮಲವಾದ ಚರಣಕಮಲಗಳು ಕಲ್ಲುಮುಳ್ಳುಗಳ ಧಕ್ಕಡಿಗೆ ಛಿನ್ನ ವಿಚ್ಛಿನ್ನವಾಗಿಹೋಗಿದ್ದವು. ಹೆಜ್ಜೆಯಿಟ್ಟರೆ ಮೈತುಂಬ ಸಾವಿರ ಚೇಳುಗಳು ಕಡಿದಷ್ಟು ವೇದನೆಯು ಆ ಕೋಮಲಾಂಗಿಗೆ ಆಗುತ್ತಿತ್ತು. ಆ ಗರತಿ ಗಂಗಾದೇವಿಯು ಕಣ್ಣುಗಳಿಂದ ಅಶ್ರುಪ್ರವಾಹಗಳು ನಡೆದವು. "ಪರಮಾತ್ಮಾ, ಕೃಷ್ಣಾ, 'ಸುಖದುಃಖೇ ಸಮೇ ಕೃತ್ವಾ' ಎಂದು ಹೇಳುವಾಗ ನಿನಗೆ ಸುಲಭವಾಯಿತು. ಈ ದುಃಖವನ್ನು ಅನುಭವಿಸಲು ಬರಬಾರದೆ ? ಆಗಲಿ, ನಿನ್ನಿಚ್ಛೆ ! " ಎಂದವಳೇ ಆ ಸತಿಯು ತನ್ನ ಮೈಮೇಲಿನ ಶಾಲನ್ನು ಚರಚರನೆ ಸೀಳಿ ಪಟ್ಟಿಗಳನ್ನು ಮಾಡಿ ತನ್ನ ಪಾದಗಳಿಗೆ ಪಾದರಕ್ಷದಂತೆ ಸುತ್ತಿಕೊಂಡಳು. ಮುಂಚೆಗಿಂತ ಕಾಲೂರಿ ನಡೆಯಲು ಕೊಂಚ ಅನುಕೂಲವಾಯಿತು. ಅವಳು ಮುಂದಕ್ಕೆ ಹೆಜ್ಜೆಯನ್ನಿಟ್ಟಳು. ಸೊಸೆಯು ಕಷ್ಟವನ್ನು ನೋಡಿ ಅತ್ತೆಗೆ ಮಿತಿಮೀರಿದ ಖೇದವಾಯಿತು. ಅವಳು ದೇವರ ಹೆಸರಿಲೆ ಮಣ್ಣು ತೂರಿ ಹಾದೀ ಹಿಡಿದಳು. ಅವಿಕಾರಿಯಾದ ಪರಮಾತ್ಮನು ಆ ಮುದುಕೆಯ ಮಾತುಗಳನ್ನು ಹಚ್ಚಿಕೊಳ್ಳಲಿಲ್ಲ; ತನ್ನ ಮೈಮೇಲೆ ಅವಳು ತೂರಿದ ಮಣ್ಣನ್ನು ಜಾಡಿಸಿಕೊಳ್ಳಲೂ ಇಲ್ಲ; ತನ್ನ ಸಂಕಲ್ಪವನ್ನೂ ಬಿಡಲಿಲ್ಲ. ಕೊಣ್ಣೂರಿಗೆ ಹೋಗಬೇಕೆಂದು ಹೊರಟವರಾದ ಆ ಸ್ತ್ರೀಯರು ಹಾದೀ ತಪ್ಪಿ ಸಂಗಳವೆಂಬ ಗ್ರಾಮಕ್ಕೆ ಬಂದರು. ಆ ಊರ ಮುಂದೆ ಮಲಪ್ರಭಾ ನದಿಯು ಹರಿಯುತ್ತಿತ್ತು.

ಅವರು ಅಲ್ಲಿಗೆ ಬಂದಾಗ ಇನ್ನೂ ಮೂರು ನಾಲ್ಕು ಗಳಿಗೆ ರಾತ್ರಿಯುಳಿದಿತ್ತು. ಆ ಊರ ಹೆಣ್ಣುಮಕ್ಕಳು ಸುಸ್ವರವಾಗಿ ಹಾಡುತ್ತ ಧಾನ್ಯಗಳನ್ನು ಬೀಸುತ್ತಿದ್ದರು. ಅಲ್ಲಲ್ಲಿ ಕೋಳಿಗಳು ಒಳಿತಾಗಿ ಕೂಗಿ ಉದ್ಯಮಶೀಲರಾದ ಜನರನ್ನು ಆಲಸ್ಯಮಯವಾದ ನಿದ್ರಾವಸ್ಥೆಯಿಂದ ಎಚ್ಚರಗೊಳಿಸುತ್ತಿದ್ದವು. ಧಡಧಡನೆ ಹರಿಯುತ್ತಿರುವ ಮಲಪ್ರಭಾ ನದಿಯು ಜನರ

ಮೈ-ಕೈಗಳನ್ನೂ ಅರಿವೆ-ಅಂಚಡಿಗಳನ್ನೂ ನಿರ್ಮಲವಾಗಿ ತೊಳೆಯುವೆನು ಬನ್ನಿರೆಂದು ಕೂಗುವಳೋ ಎಂಬಂತೆ ಕಂಡಳು.

" ಸಾವಿತ್ರೀಬಾಯಿ, ನಾವು ಯಾವ ಊರಿಗೆ ಬಂದೆವು ? ಇದು ಕೊಣ್ಣೂರ ಗ್ರಾಮದಂತೆ ತೋರುವದಿಲ್ಲ " ಎಂದು ಯಮುನಾಬಾಯಿಯು ಕೇಳಿದಳು.

" ಇದು ಕೊಣ್ಣೂರಲ್ಲ; ನಮ್ಮ ತೋಟ ಮಾವಿನ ಗಿಡಗಳ ಗುಂಪುಗಳು ಕಾಣುವದಿಲ್ಲ. ಆದರೂ ಇಲ್ಲಿಗಿಂತ ಕೊಣ್ಣೂರಲ್ಲಿ ಏನು ಹೆಚ್ಚಿದೆ? ಇಲ್ಲಿಯೂ ಮಲಪ್ರಭಾಮಾತೆಯು ನಮ್ಮ ಕೊನೆಯ ಪ್ರಾರ್ಥನೆಯನ್ನು ಲಾಲಿಸಲು ಸಿದ್ಧಳಾಗಿಯೇ ಇರುವಳು. ಸಮಯವು ತೀರ ಸಮೀಪಿಸಿತು. ಐಹಿಕವಾದ ವಿಚಾರಗಳಿಗೆ ಇನ್ನೆಷ್ಟು ಮಾತ್ರವೂ ಆಸ್ಪದವನ್ನು ಕೊಡದೆ ಗಂಗಾಮಾತೆಯ ಉತ್ಸಂಗವನ್ನು ಆಶ್ರಯಿಸೋಣ. "

ಅವರೀರ್ವರೂ ನದಿಯ ತೀರಕ್ಕೆ ಬಂದರು. ಅಂದೆಯೇ ಸೋನೆ ಹೆಚ್ಚಾಗಿ ಬರುತ್ತಿರುವದರಿಂದ ಆ ಸ್ಥಳದಲ್ಲಿ ನೀರು ಆಳವಾಗಿತ್ತು. ಸಾವಿತ್ರೀಬಾಯಿಯು ಅದನ್ನು ನೋಡಿ ಒಂದು ಪ್ರಕಾರದ ವಿಲಕ್ಷಣವಾದ ಉತ್ಸಾಹವನ್ನು ತಳೆದು " ನೋಡಿದಿರಾ ಅತ್ತೆಯವರೆ, ಗಂಗಾಮಾತೆಯು ತನ್ನ ಉದರದಲ್ಲಿ ನಮಗೆ ಸ್ಥಳಕೊಡಬೇಕಾಗಿರುವದರಿಂದಲೇ ಹೇಗೆ ಉಕ್ಕೇರಿ ಬರುತ್ತಿರುವಳು ? ಬನ್ನಿರಿ, ಸ್ನಾನಮಾಡಿ ವೆಂಕಟೇಶನಿಗೆ ಕಡೆಯ ಪ್ರಣಾಮವನ್ನು ಮಾಡಿ ಈ ದುಃಖಸಾಗರವನ್ನು ದಾಟಿ ಹೋಗೋಣ " ಎಂದು ನುಡಿದು ಮಲಾಪಹಾರಿಣಿಯ ವಿಮಲವಾದ ಜಲದಲ್ಲಿ ತಾನು ಸ್ನಾನ ಮಾಡಿ ಅತ್ತೆಯ ಮೈ ತೊಳಿಸಿದಳು.

ಉತ್ತರಾಭಿಮುಖಿಯರಾಗಿ ನಿಂತು ಇಬ್ಬರೂ ನರಗುಂದದ ವೆಂಕಟೇಶನಿಗೆ ಪ್ರಣಾಮಮಾಡಿ ಗದ್ಗದಕಂಠೆಯರಾಗಿ ಕಣ್ಣೀರುತಂದು "ದೇವ-ದೇವೇಶ, ಇದೆಲ್ಲ ನಿನ್ನಿಚ್ಛೆಗೆ ಬಂದಿತಲ್ಲವೆ ? ಆಗಲಿ. ನಿನ್ನ ಪಾದಾರವಿಂದದ ಸೇವೆಯನ್ನು ನಮಗೆ ನಿರಂತರವಾಗಿ ಕೊಡು " ಎಂದು ಬೇಡಿಕೊಂಡರು.

ವೆಂಕಟೇಶನಿಗೆ ಪ್ರಣಾಮವಾದ ಬಳಿಕ ಸಾವಿತ್ರೀಬಾಯಿಯ ಹೃದಯವನ್ನೆಲ್ಲ ಬಾಬಾಸಾಹೇಬನ ಮೂರ್ತಿಯು ವ್ಯಾಪಿಸಿಕೊಂಡಿತು. ನಿರ್ಭರವಾದ ದುಃಖವು ಒಮ್ಮೆಲೆ ಒಟ್ಟರಿಸಿ ಬಂದಿತು. ದೊಡ್ಡ ದನಿ ತೆಗೆದು ಅವಳು

ಅತ್ತಳು. "ಪತಿರಾಜ, ಪತಿರಾಜ! ನಿಮ್ಮ ಪಾದಾರವಿಂದಗಳಿಗೆ ಈ ದೀನೆಯಾದ ದಾಸಿಯು ಪ್ರಣಾಮಮಾಡುತ್ತಾಳೆ, ಸ್ವೀಕರಿಸಬೇಕು. ತಮಗೂ ತಮ್ಮ ಸಂಸ್ಥಾನಕ್ಕೂ ದೊಡ್ಡದೊಂದು ವಿಪತ್ತು ಬಂದಿರುವ ಸಂಗತಿಯನ್ನು ನೆನೆದೇ ನಾನು ವ್ಯಸನಪಡುತ್ತೇನೆ. ಇಲ್ಲವಾದರೆ ತಮ್ಮ ಮೂರ್ತಿಯು ಧ್ಯಾನವಾದಾಗ ನನಗೆ ದುಃಖವಾಗುವ ಬಗೆ ಹೇಗೆ? ಹೋಗಿ ಬರುತ್ತೇನೆ, ಅಪ್ಪಣೆಯಿರಲಿ! ಪರಲೋಕದಲ್ಲಿ ತಮ್ಮ ಪಾದಾರವಿಂದಗಳ ಪ್ರವೇಶವಾಗುವದರೊಳಗಾಗಿಯೇ ದಾಸಿಯಾದ ನಾನು ಅಲ್ಲಿ ಸೇವೆಗೆ ಸಿದ್ಧಳಾಗಿರಬೇಕಲ್ಲವೆ?" ಎಂದು ನುಡಿದ ಸಾವಿತ್ರೀಬಾಯಿಯ ಕೈಕಾಲುಗಳು ಥರಥರನೆ ನಡುಗಿದವು. ಮೂರ್ಛೆ ಬಂದು ಅವಳಲ್ಲಿಯೇ ನೆಲಕ್ಕೆ ಬಿದ್ದಳು. ಯಮುನಾಬಾಯಿಯು ಸೊಸೆಯನ್ನೆತ್ತಿ ತಬ್ಬಿಕೊಂಡು ಅವಳ ಕಣ್ಣುಗಳನ್ನು ನೀರಿನಿಂದ ತೊಳೆದು ಅವಳನ್ನು ಎಚ್ಚರಿಸಿದಳು.

"ಸಾವಿತ್ರೀದೇವಿ, ಇನ್ನೇನು ಮಾಡತಕ್ಕದ್ದು ಹೇಳು. ನೀನು ವಿಚಾರಶೀಲಳು. ನಾವು ಆತ್ಮಹತ್ಯೆಯ ಪಾಪಕೃತ್ಯವನ್ನು ಮಾಡಿಸಾಯಬೇಕೆ?"

"ಇನ್ನೊಮ್ಮೆ ಸ್ನಾನ ಮಾಡೋಣ ಬನ್ನಿರಿ, ಆ ಮೇಲೆ ಹೇಳುವೆನು" ಎಂದು ಸಾವಿತ್ರೀದೇವಿಯು ಎದೆಮಟ್ಟಿಗೆ ನೀರು ಬರುವ ಸ್ಥಳಕ್ಕೆ ಬಂದಳು.

"ಇಲ್ಲಿ ನೀರು ಆಳವಾಗಿದೆ. ಇದಕ್ಕೂ ಒಂದು ಹೆಜ್ಜೆ ಮುಂದೆ ಹೋದರೆ ಮುಳುಗಿಳುಗುವೆವು" ಎಂದು ಯಮುನಾಬಾಯಿಯು ತಟ್ಟನೆ ನಿಂತು ನುಡಿದಳು.

"ಮುದಿಹುಚ್ಚಿ! ಇನ್ನೇತರ ಅಂಜಿಕೆ?" ಎಂದವಳೇ ಸಾವಿತ್ರೀದೇವಿಯು ಅತ್ತೆಯನ್ನು ತಬ್ಬಿಕೊಂಡು ಧುಡುಮ್ಮನೆ ನೀರಲ್ಲಿ ದುಮುಕಿದಳು.

ಹೋಯಿತು, ಮುಳುಗಿ ಹೋಯಿತು! ಅಲ್ಲಿ ನೋಡಿರಿ, ಭಗವಂತನು ಉಲ್ಲಾಸದಿಂದ ನಿರುಮಿಸಿದಂಥ ಮಕರಂದಮಯವಾದ ಕುಸುಮವು ಹೇಗೆ ನೀರಲ್ಲಿ ಅಕಸ್ಮಾತ್ತಾಗಿ ಮುಳುಗಿಹೋಯಿತು! ಅಂಥ ಸೌಂದರ್ಯ, ಅಂಥ ಕಾಂತಿ, ಅಂಥ ಕೋಮಲತೆ, ಅಂಥ ಪರಿಮಳಗಳಿಂದ ಯುತವಾದ ಕುಸುಮವು ಪ್ರಫುಲ್ಲಿತವಾಗಿ ತಲೆದೋರಿತೇಕೋ, ಹಾಗೆ ಅಕಸ್ಮಾತ್ತಾಗಿ ಅಡಗಿಹೋಯಿತೇಕೋ, ಅಗಾಧಲೀಲನಾದ ಭಗವಂತನೊಬ್ಬನಿಗೇ ಗೊತ್ತು!

---

# ವೀರಮಾತೆಯಾದ ದೇವಲದೇವಿ

ಈಗಿನ ಬುಂದೇಲಖಂಡದಲ್ಲಿ ಚಂದೇಲವಂಶದ ರಾಜರು ಪೂರ್ವಕಾಲದಲ್ಲಿ ಆಳುತ್ತಿದ್ದರು. ಅವರ ರಾಜಧಾನಿಯು 'ಮಹೋಬಾ' ಎಂಬ ಪಟ್ಟಣವಿದ್ದು, ಆ ರಾಜ್ಯಕ್ಕಾದರೂ ಮಹೋಬಾ ರಾಜ್ಯವೆಂಬ ಹೆಸರಿತ್ತು. ದಿಲ್ಲಿಯಲ್ಲಿ ಪೃಥ್ವೀರಾಜ ಚವ್ಹಾನನು ಆಳುತ್ತಿರುವಾಗ ಮಹೋಬಾದಲ್ಲಿ ಪುರಮಲ್ಲನೆಂಬ ರಾಜನಿದ್ದನು. ಪುರಮಲ್ಲನ ಪೂರ್ವಜರು ಉದಾರರೂ, ಐಶ್ವರ್ಯವಂತರೂ, ವೀರರೂ ಆದ ರಾಜರಾಗಿಹೋದರು. ಪುರಮಲ್ಲನಾದರೂ ತನ್ನ ರಾಜ್ಯದಲ್ಲಿಯ ವೀರರಾದ ಸರದಾರರ ಪುಣ್ಯದಿಂದ ಅನೇಕ ಯುದ್ಧಗಳಲ್ಲಿ ವಿಜಯವನ್ನು ಸಂಪಾದಿಸಿಕೊಂಡಿದ್ದನು. ಹೀಗೆ ಆಯತ್ತವಾಗಿ ಪ್ರಾಪ್ತವಾದ ವಿಜಯಗಳಿಂದ ಕೊಬ್ಬೇರಿದ ಪುರಮಲ್ಲನು ನಿಷ್ಕಾರಣವಾಗಿ ಪರಪೀಡೆಮಾಡಲುದ್ಯುಕ್ತನಾದ್ದರಿಂದ ಸುತ್ತಲಿನ ರಾಜರು ಅವನ ನಾಶಮಾಡುವ ಉದ್ಯೋಗಮಾಡಿ, ಗೊಂಡರೆಂಬ ಅಸಂಸ್ಕೃತರಾದ ಜನಾಂಗದವರನ್ನು ಎಬ್ಬಿಸಿ ಮಹೋಬಾ ರಾಜ್ಯದ ಮೇಲೆ ಅಭಿಯೋಗ ಮಾಡಿಸಿದರು. ಕಾಡು ಜನರೂ ಕ್ರೂರರೂ ಬಲಾಢ್ಯರೂ ಆದ ಗೊಂಡಜನರು ಪುರಮಲ್ಲನ ಬಲವನ್ನು ತಿರಿತಿರಿಮಾಡಿ ಬಡಿದು ಅವನನ್ನು ಒತ್ತಿ ಹಣ್ಣುಮಾಡಿದರು.

ಆಗ ಪುರಮಲ್ಲನ ಮುಖ್ಯ ಸರದಾರನಾಗಿದ್ದ ಜಸ್ಸರಾಜನೆಂಬ ಅಸಹಾಯ ಶೂರನು ಕ್ರುದ್ಧನಾಗಿ ಉದ್ರಿಕ್ತರಾದ ತನ್ನ ಪಟುಭಟರನ್ನು ಕಟ್ಟಿಕೊಂಡು ಗೊಂಡ ಜನರಮೇಲೆ ಸಾಗಿಹೋದನು. ಕಡುಗಲಿಯಾದ ಜಸ್ಸರಾಜನು ತನ್ನ ಪ್ರಚಂಡವಾದ ಸೇನೆಯನ್ನು ಕಟ್ಟಿಕೊಂಡು ತಮ್ಮ ಪಾರಿಪತ್ಯಕ್ಕಾಗಿ ಬರುವನೆಂಬ ವರ್ತಮಾನವನ್ನು ಕೇಳಿ ಗೊಂಡರಾದರೂ ತಮಗೆ ಪ್ರೋತ್ಸಾಹನವನ್ನು ಕೊಟ್ಟಿರುವ ರಾಜರ ಬೆಂಬಲವನ್ನು ಹೊಂದಿ ಒಳ್ಳೇ ಸಾಹಸದಿಂದ ಕಾದಿದರು. ಆದರೆ ಜಸ್ಸರಾಜನ ಮುಂದೆ ಅವರ ಆಟ ಸಾಗಲಿಲ್ಲ. ಆ ಭಯಂಕರವಾದ ಯುದ್ಧದಲ್ಲಿ ಸಹಸ್ರಾವಧಿ ಜನ ಗೊಂಡರು ರಣದೇವತೆಗೆ ಆಹುತಿಯಾಗಿಹೋದರು. ಅವರ ಮುಖ್ಯ ಪಟ್ಟಣವಾದ ದೇವಗರಾ ಎಂಬ ಭದ್ರವಾದ ಕೋಟೆಯು ನೆಲಸಮವಾಗಿಹೋಯಿತು.

ಆ ಜನರ ಗ್ರಾಮಗಳೆಲ್ಲ ಸುಟ್ಟುಹೋಗಿ ದೇಶವೆಲ್ಲ ಸ್ಮಶಾನದಂತೆ ಕಾಣಿಸಿತು. ಮಹೋಬಾದ ರಾಜನಾದ ಪುರಮಲ್ಲನ ಕೀರ್ತಿಗೆ ತಗಲಿದ ಕಲಂಕವನ್ನು ಜಸ್ಸರಾಜನು ಗೊಂಡಜನರ ರಕ್ತದ ಗುಂಡದಲ್ಲಿ ನಿರ್ಮಲವಾಗಿ ತೊಳೆದು ಹಾಕಿದನು.

ಆದರೆ ಮಹೋಬಾ ರಾಜ್ಯದ ದುರ್ದೈವದಿಂದ ವೀರಾಗ್ರೇಸರನಾದ ಜಸ್ಸರಾಜನು ಸಮರಾಂಗಣದಲ್ಲಿ ಮಡಿದು ವೀರಸ್ವರ್ಗವನ್ನೈದಿದನು. ಅವನ ಮರಣದಿಂದ ಆ ರಾಜ್ಯದ ಆಧಾರಸ್ತಂಭವೇ ಮುರಿದಂತಾಯಿತು. ಪುರಮಲ್ಲ ನಲ್ಲದಿದ್ದರೂ ಆವನ ರಾಣಿಯಾದ ಮಲುಂದದೇವಿಯು ಮಡಿದುಹೋದ ಜಸ್ಸರಾಜನ ಪರದೇಶಿಗಳಾದ ಮಕ್ಕಳನ್ನು ಕರಿಸಿಕೊಂಡು ಅವರನ್ನು ತನ್ನ ಹೊಟ್ಟೆಮಕ್ಕಳಂತೆ ಜೋಕೆಮಾಡಿ, ಅವರು ದೊಡ್ಡವರಾದ ಬಳಿಕ ಅವರ ಸ್ವಾಸ್ತಿಯಾಗಿದ್ದ ಕಲಿಂಜರ ಕೋಟೆಯನ್ನೂ ಅದಕ್ಕೆ ಹೊಂದಿದ ಭೂಮಿ-ಸೀಮೆಗಳನ್ನೂ ಅವರ ಸ್ವಾಧೀನ ಮಾಡಿಸಿದಳು.

ಅಲಾ ಉದಿಲ್ಲರೆಂಬ ಜಸ್ಸರಾಜನ ಮಕ್ಕಳಾದರೂ ತಂದೆಗಿಂತಲೂ ಒಂದು ತೂಕ ಮಿಗಿಲಾದ ವೀರರೂ, ಕ್ಷಾತ್ರಧರ್ಮದಲ್ಲಿ ಒಳ್ಳೇ ಅಭಿಮಾನ ವುಳ್ಳವರೂ ಆಗಿದ್ದರು. ಭಾರತ ಮಹಿಲಾಮಣಿಗಳಲ್ಲಿ ಅತ್ಯಂತವಾಗಿ ವಿರಾಜಿಸುತ್ತಿರುವ ಶ್ರೀ ದೇವಲದೇವಿಯ ಹೊಟ್ಟೆಮಕ್ಕಳೇ ಅವರು! ಆ ವೀರಪತ್ನಿಯಲ್ಲಿ ವಾಸಿಸುತ್ತಿರುವ ಸ್ವಕುಲಾಭಿಮಾನವೂ, ರಾಜನಿಷ್ಠೆಯೂ, ಸತ್ಯಪ್ರೀತಿಯೂ, ದೃಢನಿಶ್ಚಯವೂ ಆ ಮಾತೆಯ ಮಕ್ಕಳಲ್ಲಿ ಅನ್ಯೂನವಾಗಿ ಬಿಂಬಿಸಿದ್ದದ್ದು ಆಶ್ಚರ್ಯವೆ? ಅಲಾ ಉದಿಲ್ಲರ ದರ್ಪವು ಪರರಾಯರ ಎದೆ ಯಲ್ಲಿ ಭೀತಿಯನ್ನುಂಟುಮಾಡಿತು; ಅವರ ಕ್ರುದ್ಧವಾದ ಕಟಾಕ್ಷಗಳನ್ನು ಕಂಡು ಆವನೀಶರೆಲ್ಲರೂ ನಮ್ರರಾದರು; ಅವರ ದಂಡಪ್ರಹಾರವು ಪುಂಡು ಗಾರರ ಟೊಂಕವನ್ನು ಮುರಿದುಹಾಕಿತು. ಮಾನನೀಯರಾದ ಆ ಬಂಧು ಗಳೀರ್ವರು ಮಹೋಬಾರಾಜ್ಯದ ಮಹನೀಯರಲ್ಲಿ ಸನ್ಮಾನ್ಯರಾಗಿದ್ದರು.

ಆದರೆ ಅಂಥ ಪರಮಸಾಹಸಿಗಳಾದ ಆಪದ್ಬಂಧುಗಳನ್ನು ಆದರಿಸಿ ತನ್ನ ರಾಜ್ಯದಲ್ಲಿಟ್ಟುಕೊಳ್ಳುವ ಜಾಣತನವು ಪುರಮಲ್ಲನಲ್ಲಿ ಇರಲಿಲ್ಲ. ಅವಿಚಾರಿಗೆ ಸಾರಾಸಾರ ವಿಚಾರವೆಲ್ಲಿ? ಪುರಹರ ಕುಲಕಲಂಕನಾದ ಮಂಡೂರ ಪಟ್ಟ ಣದ ರಾಜನೋರ್ವನು ಮಹಾನುಭಾವರಾದ ಅಲಾ ಉದಿಲ್ಲರಲ್ಲಿ ಮತ್ಸರ

ವನ್ನು ತಿಳಿ, ಅವರ ವಿರುದ್ಧವಾಗಿ ಪುರಮಲ್ಲನ ಕಿವಿಯಲ್ಲಿ ಕುಮಂತ್ರವನ್ನು ಊದಿದ್ದರಿಂದ ಕಿವಿಹರಕನಾದ ಆ ರಾಜನು ಆ ವೀರರಾದ ಅಣ್ಣತಮ್ಮಂದಿರಲ್ಲಿ ಅಸೂಯೆಯನ್ನು ತಳೆದು, ಅವರೊಡನೆ ಇಲ್ಲದ ನೆವತೆಗೆದು ವ್ಯಾಜ್ಯ ಮಾಡಲಾರಂಭಿಸಿದನು. ಪುರಮಲ್ಲನೆಷ್ಟು ನೀಚನಾದರೂ, ಅವನು ರಾಜನು, ತಾವು ಪ್ರಜರೆಂಬ ತಾರತಮ್ಯವನ್ನರಿತು ರಾಜನಿಷ್ಠರಾದ ಆ ಬಂಧುವರ್ಯರು ತಮಗಾದ ಅಪಮಾನ ತೊಂದರೆಗಳನ್ನು ಅನಿರ್ವಾಹಕ್ಕಾಗಿ ನುಂಗಿಕೊಳ್ಳುತ್ತ ಹೋದರು.

ಆದರೂ ಸಹಿಷ್ಣುತೆಗಾದರೂ ಪರಿಮಿತಿಯುಂಟಷ್ಟೆ? ಒಂದು ದಿನ ಪುರಮಲ್ಲನು ಅಲಾ ಉದಿಲ್ಲರ ಮನೆಗೆ ಅತಿಥಿಯಾಗಿ ಬಂದು ಯಥೇಚ್ಛವಾಗಿ ಉಂಡು ತಿಂದು ಮರಳಿ ಹೋಗುವಾಗ ಅಲಾರಾಯನ ಪ್ರೀತಿಯ ಕುದುರೆಯನ್ನು ತನಗೆ ಕೊಡಬೇಕೆಂದು ಆಗ್ರಹದಿಂದ ಕೇಳಿದನು. ತೇಜಸ್ವಿಯಾದ ಕ್ಷತ್ರಿಯನು ತನ್ನ ಕೈಯಲ್ಲಿಯ ಖಡ್ಗವನ್ನಾಗಲಿ, ತಾನು ಹತ್ತುವ ಕುದುರೆಯನ್ನಾಗಲಿ ಪ್ರಾಣಹೋದರೂ ಅನ್ಯರಿಗೆ ಕೊಡುವನೆ? ಅಲಾರಾಯನು ರಾಜನಿಗೆ ವಿನಯದಿಂದ ಬೆಸಗೊಂಡದ್ದೇನಂದರೆ: "ರಾಜನ್, ಈ ಕುದುರೆಯು ನಮ್ಮ ತಂದೆಯವರು ಹತ್ತುವ ಕುದುರೆಯ ಮರಿಯು; ಇದನ್ನು ನಾನು ನನ್ನ ಜೀವಕ್ಕಿಂತಲೂ ಹೆಚ್ಚಾಗಿ ಜೋಕೆ ಮಾಡಿದ್ದೇನೆ. ರಾಜರ ಇಚ್ಛೆಯಿದ್ದರೆ ಈ ದಾಸನ ಮನೆಯಲ್ಲಿದ್ದ ಬೇರೆ ಬೇಕಾದ ವಸ್ತುಗಳು ಅವರವೇ ಇವೆ. ಮಾತ್ರ ಈ ಕುದುರೆಯನ್ನು ಬಿಟ್ಟುಕೊಡಲು ನನಗೆ ಮನಸ್ಸಾಗದು."

"ಅಲಾ, ನಾನು ಯಾರೆಂದು ತಿಳಿದು ನೀನು ಈ ನನ್ನ ಪ್ರಾರ್ಥನೆಯನ್ನು ನಿರಾಕರಿಸಿದಿ?" ಎಂದು ಪುರಮಲ್ಲನು ಕ್ರುದ್ಧನಾಗಿ ಕೇಳಿದನು.

"ತಾವು ನನ್ನ ರಾಜರೆಂದೇ ನಾನು ವಿನಯದಿಂದ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಈ ಮಾತಿನಲ್ಲಿ ರಾಜರಿನ್ನು ಹೆಚ್ಚಿಗೆ ಆಗ್ರಹ ತೊಡಬಾರದು."

"ಎಚ್ಚರದಿಂದ ಮಾತಾಡು, ಉದ್ದಾಮನೆ! ಒಳ್ಳೇ ಮಾತಿನಿಂದ ಈ ಕುದುರೆಯನ್ನು ನನಗೆ ಕೊಡುವಿಯೋ ಇಲ್ಲವೊ?" ಎಂದು ಪುರಮಲ್ಲನು ಗದ್ದರಿಸಿ ಕೇಳಿದನು.

"ಪುರಮಲ್ಲರಾಜ, ಯಃಕಶ್ಚಿತವಾದ ಕುದುರೆಯೇನು, ಅದರ ನಿಮಿತ್ತವಾಗಿ ನೀವು ನಮ್ಮೊಡನೆ ನಿಷ್ಠುರವಾಡುವದೇನು! ನಮ್ಮ ವೈರಿಯಾದ ಆ

ಪುರಹರಕುಲಾಪಸದನ ಮಾತು ಕೇಳಿಕೊಂಡು ಕುದುರೆಯ ನೆಪಮಾಡಿ ನೀವು ನಮಗೆ ಪೀಡೆ ಮಾಡಬೇಕೆಂದು ಯೋಚಿಸಿರುವಿರಿ. ಆದಕ್ಕಾಗಿ ನಾನು ಶಪಥ ದಿಂದ ಹೇಳುವದೇನಂದರೆ, ನೀವು ನಿಮ್ಮ ರಾಜ್ಯವನ್ನು ಕೊಟ್ಟರೂ ಈ ಕುದುರೆಯನ್ನು ನಾನು ನಿಮಗೆ ಕೊಟ್ಟವನಲ್ಲ; ಏನು ಮಾಡುವದು ಮಾಡಿರಿ!" ಎಂದು ಅಲಾರಾಯನು ದರ್ಪದಿಂದ ನುಡಿದನು.

"ಮಾಡುವದನ್ನು ಮಾಡ್ಲೇ? ಯಾರಲ್ಲಿ! ಸೇವಕರೆ, ಈ ಮೂಢ ರಾದ ಬಂಧುಗಳನ್ನು ಕಂಬಕ್ಕೆ ಬಿಗಿದು ಕುದುರೆಯನ್ನು ತೆಗೆದುಕೊಂಡು ನಡೆಯಿರಿ" ಎಂದು ನೀತಿಹೀನನಾದ ಆ ರಾಜನು ಆಜ್ಞೆ ಮಾಡಿದನು.

ಅಷ್ಟೊತ್ತಿನ ವರೆಗೆ ಸುಮ್ಮನಿದ್ದ ಉದಿಲ್ಲರಾಯನು ಪುರಮಲ್ಲನ ಉದ್ಧತ ವಾದ ನುಡಿ ಕೇಳಿ ಸಂತಪ್ತನಾಗಿ ಆವೇಶದಿಂದ ಖಡ್ಗವನ್ನು ಹಿರಿದು, "ಪುರ ಮಲ್ಲ, ನೀನೀಗ ರಾಜನಲ್ಲ, ಪರಸ್ವವನ್ನು ಬಲಾತ್ಕಾರದಿಂದ ಅಪಹರಿಸ ಬಂದ ಚೋರನು. ಈಗಿಂದೀಗಲೇ ಈ ಕೋಟೆಯು ಹೊರಬಿದ್ದು ಹೋಗು. ಜಸ್ಸರಾಜನ ಮಕ್ಕಳ ಕ್ರೋಧವನ್ನು ಪ್ರಜ್ವಲಿಸಿ ಬದುಕಿದವರಿಲ್ಲ!" ಎಂದು ರಾಜನನ್ನು ಅಧಿಕ್ಷೇಪಿಸಿ ನುಡಿದನು.

ಹೇಡಿಯು ಕೆಟ್ಟ ಮನಸ್ಸಿನವನಾದರೂ ಅವನು ಹೇಡಿಯೇ ಅಲ್ಲವೆ? ಉದಿಲ್ಲನು ಚದರಿಸಿ ನುಡಿದ ಮಾತು ಕೇಳಿ ಪುರಮಲ್ಲನ ಎದೆ ಕಂಪಿಸಿತು. ಕಣ್ಣೆತ್ತಿ ಆ ತರುಣನ ಮುಖ ನೋಡಲು ಅವನಿಗೆ ಧೈರ್ಯಸಾಲಲಿಲ್ಲ. ಮಾತಾಡಲು ಉಸುರು ಬಂದ ಬಳಿಕ ಆ ರಾಜನು ಅಲಾನನ್ನು ಕುರಿತು ಅಂದದ್ದು: "ಪ್ರಜೆಗಳಾದದ್ದಕ್ಕೆ ನೀವು ನಿಮ್ಮ ರಾಜನನ್ನು ಒಳಿತಾಗಿ ಸಂಭಾವಿಸಿದಿರಿ. ಆಗಲಿ, ನೀವಿನ್ನು ನನ್ನ ರಾಜ್ಯದಲ್ಲಿ ಇರಲಾಗದು. ಈಗಿಂದೀ ಗಲೆ ನೀವು ಈ ಕೋಟೆಯನ್ನು ಬಿಟ್ಟು ನಡೆಯಿರಿ ನಿಮ್ಮ ಉಂಬಳಿಯು ಈ ಕ್ಷಣದಿಂದ ಸರಕಾರಕ್ಕೆ ಸೇರಿತು."

"ಪುರಮಲ್ಲ, ಕವಡೆಯ ನಿನ್ನೀ ಉಂಬಳಿಯನ್ನು ನಾನೆಷ್ಟುಮಾತ್ರವೂ ಲೆಕ್ಕಿಸುವದಿಲ್ಲ. ಉದಾರಚರಿತರಾದ ನಮ್ಮ ಪೂರ್ವಜರು ಈ ಸಿಂಹಾಸನದ ನಿಷ್ಠೆಗಾಗಿ ಇಲ್ಲಿ ನಿಂತುಕೊಂಡಿದ್ದರಿಂದ ನಾವೂ ಇಲ್ಲಿ ನಿಂತೆವು ಭೂಸ್ವಾಸ್ತಿ ಗಳ ಆಶೆಗಾಗಿ ಯಾವ ಅಭಿಮಾನಿಯಾದ ವೀರನಾದರೂ ರಣರಂಗದಲ್ಲಿ ತನ್ನ ಶಿರಸ್ಸನ್ನು ಸಮರ್ಪಿಸಲು ಒಪ್ಪಲಾರನು. ರಾಜನಿಷ್ಠೆಗಾಗಿಯೇ ವೀರರು

ತಮ್ಮ ಪ್ರಾಣವನ್ನು ಕೊಡುವರು. ನಮ್ಮ ತಂದೆಯಾದ ಜಸ್ಸರಾಜ ಬಹದ್ದರನು ತನ್ನ ಶಿರಃಕಮಲವನ್ನು ರಣದೇವಿಗೆ ಸಮರ್ಪಿಸಿ ನಿನ್ನೀ ತಲೆಯು ನಿನ್ನ ಧಡಕ್ಕೆ ಅಂಟಿಕೊಂಡಿರುವಂತೆ ಮಾಡಿದ್ದು ಭೂಸ್ವಾಸ್ತಿಗಳ ಆಸೆಗಾಗಿ ಅಲ್ಲವೆಂಬದನ್ನು ನೀನು ಮರೆಯದಿರಲಾರಿ. ನಡೆ ! ನೀನು ನಿನ್ನ ಅರಮನೆಯಲ್ಲಿ ಸೇರಿಕೊಳ್ಳುವದರೊಳಗಾಗಿಯೇ ನಾವು ನಿನ್ನೀ ಅನೀತಿಮಯವಾದ ರಾಜ್ಯವನ್ನು ಬಿಟ್ಟು ಹೋಗಿರುವೆವೆಂದು ತಿಳಿದುಕೋ ! '' ಎಂದು ಉದ್ರೇಕದಿಂದ ನುಡಿದು ಆಲಾರಾಯನು ಕೂಡಲೆ ತನ್ನ ಕಹಳೆಗಳನ್ನು ಊದಿಸಿದನು.

ತಮ್ಮ ನಾಯಕರಾದ ಅಲಾಉದಿಲ್ಲರು ರಾಜ್ಯವನ್ನು ಬಿಟ್ಟು ಹೋಗುವರೆಂಬ ವರ್ತಮಾನವನ್ನರಿತು ಕಲಿಂಜರ ಕೋಟೆಯಲ್ಲಿದ್ದ ಎರಡು ಸಾವಿರ ಜನ ಪಟುಭಟರಾದ ರಾವುತರು ತಮ್ಮ ಮನೆಮಾರುಗಳನ್ನು ಕಾಲಿಲೊದ್ದು ತಮ್ಮ ಯಜಮಾನರೊಡನೆ ತಾವೂ ಹೊರಟಿದ್ದು ಹೋಗಲು ಸಿದ್ಧರಾದರು. ರಣವಾದ್ಯಗಳ ಘನವಾದ ನಿನಾದವೆಸಗಿತು. ಎರಡು ಸಾವಿರ ತೇಜಿಗಳು ಕಲಿಂಜರ ಕೋಟೆಯ ಹೊರಗಿದ್ದ ಬೈಲಿನಲ್ಲಿ ನಿಂತುಕೊಂಡು ಆರ್ಭಟೆಯಿಂದ ಕಿರುಳಿದವು. ರಾವುತರು ಧರಿಸಿರುವ ಭಾಲೆ ಖಡ್ಗಗಳು ಬಿಸಿಲಿನಲ್ಲಿ ಚಕಚಕನೆ ಹೊಳೆದವು. '' ಜಸ್ಸರಾಜ ಮಹಾರಾಜಕಿ ಜಯ್ ! '' ಎಂಬ ರಣಗರ್ಜನೆಯೊಂದಿಗೆ ಅಲಾಉದಿಲ್ಲರು ಅಂದು ಕಲಿಂಜರವನ್ನು ಬಿಟ್ಟು ನಡೆದರು. ಘುರಗೊಟ್ಟು ಒಕ್ಕಟ್ಟನಲ್ಲಿ ಓಡುತ್ತಿರುವ ಕುದುರೆಗಳ ಖುರಾಘಾತಕ್ಕೆದ್ದ ಕೆಂಧೂಲಿಯು ಆ ಉದ್ರಿಕ್ತವಾದ ಸೇನೆಯನ್ನು ಅಡಗಿಸಿತು. ಆ ಕೆಂಧೂಲಿಯು ಕಣ್ಮರೆಯಾಗುವವರೆಗೂ ಕಂಬನಿಗಳಂ ಮಿಡಿದಾರ್ತೆಯರಾಗಿ ಪುರನಾರಿಯರು ತಮ್ಮ ವೀರರು ಹೋದ ಮಾರ್ಗವನ್ನು ನೋಡುತ್ತಲೇ ಇದ್ದರು.

ವಿಜಯಶ್ರೀಯನ್ನು ಭುಜಕ್ಕೆ ಕಟ್ಟಿಕೊಂಡು ಬಿಜಯ ಮಾಡಿರುವ ಆ ವೀರರಿಗೆ ಎಲ್ಲಿ ಹೋದಲ್ಲಿ ಆಸ್ಪದವೇ ; ಎಲ್ಲಿ ಹೋದಲ್ಲಿ ಮರ್ಯಾದೆಯೇ. ಆ ಕಾಲದಲ್ಲಿ ಹಿಂದೂ ರಾಜರು ಎಬ್ಬಿಸಿರುವ ಆತ್ಮಕಲಹದ ಸುಗ್ಗಿಯೇ ಆಗಿತ್ತು. ಅಂಥ ಸಮಯದಲ್ಲಿ ರಣಮರ್ದಕರಾದ ಎರಡು ಸಾವಿರ ಜನ ಕಲಿಗಳಾದ ರಾವುತರ ನಾಯಕರು ಆಯಾಚಿತವಾಗಿ ತನ್ನ ಆಶ್ರಯವನ್ನು ಬಯಸಿ ಬಂದದ್ದು ಕನೋಜದ ರಾಜನಿಗೆ ಬಂಗಾರವೇ ಆಯಿತು. ಅವನು

ಅಲಾಉದ್ದೀನನನ್ನು ಬಹುಮಾನದಿಂದ ಎದಿರ್ಗೊಂಡು ತನ್ನ ರಾಜಧಾನಿಗೆ ಕರೆತಂದು ಅವರಿಗೆ ಇನಾಮು ಜಾಗೀರುಗಳನ್ನು ಕೊಟ್ಟು ಇರಿಸಿಕೊಂಡನು.

ಈ ಸಂಗತಿಗಳಾಗಿ ಕೆಲವು ಕಾಲವಾದಮೇಲೆ, ದಿಲ್ಲಿಯ ಸಾರ್ವಭೌಮನಾದ ಪೃಥ್ವೀರಾಜ ಚವ್ಹಾನನು ಸಮೇತಾ ಪಟ್ಟಣದ ರಾಜನ ರೂಪವತಿಯಾದ ಮಗಳ ಮೋಹಕ್ಕೆ ಸಿಲ್ಕಿ, ಆ ಪಟ್ಟಣದ ಮೇಲೆ ಅಭಿಯೋಗ ಮಾಡಿ ತನ್ನ ರಮಣಿಯನ್ನು ಎತ್ತಿಕೊಂಡು ದಿಲ್ಲಿಯ ಹಾದೀ ಹಿಡಿದನು. ಪುರಮಲ್ಲನೂ, ಮಂಡೂರಿನ ರಾಜನೂ ಮೇವಾಡದ ರಾಜನ ಪಕ್ಷವನ್ನು ಹಿಡಿದು ಕನ್ಯಾಪಹಾರಿಯಾಗಿದ್ದ ಪೃಥ್ವೀರಾಜನ ಬೆನ್ನಟ್ಟಿಹೋದರು. ತಾನು ತಂದಿದ್ದ ಸುಮನೋಹರವಾದ ಸುಲಿಗೆಯನ್ನು ಸುರಕ್ಷಿತವಾಗಿ ಅಲ್ಲಿಗೆ ಒಯ್ಯುವ ಅವಸರವು ಪೃಥ್ವೀರಾಜನಿಗೆ ಇದ್ದದ್ದರಿಂದ ಸೋತಷ್ಟು ಸೋತು, ಗೆದ್ದಷ್ಟು ಗೆದ್ದವನಾಗಿ ಹಾಗೂ ಹೀಗೂ ಮಾಡಿ ಒಂದಾವರ್ತಿ ತನ್ನ ಕಾಮಿನಿಯೊಡನೆ ದಿಲ್ಲಿಗೆ ಬಂದು ಮುಟ್ಟಿದನು.

ಪೃಥ್ವೀರಾಜನ ಸೈನಿಕರಲ್ಲಿ ಅನೇಕರು ಕ್ಷತರಾಗಿ ಮಾರ್ಗದಲ್ಲಿ ಬಿದ್ದುಕೊಂಡಿದ್ದರು. ಕ್ಷಾತ್ರಕುಲಕಲಂಕನಾದ ಪುರಮಲ್ಲನು ನಿರಾಶ್ರಿತರಾಗಿ ಬಿದ್ದಿರುವ ಆ ಬಡ ಜನರನ್ನು ಹಿಡಿದು, ಕಟಕರು ಕುರಿಗಳನ್ನು ಕೊಲ್ಲುವಂತೆ, ಕನಿಕರವಿಲ್ಲದೆ ಕಡಿಸಿ ಚಲ್ಲಿಸಿದನು. ಹೃದಯದ್ರಾವಕವಾಗಿರುವ, ಆ ರಾಕ್ಷಸೀ ದುಷ್ಕೃತ್ಯದ ವರ್ತಮಾನವನ್ನು ಕೇಳಿ ಪೃಥ್ವೀರಾಜನು ಅತಿಶಯವಾಗಿ ಸಂತಪ್ತನಾಗಿ ಸಿಡಿಲಿನಂತೆ ಗಡಗಡನೆ ಗರ್ಜಿಸಿ ಪುರಮಲ್ಲನನ್ನು ರಸಾತಲಕ್ಕೆ ಮೆಟ್ಟಿಯೇ ತೀರುವೆನೆಂದು ಪ್ರತಿಜ್ಞೆ ಮಾಡಿ ಮಹೋಬಾ ಪಟ್ಟಣದ ಮೇಲೆ ಸಾಗಿಬಂದನು.

ದಿಲ್ಲೀಶ್ವರನ ಸೇನಾಸಮುದ್ರವು ಪುರಮಲ್ಲನ ರಾಜ್ಯದಲ್ಲಿ ಭೋರಿಟ್ಟು ಸೇರಿ ನಹಿಪ್ರತಿಯಾದ ಕೊಲೆಯನ್ನು ಮಾಡಲಾರಂಭಿಸಿತು. ಪೃಥ್ವೀರಾಜನಾರು, ಅವನಿಗೆದುರಾಗಿ ನಿಲ್ಲಲು ಪುರಮಲ್ಲನೆಷ್ಟರವನು!

ಚೇಳಿನ ಮಂತ್ರವು ಗೊತ್ತಿಲ್ಲಾ
ಹೋಗಿ ಹಿಡಿದ ಹಾವಿನ ಬಾಲಾ

ಎಂಬಂತೆ ಅವಿಮರ್ಶಕಾರಿಯಾದ ಆ ಪುರಮಲ್ಲನು ಇನ್ನೇನು ಗತಿಯೆಂದು ಬಾಯಿಬಿಡುತ್ತ ತನ್ನ ಮಂತ್ರಿಗಳೊಡನೆ ಆಲೋಚಿಸಬಂದನು. ಹೀಗೆ

ಗಡ್ಡಕ್ಕೆ ಉರಿಹತ್ತಿದ ಸಮಯದಲ್ಲಿ ಯಾರೇನು ಮಾಡುವರು ? ಆಗ ಪುರಮಲ್ಲನ ರಾಣಿಯಾದ ಮಲುಂದದೇವಿಯು ಪತಿಯನ್ನು ಒತ್ತಟ್ಟಿಗೆ ಕರೆದು ಅಂದದ್ದು : “ ಹೇಗಾದರೂ ಮಾಡಿ . ಆಲಾಉದಿಲ್ಲರನ್ನು ಕರಿಸಿಕೊಳ್ಳಿರಿ. ಆ ರಣಧುರಂಧರರಿಲ್ಲದೆ ಈಗಿನ ದುರ್ಧರವಾದ ಪ್ರಸಂಗವು ನೀಗುವಂತಿಲ್ಲ. ವೃಥಾಭಿಮಾನಕ್ಕೀಡಾಗುವ ಸಮಯವಿದಲ್ಲ. ಜಸ್ಸರಾಜನ ಮಕ್ಕಳು ಬರುವವರೆಗೆ ಅವಧಿಯನ್ನು ಕೊಡಬೇಕೆಂದು ದಿಲ್ಲಿಯ ಸಾರ್ವಭೌಮನಿಗೆ ಹೇಳಿಕೊಂಡರೆ, ಮಹಾವಂಶಸಂಭವನಾದ ಪೃಥ್ವೀರಾಜನು ಒಡಂಬಡದೆ ಇರಲಿಕ್ಕಿಲ್ಲ. ”

ಸೂರ್ಯಚಂದ್ರ ಅಗ್ನಿಯೇ ಮುಂತಾದ ದೇವತಾಸಂಭವರ ವಂಶಜರಾದ ಆ ಕಾಲದ ರಜಪೂತರು ಧರ್ಮಯುದ್ಧಕ್ಕೆ ತಲೆಬಾಗಿ ನಡೆಯುವವರಾದ್ದರಿಂದ ಪೃಥ್ವೀರಾಜನು, ಪುರಮಲ್ಲನು ಕೇಳಿಕೊಂಡ ಅವಧಿಯನ್ನು ಕೊಡಲಿಕ್ಕೆ ಸಂತೋಷದಿಂದ ಒಪ್ಪಿಕೊಂಡನು. ಜಗ್‌ನುಷನೆಂಬ ವಾಕ್ಚತುರನಾದ ಚಾರಣನನ್ನು ಅಲಾಉದಿಲ್ಲರ ಮನವೊಲಿಸಿ ಅವರನ್ನು ಕರತರುವದಕ್ಕಾಗಿ ಕಳಿಸೋಣವಾಯಿತು. ಅನುನಯದಲ್ಲಿ ನಿಪುಣನಾದ ಆ ಚಾರಣನು ಹೊಟ್ಟೆಯೊಳಗಿನ ಹರಳು ಕರಗಿಸುವಂಥ ಕರುಣಾಜನಕವಾದ ನುಡಿಗಳಿಂದ ಅಲಾಉದಿಲ್ಲರನ್ನು ಕುರಿತು ನುಡಿದದ್ದು: “ಮಹಾನುಭಾವರೆ, ಭೀಮಾರ್ಜುನರಿಗೆ ಸಮಾನರಾದ ನಿಮ್ಮಂಥ ಮಹಾವೀರರು ಬದುಕಿರುವಾಗಲೆ ಶತ್ರುಗಳು ಬಂದು ನಿಮ್ಮ ಜನ್ಮಭೂಮಿಯಾದ ಮಹೋಬಾ ಪ್ರಾಂತವನ್ನು ಹೊಕ್ಕು ಅದನ್ನು ಧ್ವಂಸ ಮಾಡುತ್ತಿರುವದನ್ನು ಅರಿತು ನೀವಿಲ್ಲಿ ನಿಶ್ಚಿಂತರಂತೆ ಕುಳಿತಿರಬಹುದೆ ? ನಿಮ್ಮ ಬೆಂಬಲವಿಲ್ಲದ್ದಕ್ಕಾಗಿ ಜಸ್ಸರಾಜರ ಪರಮ ಸ್ನೇಹಿತರಾದ ಬೀರಸಿಂಗ ನರಸಿಂಗ ಮುಂತಾದ ವೃದ್ಧ ವೀರರೆಲ್ಲರೂ ಪೃಥ್ವೀರಾಜನ ಶಸ್ತ್ರಾಸ್ತ್ರಗಳ ಕಠೋರವಾದ ಪ್ರಹಾರಗಳಿಗೆ ಈಡಾಗದೆ ಮಡಿದುಹೋದರು. ಪರಮ ರಮಣೀಯವಾದ ಶ್ರೀಶವಹ ಪಟ್ಟಣವು ಸುಟ್ಟು ಬೂದಿಯಾಗಿ ಹೋಯಿತು. ಮನೆಮನೆಗಳಲ್ಲಿ ಪತಿವಿಯೋಗದ ದುಃಖದಿಂದ ಅಳುತ್ತಿರುವ ವಿಧವೆಯರ ಘೋರತರವಾದ ಆರ್ತಸ್ವರವು ಕೇಳುವವರ ಎದೆಗಳನ್ನು ಸೀಳಿ ಹೋಳಾಗಿ ಮಾಡುತ್ತಿರುವದು. ಈ ಸಮಯದಲ್ಲಿ ನೀವು ವಿಲಂಬ ಮಾಡದೆ ನಿಮ್ಮ ಜನ್ಮಭೂಮಿಯ ಮಾನರಕ್ಷಣೆಗಾಗಿ ಹೊರಟು ಬನ್ನಿರಿ. ”

ಆ ಮಾತು ಕೇಳಿ ಅಲಾರಾಯನು ಕರಕರನೆ ಹಲ್ಲು ಕರಿದು "ಮಾತಾಡ ಬೇಡ ಜಗ್‌ನುಷ! ನೃಪಕುಲಕಲಂಕನಾದ ಆ ಪುರಮಲ್ಲನ ಮೈಗೆ ಕಕ್ಕಡವನ್ನು ಸುತ್ತಿ ಪೃಥ್ವೀರಾಜನು ಅವನನ್ನು ಸುಡುತ್ತಿರುವದನ್ನು ನಾನು ಪ್ರತ್ಯಕ್ಷವಾಗಿ ಕಂಡರೂ ಬಿಡಿಸಿಕೊಳ್ಳುವವನಲ್ಲ! ಪಿತೃವಿಹೀನನಾದ ಈ ನರಪಶುವನ್ನು ನಮ್ಮ ತಂದೆಯವರು ಎತ್ತಿ ಆಡಿಸಿ ಜೋಕೆಮಾಡಿದ್ದರ ಪ್ರತಿ ಫಲವು ನಮಗೆ ವನವಾಸವೆ? ಕುಗ್ರಾಮದ ಇವನ ರಾಜ್ಯವನ್ನು ಬೆಳಸಿ ಘನತೆಗೇರಿಸಿದ್ದರ ಉಪಕಾರವನ್ನು ಇವನು ನಮ್ಮ ಪಿತ್ರಾರ್ಜಿತವಾದ ಆಸ್ತಿ ಯನ್ನು ಅಪಹರಿಸಿಕೊಂಡು ತೀರಿಸಿದನೆ? ರಾಜನಿಷ್ಠೆಗಾಗಿ ಪ್ರಾಣವನ್ನು ತೃಣಕ್ಕೂ ಕಡಿಮೆಯಾಗಿಮಾಡಿ ರಣರಂಗದಲ್ಲಿ ಆಹುತಿಯಾಗಿ ಕೊಡುವವ ರಾದ ನಮ್ಮನ್ನು ಕೀಳರೆಂದು ತಿಳಿದು ಈ ಕೂಳನು ಮಾನಹಾನಿ ಮಾಡಿದ ನಲ್ಲೆ? ಖಲಭುಜಂಗನಾದ ಆ ಪುರಹರನೇ ನಿಮ್ಮ ರಾಜ್ಯವನ್ನು ಕಾಪಾಡಿ ಕೊಳ್ಳಲಿ. ನಡೆ; ನಾವು ಬರುವದಿಲ್ಲ ಹೋಗು" ಎಂದು ನಿರ್ಭರ್ತ್ಸಿಸಿ ನುಡಿದನು.

"ಧೀರರೆ, ಇಂಥ ಪ್ರಜ್ವಲಿತವಾದ ಕ್ರೋಧಾಗ್ನಿಯು ನಿಮ್ಮಂಥ ಪರ ಮೋದಾರರಾದ ಮಹಾತ್ಮರ ಹೃದಯದಲ್ಲಿ ಮಾತ್ರ ವಾಸಿಸುತ್ತಿರುವಸೆಂದೇ ಒಳಿತಾಗಿರುವದು. ನೀಚರ ಹೃದಯದಲ್ಲಿ ಅದು ಸೇರಿದ್ದಾದರೆ ಆ ದುರ್ಧರ ವಾದ ಬೆಂಕಿಯಿಂದ ಆ ಜನರು ತಮ್ಮಿಂದ ತಾವೇ ಸುಟ್ಟುಹೋಗುತ್ತಿದ್ದರು. ಈ ಕ್ರೋಧಾಗ್ನಿಯನ್ನು ನೀವು ಪುರಮಲ್ಲರಾಜರ ಮೇಲೆ ಪ್ರಯೋಗಿಸಬಹು ದಾದರೂ ಮಹಾಮಾತೆಯವರಾದ ಮಲಿಂಬದೇವಿಯರಲ್ಲಿ ಅದನ್ನು ನೀವೆಂತು ಪ್ರಯೋಗಿಸುವಿರಿ? ರಾಣಿಯವರು ವ್ಯಸನಾಕುಲರಾಗಿ ಕಣ್ಣೀರು ಸುರಿಸುತ್ತ ನನ್ನನ್ನು ಕುರಿತು 'ಜಗ್‌ನುಷ, ನನ್ನ ಮಕ್ಕಳಂತಿರುವ ಆ ವೀರ ಬಂಧುಗಳಾದ ಅಲಾ ಉದಿಲ್ಲರೀ ಪ್ರಸಂಗದಲ್ಲಿದ್ದರೆ, ನಮಗೆ ಈ ದುರ್ದ ಶೆಯು ಪ್ರಾಪ್ತವಾಗುತ್ತಿದ್ದಿಲ್ಲ. ನನ್ನ ತೊಡೆಯಮೇಲೆ ಆಡಿ ಬೆಳೆದವರಾದ ಆ ಬಾಲಕರು ನನ್ನ ವಿನಂತಿಯನ್ನು ಸರ್ವಥಾ ನಿರಾಕರಿಸಲಿಕ್ಕಿಲ್ಲ. ಈ ಪ್ರಸಂಗದಲ್ಲಿ ಬರದಿದ್ದರೆ ನನ್ನ ಆಣೆಯಾಗಿದೆ ಎಂದು ಅವರಿಗೆ ಹೇಳು. ವೀರಮಾತೆಯವರಾದ ದೇವಲದೇವಿಯರಿಗೂ ನಾನು ಸೆರಗೊಡ್ಡಿ ಬೇಡಿ ಕೊಂಡಿರುವೆನೆಂದು ಹೇಳು.' ಹೀಗೆ ಆಜ್ಞಾಪಿಸಿ ನನ್ನನ್ನು ಕಳಿಸಿದ ರಾಣಿ

ಯುವರು ನಿಮ್ಮ ಮಾರ್ಗಪ್ರತೀಕ್ಷೆ ಮಾಡ-ತ್ತೆ ಅರಮನೆಯ ಚಂದ್ರಶಾಲೆ ಯಲ್ಲಿಯೇ ನಿಂತುಕೊಂಡಿರುವರು. ನಿಮ್ಮ ಮೋರೆಯನ್ನು ಕಾಣದೆ ಅವರು ಬಾಯಿಯಲ್ಲಿ ನೀರು ಹಾಕುವದಿಲ್ಲವೆಂದು ಹೇಳಿದ್ದಾರೆ ನಡೆಯಿರಿ, ಉಪೇಕ್ಷೆ ಮಾಡುವ ಸಮಯವಿದಲ್ಲ. ನಿರಾಶೆಯ ಭರದಲ್ಲಿ ಆ ನಮ್ಮ ರಾಣಿಯವರು ಜೀವಕ್ಕೆ ಅಪಾಯವನ್ನು ಮಾಡಿಕೊಂಡರೆ ಮುಂದೆ ನಿಮ್ಮಲ್ಲಿ ಹುಟ್ಟಿದ ಪಶ್ಚಾತ್ತಾಪದ ಬೆಂಕಿಯು ಸಪ್ತಸಮುದ್ರಗಳಲ್ಲಿಯ ನೀರು ತಂದು ಹೋಯ್ದರೂ ನೊಂದಲರಿಯದು!"

ತನ್ನ ದೇಶದ ರಾಣಿಯೂ, ಜೀವದ ಗೆಳತಿಯೂ ಆದ ಶ್ರೀ ಮಲುಂದ ದೇವಿಗೆ ಪ್ರಾಪ್ತವಾಗಿರುವ ದುರವಸ್ಥೆಯ ವೃತ್ತಾಂತವನ್ನು ಕೇಳಿ ಉದಾರ ಚರಿತೆಯಾದ ಕೇವಲದೇವಿಯ ಮನಸ್ಸು ಕರಗಿ ನೀರಾಯಿತು. ಉದ್ವೇಗ ದಿಂದ ಜ[illegible] ದುಃಖಿಸಿ ದುಃಖಿಸಿ ಅತ್ತಳು. ಆವೇಶದಿಂದ ಅವಳು ತನ್ನ ಹಿರಿಯ ಮಗನನ್ನು ಕುರಿತು "ಆಲಾ, ಇನ್ನೊಂದು ಮಾತಾಡದೆ ನೀನೀಗಲೆ ನಿನ್ನ ಕುದುರೆಗೆ ತಡಿ ಹಾಕಿಸು. ಅಕೋ, ದುಃಖಭರಾರ್ತಳಾದ ಮಲುಂದ ದೇವಿಯ ಮೂರ್ತಿಯು ನನ್ನ ಕಣ್ಣೆದುರಿಗೆ ಕಟ್ಟಿದಂತಾಗಿದೆ. ಏಳೆಲ್ಲಿ! ಸ್ನಾನ-ಭೋಜನಾದಿಗಳ ವಿಚಾರವನ್ನು ಮಾಡದೆ ನೀನೀಗಲೆ ಹಾದೀ ಹಿಡಿ!" ಎಂದು ಆಜ್ಞಾಪಿಸಿದಳು.

ಆಗ ಉದಿಲ್ಲನೆದ್ದು ತಾಯಿಗೆ ಅಂದದ್ದು: "ಅಮ್ಮಾ, ಪುರಮಲ್ಲನಿಗೆ ದೇಹಾಂತ ಶಾಸನವನ್ನು ವಿಧಿಸದೆ ಬಿಡುವದಿಲ್ಲೆಂದು ನಾವು ನಿಶ್ಚಯಿಸಿರುತ್ತೇವೆ. ಮಗನಿಗೆ ಹಗೆಗಳಾದ ನಾವು ತಾಯಿಗೆ ಹಿತವಂತರಾಗುವ ಬಗೆಹೇಗೆ?"

"ಮಗುವೆ, ಪುರಮಲ್ಲನು ತಪ್ಪುಗಾರನು ಸರಿ. ಆದರೆ ನಾವು ಇಂಥ ದುರ್ಘಟವಾದ ಸಮಯದಲ್ಲಿ ರಾಜನ ದೋಷಗಳನ್ನೆಣಿಸದೆ ನಮ್ಮ ಮಾತೃಭೂಮಿಯ ಕಡೆಗೆ ಲಕ್ಷಕೊಟ್ಟು ಕೆಲಸ ಮಾಡತಕ್ಕದ್ದು. ರಾಜನು ಕರ್ತವ್ಯ ಪರಾಙ್ಮುಖನಾದನೆಂದು ಅಂಥದೇ ತಪ್ಪನ್ನು ನಾವು ಮಾಡತಕ್ಕದ್ದಲ್ಲ."

"ಉದಾರಚರಿತಳಾದ ನನ್ನ ಮಾತೆಯೆ, ನಾವು ಮಹೋಬಾದ ರಾಜ್ಯ ದಿಂದ ಹೊರಗಕ್ಕೆ ಹಾಕಿಸಿಕೊಂಡು ಬರುವಾಗಲೇ ಆ ಸಿಂಹಾಸನದ ನಿಷ್ಠೆಯನ್ನು ಅಲ್ಲಿಯೇ ಹರಿದೊಗೆದು ಬಂದೆವು. ನಾವೀಗ ಪ್ರಜರಲ್ಲ; ಪುರಮಲ್ಲನು ರಾಜನಲ್ಲ. ರಾಜನಿಷ್ಠೆ ಮತ್ತಿನ್ನೆಲ್ಲಿಯದು?"

" ಛೀಃ ! ತಿಳಿಗೇಡಿಗಳಿರಾ, ರಾಜನು ಪ್ರಸನ್ನನಾಗಿ ನಿಮ್ಮ ಬಯಕೆಗಳನ್ನು ಪೂರೈಸುತ್ತಿರುವಾಗ ಮಾತ್ರ ಅವನ ಇಚ್ಛಾನುವರ್ತಿಯಾಗಿ ನಡೆಯುವವನು ರಾಜನಿಷ್ಠನೆಂದು ಹೇಳಬಹುದೆ ? ಇದು ಬಣಜಿಗರ ವ್ಯಾಪಾರವು. ಸಿಂಹಾಸನದಲ್ಲಿರುವ ನಿಶ್ಚಲವಾದ ಪ್ರೇಮಕ್ಕೆ ಮಾತ್ರ ರಾಜನಿಷ್ಠೆಯೆಂಬ ಹೆಸರು. ಆ ಸಿಂಹಾಸನದ ಮೇಲೆ ಕುಳ್ಳಿರಲು ಹುಟ್ಟಿದ ಗೊಂಬೆಯಾದ ಪುರಮಲ್ಲನ ತಪ್ಪುಗಳನ್ನೆಣಿಸಿ ನಾವು ಆ ಸಿಂಹಾಸನದ ಉಪೇಕ್ಷೆ ಮಾಡಕೂಡದು. ನಿಮ್ಮನ್ನು ಹಡೆದವರು ಮಹೋಚ್ಚವಾದ ಸಿಂಹಾಸನವನ್ನು ಜೀವದ ಹಂಗುದೊರೆದು ಭದ್ರವಾಗಿ ಸ್ಥಾಪಿಸಿ, ಅದನ್ನು ಕಾಪಾಡಿಕೊಂಡು ಹೋಗುವ ಭಾರವನ್ನು ನಿಮ್ಮ ಮೇಲೆ ಆಸ್ಥೆಯಿಂದ ಹೊರಿಸಿ ಪರಲೋಕವಾಸಕ್ಕೆ ತೆರಳಿದಾಗ ನೀವಿಂಥ ಪಿತೃದ್ರೋಹವನ್ನು ಚಿಂತಿಸುವಿರಾ ? ವಿಚಾರ ತಿಳಿದು ನೋಡಿರಿ " ಎಂದು ಆ ಪತಿವ್ರತೆಯಾದ ಮಹಾಸತಿಯು ಬೋಧಿಸಿದಳು.

" ಜಸ್ಸರಾಜರ ವಿಚಾರಗಳೂ ಅವರ ರಾಜನಿಷ್ಠೆಯೂ ಅವರ ಚಿತೆಯಲ್ಲಿ ಸುಟ್ಟುಹೋದವು. ಮಾನಧನರಾದ ನಾವು ಪುರಮಲ್ಲನು ಮಾಡಿದ ಅಪರಾಧವನ್ನು ಮರೆಯುವದೂ ಇಲ್ಲ; ಪುರಮಲ್ಲನನ್ನು ಕ್ಷಮಿಸುವದೂ ಇಲ್ಲ ! " ಎಂದು ಉದಿಲ್ಲನು ಮತ್ತೆ ಸಿಟ್ಟಿನಿಂದ ನುಡಿದನು.

ಈ ಮಾತು ಕೇಳಿ ದೇವಲದೇವಿಗೆ ಪರಮಾವಧಿಯ ಸಂತಾಪವಾಯಿತು. ಅವಳು ಭರದಿಂದೆ ಮುಂದಕ್ಕೆ ಬಂದು ಉದಿಲ್ಲನ ಕೈಯಲ್ಲಿಯ ಖಡ್ಗವನ್ನು ಸೆಳಕೊಂಡು " ಹೇಡಿಯೆ, ಕ್ಷತ್ರಿಯರ ಆಯುಧವನ್ನು ಧರಿಸಲು ನೀನು ಸರ್ವಥಾ ಅಯೋಗ್ಯನಾಗಿರುವಿ. ಪರಾಕ್ರಮಶಾಲಿಗಳಂತೆ ಯುದ್ಧಮಾಡಿ ಜನ್ಮಭೂಮಿಗೆ ತಗಲಿರುವ ಕಲಂಕವನ್ನು ದೂರಮಾಡುವ ಸಾಮರ್ಥ್ಯವಿಲ್ಲದ್ದಕ್ಕಾಗಿ ನೀನು ಇಲ್ಲದ ನೆವ ಹೇಳಿ ಪ್ಯೈಗಳಂತೆ ಮನೆಯಲ್ಲಿ ಕುಳ್ಳಿರಬೇಕೆನ್ನುವಿ. ಜಸ್ಸರಾಜರ ವೀರ್ಯಕ್ಕೆ ಹುಟ್ಟಿ, ಮೇಲೆ ನನ್ನ ಹಾಲು ಕುಡಿದು ನೀನಿಂಥ ಅಭದ್ರವಾದ ಮಾತಾಡುವಿಯಾ ? ನಿನ್ನಂಥ ಅಧಮನನ್ನು ಕಂಡು ಇವನು ಜಸ್ಸರಾಜನ ಮಗನಲ್ಲವೆಂದು ಶಂಕಿಸಿ ಯಾರಾದರೂ ನನಗೆ ಜಾರಿಣಿಯೆಂಬ ಅಪಶಬ್ದವನ್ನಿಟ್ಟಾರು. ಮೂರ್ಖಾ, ಬುದ್ಧಿಯನ್ನೆಲ್ಲಿಟ್ಟಿರುವಿ ? ನಡೆ ನನ್ನೆದುರಿನಲ್ಲಿ ನಿಲ್ಲಬೇಡ ! ಯಾರಲ್ಲಿ ? ಜವಾನಸಿಂಗ, ನನ್ನ ಕುದುರೆಗೆ ತಡಿ ಹಾಕಿಸಿ ಸಿದ್ಧಮಾಡು. ಮಲಂದದೇವಿಗೆ ನಾನು ಕೊಟ್ಟಿರುವ ವಚನ

ವನ್ನು ಪಾಲಿಸುವದಕ್ಕಾಗಿ, ನಾನೇ ರಣಾಂಗಣದಲ್ಲಿ ಹೊಕ್ಕು ಶತ್ರುಸಂಹಾರ ವನ್ನು ಮಾಡುವೆನು. ಗಂಡಸರೆಂಬವರು ಬಂದು ನನ್ನ ಪರಾಕ್ರಮವನ್ನಾದರೂ ನೋಡಲಿ!" ಎಂದು ಮಂದಿರವೆಲ್ಲ ಗದ್ದರಿಸುವಂತೆ ಉಚ್ಚಧ್ವನಿಯಿಂದ ಮಾತಾಡಿದಳು.

ಹೀಗೆ ಆವೇಶವನ್ನು ತಾಳಿ ಆದಿಶಕ್ತಿಯಂತೆ ಅರ್ಭಟಿಸಿ ಮಾತಾಡುತ್ತಿರುವ ಶಸ್ತ್ರಪಾಣಿಯಾದ ಮಾತೆಯನ್ನು ಕಂಡು, ಆ ಲೋಕೈಕವೀರರ ಮದವೆಲ್ಲ ಇಳಿದುಹೋಯಿತು. ಯಾವ ಮಾತೆಯ ಉತ್ಸಂಗದಲ್ಲಿ ಯಥೇಷ್ಟವಾಗಿ ಕುಣಿಕುಣಿದಾಡಿ ಸುಹಾಸಯುತವಾದ ಅವಳ ಪ್ರೇಮಲವಾದ ಮುಖಾಂಭೋಜವನ್ನು ಕಂಡು ಚನ್ನಾಟ ಮಾಡುತ್ತಿದರೋ, ಆ ಮಾತೆಯು ಇವಳೇ ಅಹುದೇನೆಂದು ಆ ತರುಣರು ಅವಳ ಮುಖವನ್ನು ಮಿಕಿಮಿಕಿ ನೋಡಿದರು. ಮಾತೃದೇವತೆಯ ಅನುಲ್ಲಂಘನೀಯವಾದ ಆಜ್ಞೆಯನ್ನು ತತ್ಕಾಲವೇ ಶಿರಸಾವಹಿಸದಿದ್ದ ಔದ್ಧತ್ಯಕ್ಕಾಗಿ ಅವರಿಗೆ ಪಶ್ಚಾತ್ತಾಪವಾಯಿತು. ಕೂಡಲೆ ಅವರು ಆ ಮಹಾಸತಿಯ ಕಾಲುಗಳನ್ನು ಗಟ್ಟಿಯಾಗಿ ಹಿಡುಕೊಂಡು ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರು

ಮಾತೆಯೋ ಅವಳು. ಕಾಲ್ಗೆರಗಿದ ಮಕ್ಕಳನ್ನು ಎತ್ತಿ ತಬ್ಬಿಕೊಂಡು ಅವರ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿ ಅವಳಂದದ್ದು: "ವೀರಮಣಿಗಳೇ, ನಾನು ನಿಮ್ಮನ್ನು ಕ್ಷಮಿಸಿದ್ದೇನೆ. ಎಳರಿನ್ನು, ಮಲುಂದದೇವಿಯರು ಚಂದ್ರಶಾಲೆಯಲ್ಲಿ ನಿಂತು ನಿಮ್ಮ ಮಾರ್ಗಪ್ರತೀಕ್ಷೆ ಮಾಡುತ್ತಿರುವರಂತೆ. ವಿಲಂಬ ಮಾಡದೆ ಅವರನ್ನು ಕಾಣಿಸಿಕೊಂಡು ಸುರರು ಕೊಂಡಾಡುವಂತೆ ಯುದ್ಧ ಮಾಡಿರಿ."

ಸಂಗಡಲೆ ಹೊರಡುವ ಸಿದ್ಧತೆಯಾಯಿತು. ಅಲಾ ಉದಿಲ್ಲರು ವೀರರಿಗುಚಿತವಾದ ಪೋಷಾಕು ಮಾಡಿಕೊಂಡು ಅಶ್ವಾರೂಢರಾಗಿ ನಿಂತರು. ದೇವಲದೇವಿಯು ತಾನೊಂದು ಮಂಗಲೋತ್ಸವಕ್ಕಾಗಿ ಸಂಭ್ರಮದಿಂದ ಹೊರಟಿರುವಳೋ ಎಂಬಂತೆ ನಗೆಮುಖವನ್ನು ತಳೆದು ತನ್ನ ಅಂದಣವನ್ನೇರಿದಳು. ಕನೋಜದ ಕೆಲಜನ ಭಟರೂ ಅಲಾ ಉದಿಲ್ಲರ ಅನುಯಾಯಿಗಳೂ ರಣಗರ್ಜನೆಯನ್ನು ಮಾಡುತ್ತ ಮಹೋಬಾದ ಮಾರ್ಗವನ್ನು ಹಿಡಿದು ನಡೆದರು

ಪುರಮಲ್ಲರಾಜನೂ ಅವನ ರಾಣಿಯಾದ ಮಲುಂದದೇವಿಯೂ ಅಲಾ

ಉದಿಲ್ಲರನ್ನೂ ದೇವಲದೇವಿಯನ್ನೂ ಎದಿರ್ಗೊಂಡು ಕರಕೊಂಡು ಹೋಗಲು ಅರ್ಧ ಹಾದಿಗೆ ಬಂದಿದ್ದರು. ಪುರಮಲ್ಲನು ರಾಜನಾಗಿದ್ದರೂ ಅಭಿಮಾನವನ್ನು ಬಿಟ್ಟು ಅಲಾ ಉದಿಲ್ಲರನ್ನು ಆದರದಿಂದ ಅಪ್ಪಿಕೊಂಡು ತಾನು ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದು ಆ ಬಂಧುದ್ವಯಂಗೆ ಬೇಡಿಕೊಂಡನು. ಮಲುಂದದೇವಿಯು ದೇವಲದೇವಿಯ ಕೈಹಿಡಿದು “ಬನ್ನಿರಿ ವೀರಮಾತೆಯರೆ, ನೀವಿಂಥ ಮಹಾತ್ಮರಾದ ಮಕ್ಕಳನ್ನು ಹಡೆದು ದೇಶಸಂರಕ್ಷಣದಂಥ ಪವಿತ್ರವಾದ ಮಹತ್ಕಾರ್ಯವನ್ನು ಮಾಡಿಸಿ ಇಹಪರಗಳಲ್ಲಿಯೂ ಖ್ಯಾತಿವತಿಯರಾಗುವಿರಿ. ರಜಪೂತಮಾತೆಯ ಮಾಹಾತ್ಮ್ಯವು ಯಾರಿಗೂ ಬಾರದು.” ಎಂದು ಸಂಭಾವಿಸಿ ಅವಳನ್ನು ತನ್ನ ಮೇಣೆಯಲ್ಲಿ ಕುಳ್ಳಿರಿಸಿಕೊಂಡು ರಾಜಧಾನಿಯ ಮಾರ್ಗವನ್ನು ಹಿಡಿದಳು. ದೇವಲದೇವಿಯ ಮಕ್ಕಳು ರಾಜನೊಡನೆ ಉತ್ಸಾಹದಿಂದ ಆಲೋಚನ ಮಾಡುತ್ತ ಮಹೋಬಾ ನಗರಕ್ಕೆ ಹೊರಟರು.

ಅಲಾ ಉದಿಲ್ಲರು ಮಹೋಬಾಕ್ಕೆ ಬಂದರೆಂಬ ವರ್ತಮಾನವನ್ನು ಕೇಳಿ ಪೃಥ್ವೀರಾಜನು ಪುರಮಲ್ಲನನ್ನು ಯುದ್ಧಕ್ಕೆ ಆಹ್ವಾನಮಾಡಿ, ಬೇಕಾದರೆ ಇಂದಿಗೇಳನೆಯ ದಿವಸ ಯುದ್ಧ ಪ್ರಾರಂಭವಾಗಲೆಂದೂ ಇಲ್ಲದಿದ್ದರೆ ಜಯಪತ್ರವನ್ನು ಕೊಟ್ಟು ದಿಲ್ಲಿಯ ಮಾಂಡಲಿಕನಾಗಿರಬೇಕೆಂದೂ ತಿಳಿಸಿದನು. ಇಷ್ಟು ಅತಿತರಾತುರತೆಯಿಂದ ಯುದ್ಧಕ್ಕೆ ಸನ್ನದ್ಧನಾಗಲು ಆಸ್ಪದವಿರಲಿಲ್ಲ. ಆಪ್ತಾಲೋಚನೆಗಳ ಮೇಲೆ ಆಪ್ತಾಲೋಚನೆಗಳು ನಡೆದವು.

ಆಗ ದೇವಲದೇವಿಯು ತನ್ನ ಜ್ಯೇಷ್ಠಪುತ್ರನನ್ನು ಕರೆದು “ಅಲಾ, ಯುದ್ಧಕ್ಕೆ ಹೊರಡಲು ನಿನಗೆ ಅವಕಾಶ ಬೇಕಾಗಿರುವದೇನು? ತಿಂದುಂಡು ಮೈಯಲ್ಲಿ ಪುಷ್ಟಿಯನ್ನು ತಂದುಕೊಳ್ಳಲು ಸಮಯವನ್ನು ಬೇಡುವಿರಾ?” ಎಂದು ಜರಿದು ಕೇಳಿದಳು.

ಈ ಮಾತು ಕೇಳಿ ಅಲಾನು ಕಿಂಚಿತ್ ಕ್ರುದ್ಧನಾಗಿಯೂ, ಕಿಂಚಿತ್ ಮಂದಸ್ಮಿತನಾಗಿಯೂ ತಾಯಿಯನ್ನು ಕುರಿತು “ಯಾರಿಗೆ ಈ ಮಾತಾಡುವಿ ಮಾತೆ? ಈ ನಿನ್ನ ಮಗನು ರಣರಂಗದಲ್ಲಿ ಹೋಗಲು ಅವಕಾಶವನ್ನು ಬೇಡುವ ಹುಡುಗನೆ? ನೀರಡಿಸಿರುವ ನನ್ನೀ ಖಡ್ಗವು ಶತ್ರುಗಳ ರಕ್ತಪಾನವನ್ನು ಮಾಡಲು ಹಾತೊರೆಯುತ್ತಿರುವದು. ಆದರೇನು ಮಾಡಲಿ, ಪುರ

ಮಲ್ಲನು ರಣಕ್ಕೆ ಅಂಜಿ ಜಕಜಕನೆ ಜರಿಯುತ್ತಿರುವನು. ಹೇಡಿಯು ಬೆನ್ನು ಕಟ್ಟಬಾರದೆಂದು ಏಕೆ ಅನ್ನುತ್ತಾರೆ? ಈ ಪುರಮಲ್ಲನ ಬೆನ್ನು ಕಟ್ಟಬಂದವನಾದ ನಾನು ಈಗಲೆ ನಿಮ್ಮ ನಿಂದೆಗೆ ಗುರಿಯಾದೆನಲ್ಲ! ''

'' ಚಿಂತೆಯಿಲ್ಲ, ಬಹದ್ದರನಾದ ನನ್ನ ಮಗನೆ! ಆದರೂ ಪುರಮಲ್ಲನು ರಣಭೂಮಿಯನ್ನು ಹೊಗಲು ಮೀನಮೇಷ ಮಾಡುತ್ತಿರುವದನ್ನು ಕಂಡು ನನಗೆ ಅತಿಶಯವಾದ ವಿಷಾದವಾಗುತ್ತದೆ. ನಾನೀಗಲೆ ಮಲುಂದ ದೇವಿಯನ್ನು ಕಂಡು ಅವಳ ಮುಖಾಂತರವಾಗಿ ಮೂಢನಾದ ಅವಳ ಗಂಡನನ್ನು ಇಂದೆಯೇ ರಣಕ್ಕೆ ಅಟ್ಟುವಂತೆ ಮಾಡುವೆನು. ''

ಇಂದು ವೀರರೆಲ್ಲರೂ ಯುದ್ಧಕ್ಕೆ ಹೊರಡುವವರು. ಸುಗಂಧ ತೈಲಗಳನ್ನು ಹಚ್ಚಿಕೊಂಡು ಅವರು ಅಭ್ಯಂಗ ಸ್ನಾನ ಮಾಡಿದರು; ಕನ್ನಡಿಯಂತೆ ಹೊಳಪಾಗಿರುವ ತಮ್ಮ ಶಸ್ತ್ರಗಳ ಧಾರೆಯನ್ನು ಪರೀಕ್ಷಿಸಿ ನೋಡಿದರು ತಮ್ಮ ಪ್ರೀತಿಯ ಕುದುರೆಗಳಿಗೆ ಉತ್ತಮೋತ್ತಮವಾದ ತಿನಿಸು ನೀಡಿದರು; ಭೋಜನೋತ್ತರ ಮಿತ್ರರೆಲ್ಲರೂ ಕೂಡಿ ಅಫೀಮಿನ ಗುಳಿಗೆಗಳನ್ನು ಸೇವಿಸಿ ಕುಸುಂಬಿಯ ಕಾಡೆಯನ್ನು ಕುಡಿದು ಹುರುಪಾದರು. ಬಳಿಕ ಕೇಸರೀ ಬಣ್ಣದ ಪೋಷಾಕು ಮಾಡಿಕೊಂಡು ಅಪ್ಸರಿಸ್ತ್ರರ ಕಡೆಯ ಭೆಟ್ಟಿಯನ್ನು, ಆನಂದ ಭರಿತವಾದ ಮುಖಮುದ್ರೆಯನ್ನು ತಳೆದು, ತೆಗೆದುಕೊಂಡು ರಣರಂಗವನ್ನು ಪ್ರವೇಶ ಮಾಡಿದರು.

ಸುಂದರನೂ, ಪೀನೋನ್ನತವಾದ ದೇಹವುಳ್ಳವನೂ ಆದ ಅಲಾರಾಯನು ಕೇಸರೀ ಬಣ್ಣದ ಪೋಷಾಕು ಮಾಡಿಕೊಂಡು ದಟ್ಟಾಗಿರುವ ತನ್ನ ಮೀಸೆಗೆ ಒಳಿತಾಗಿ ಹುರಿಯಿಕ್ಕಿ ಕೈಯಲ್ಲಿ ಬಿಚ್ಚುಗತ್ತಿಯನ್ನು ಹಿಡುಕೊಂಡು ತನ್ನ ಮಾತೆಯ ಪಾದವಂದನಕ್ಕಾಗಿ ಬಂದು ಅವಳ ಎದುರಿನಲ್ಲಿ ಮಂದಸ್ಮಿತನಾಗಿ ನಿಂತುಕೊಂಡನು ಭೀಮಸೇನನಂತೆ ವಿಕ್ರಮಶಾಲಿಯಾದ ಮಗನ ಪ್ರಫುಲ್ಲಿತವಾದ ಮುಖವನ್ನೂ, ಅವನ ವಿಚಿತ್ರವಾದ ವೇಷವನ್ನೂ ಕಂಡು ಆ ಮಾತೆಯು ಕೃತಾರ್ಥಳಾಗಿ ಅವನನ್ನು ಅಪ್ಪಿಕೊಂಡು ಹರಿಸಿ '' ಅಲಾರಾಯಾ, ನಿನ್ನ ಭುಜದ ಮೇಲೆ ವಿಜಯುಲಕ್ಷ್ಮಿಯು ನಲಿದಾಡಲಿ! ಕಡಿದ ಬಂಟನಾಗಿ ಶತ್ರುಗಳ ಎದೆಯನ್ನೂ, ವೀರಸ್ವರ್ಗದ ಸೋಪಾನವನ್ನೂ ಮೆಟ್ಟುವವನಾಗು. ನೀನೀಗ ಕೇಸರೀ ಬಣ್ಣದ ಪೋಷಾಕು ಮಾಡಿಕೊಂಡಿ

ರುವಿ. ನೀನು ದೇವಪುರುಷನಾದಿ. ಈ ವೇಷಕ್ಕೆ ಸದೃಶವಾದ ಪರಾಕ್ರಮ ವನ್ನು ಮಾಡಿತೋರಿಸು. ಮತ್ತೇನು ಹೇಳಲಿ ? ”

ಅಷ್ಟರಲ್ಲಿ ಉದಿಲ್ಲನೂ ಕೇಸರೀ ಪೋಷಾಕು ಮಾಡಿಕೊಂಡು ತನ್ನ ಖಡ್ಗವನ್ನು ಒಯ್ಯಾರದಿಂದ ಬೀಸಾಡುತ್ತ ಬಂದು ದೇವಲದೇವಿಯ ಕಾಲ್ಗೆರಗಿ ಉಲ್ಲಾಸದಿಂದ ನಗುತ್ತ ನಿಂತನು.

“ ಉದಿಲ್ಲ, ನೀನೇತಕೆಂಥ ಪೋಷಾಕು ಮಾಡಿಕೊಂಡಿ ? ನಿನ್ನನ್ನು ನಗರರಕ್ಷಣಕ್ಕಾಗಿ ನಿಯಮಿಸಿದ್ದಿಲ್ಲವೆ ? ” ಎಂದು ತಾಯಿಯು ತುಸು ಚಕಿತಳಾಗಿ ಕೇಳಿದಳು

“ ಅಮ್ಮಾ, ನಿನ್ನ ಪ್ರಶ್ನಗಳಿಂದಿನ್ನೇನು ಪ್ರಯೋಜನ ? ತೊಟ್ಟ ಬಳಿಕ ಈ ಪೋಷಾಕವನ್ನಿನ್ನು ಕಳೆಯಬಾರದಷ್ಟೆ ? ” ಎಂದು ಉದಿಲ್ಲನು ಅಲಾರಾಯನ ಮುಂದೀಲದ ಚುಂಗನ್ನು ಚನ್ನಾಗಿ ಸಿಕ್ಕಿಸುತ್ತ ನುಡಿದನು. ( ಬ್ರಾಹ್ಮಣರಲ್ಲಿ ಇದಕ್ಕೂ ಘೋರತರವಾದ ಪ್ರತಿಜ್ಞೆಯಿರುವದು. ಅವರು ಊಟಕ್ಕೆ ಕುಳಿತಾಗ ಒಂದಾವರ್ತಿ ಕಡೆಯ ಆಪೋಶನವನ್ನು ತೆಗೆದು ಕೊಂಡರೆ ಪುನಃ ಒಂದು ತುತ್ತು ಕೂಡಾ ಬಾಯಿಯಲ್ಲಿ ಹಾಕಲಿಕ್ಕಿಲ್ಲ ! )

ಉದಿಲ್ಲನ ಸಲೀಲವಾದ ನುಡಿ ಕೇಳಿ “ ನಿನಗೀ ಪೋಷಾಕು ಮಾಡಿ ಕೊಳ್ಳಲು ಯಾರು ಹೇಳಿದರು ? ” ಎಂದು ದೇವಲದೇವಿಯು ಕೇಳಿದಳು.

“ ಯಾರೇಕೆ ಹೇಳಬೇಕು ಅವ್ವಾ ? ಈ ನಮ್ಮ ಅಣ್ಣನೂ ನಾನೂ ಭಾಗಾದಿಗಳಷ್ಟೆ ? ಸಮಸ್ತವಾದ ವಸ್ತುಗಳಲ್ಲಿ ಇವನೂ ನಾನೂ ಸಮಪಾಲು ಗಾರರು. ಹೀಗಿರಲು ಈ ಕೃತ್ರಿಮಭಾವದವನು ನನ್ನ ಪಾಲಿಗೆ ಈ ಮಣ್ಣಿನ ಭೂಮಿಯನ್ನಿಟ್ಟು ತಾನೊಬ್ಬನೇ ವೀರಸ್ವರ್ಗವನ್ನು ಆಕ್ರಮಿಸುವನೆಂದರೆ ನಾನು ಕೇಳುವೆನೆ ? ”

ಧನ್ಯತೆಯ ಭರದಲ್ಲಿ ದೇವಲದೇವಿಯು ಓಡಿಬಂದು ತನ್ನ ಕಡೆಹುಟ್ಟ ಮಗನಾದ ಉದಿಲ್ಲನನ್ನು ಗಟ್ಟಿಯಾಗಿ ಅಪ್ಪಿಕೊಂಡು ಆನಂದಾಶ್ರುಗಳನ್ನು ಸುರಿಸಿದಳು.

“ ಅಮ್ಮಾ, ಬೇಗನೆ ನಮಗೆ ಅಪ್ಪಣೆಕೊಡು. ನಾವು ಮಾಡುವ ಕಾಲಹಾನಿಯನ್ನು ನಮ್ಮ ರಾಜನು ಕ್ಷಮಿಸಿದರೂ ಕ್ಷಮಿಸುವನು, ಆದರೆ ನನ್ನ ಕುದುರೆಯು ಒಂದು ಕ್ಷಣದ ತಡವನ್ನೂ ಕ್ಷಮಿಸಲಾರದು. ಕೇಳಿದಿಯಾ

ಘೋಮನ್‌ಬಹಾದ್ದರನು ಹೇಗೆ ಉಚ್ಚಸ್ವರಿಂದ ಹೇಂಕರಿಸಿ ನನ್ನನ್ನು ಕರೆಯುತ್ತಿರುವನು!"

"ಹೋಗಿ ಬನ್ನಿರಿ ನನ್ನ ಮುದ್ದುಮಕ್ಕಳೆ! ಕಂಡಿರೋ, ಯುದ್ಧ ಮಾಡುವಾಗ ಬೇರೆ ವಿಚಾರಗಳಿಗೀಡಾಗದೆ ಕೀರ್ತಿಯನ್ನೊಂದನ್ನೇ ಅನು ಲಕ್ಷಿಸಿ ಸಾಹಸಮಾಡಿರಿ. ನಿಮ್ಮನ್ನು ಹಡೆದಾಗ ನನಗೆಷ್ಟು ಸಂತೋಷವೊ, ಅದಕ್ಕಿಮ್ಮಡಿಯಾದ ಸಂತೋಷವು ನೀವು ವೀರರಂತೆ ಯುದ್ಧಮಾಡಿ ರಣದಲ್ಲಿ ಮಡಿದ ವರ್ತಮಾನವನ್ನು ಕೇಳಿದಾಗ ಆಗುವದು. ಅಮಂಗಲವು ದೂರ ವಾಗಲಿ! ನೀವು ವಿಜಯಿಗಳೇ ಆಗಿ ಮರಳಿ ಬರುವಿರೆಂದು ನಾನು ಆಶಿಸು ತ್ತೇನೆ" ಎಂದು ದೇವಲದೇವಿಯು ಪೊಂದಟ್ಟಿಯಲ್ಲಿಯ ಅನರ್ಘವಾದ ಮುತ್ತುಗಳನ್ನು ತೆಗೆದುಕೊಂಡು ಮಕ್ಕಳ ಮೇಲೆ ನಿವಾಳಿಸಿ ಚಲ್ಲಿ ಅವರನ್ನು ಆಶೀರ್ವದಿಸಿ ಕಳಿಸಿಕೊಟ್ಟಳು.

ಏನಂದರೇನು? ಇಂಥ ಪ್ರಸಂಗದಲ್ಲಿ ಹಡೆದ ತಾಯಿಯ ಕರುಳು ಕರಗಿ ನೀರಾಗದಿರುವದೆ? ಅಲಾಉದಿಲ್ಲರು ಉತ್ಸಾಹದಿಂದ ತಮ್ಮ ಕುದುರೆ ಗಳನ್ನೋಡಿಸುತ್ತ ಹೋಗಿ, ದೇವಲದೇವಿಯ ಕಣ್ಮರೆಯಾದ ಕೂಡಲೆ ಆ ಅಬಲೆಯ ಕಣ್ಣುಗಳಲ್ಲಿ ಅಶ್ರುಗಳೊತ್ತಿಬಂದವು. ಯಾರಿಗೂ ತೋರಗೊಡ ದಂತೆ ಅವಳು ಆ ಸವಿಯಾಗದಿರುವ ನೀರಹನಿಗಳನ್ನು ಮೆಲ್ಲನೆ ಒರಸಿಕೊಂಡು ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿಟ್ಟು ಭಗವಂತನ ಮಂಗಲಪ್ರದ ವಾದ ಸ್ತುತಿಯುಳ್ಳ ಪದಗಳನ್ನು ಹಾಡುತ್ತ ಕುಳಿತಳು.

ಕಥೆಯನ್ನು ಕೇಳುವವರಿಗೆ ಬೇಸರಿಕೆಯೇ ಇರುವದಿಲ್ಲ. ಇಷ್ಟಾದ ಬಳಿಕ ಮುಂದೇನಾಯಿತೆಂದು ಅವರು ಕಥೆಗಾರರನ್ನು ಪೀಡಿಸಿ ಕೇಳುವವರೇ. ಇದರೆ ಕಥೆಗಾರನ ಗತಿಯೇನು? ಮುಂದಿನ ಸಂಗತಿಗಳನ್ನು ಅರಿತು ಕೊಳ್ಳುವ ಲವಲವಿಕೆ ವಾಚಕರಿಗಿದ್ದರೆ ಇತಿಹಾಸದ ಪುಸ್ತಕಗಳಿವೆ, ಹುಡುಕಾಡಿ ನೋಡಲಿ.

---

# ನೂರಜಹಾನ

ತನ್ನ ಅನುಪಮೇಯುವಾದ ಸೌಂದರ್ಯ ಮತ್ತು ಆಶ್ಚರ್ಯಪೂರ್ಣವಾದ ಚರಿತ್ರ ಇವುಗಳ ಯೋಗದಿಂದ ಇಡೀ ಜಗತ್ತಿನ ಇತಿಹಾಸದಲ್ಲಿ ಚಿರಸ್ಮರಣೀಯುವಾಗಿದ್ದ ನೂರಜಹಾನಳಿಗೆ ಸರಿಯಾದ ಸುಪ್ರಸಿದ್ಧ ಸ್ತ್ರೀಯರು ವಿರಳವಾಗಿಯೇ ದೊರೆಯುವರು. ಆಸೀರಿಯಾ ಪ್ರಾಂತದಲ್ಲಿ ಸೇಮಿರಾಮಿಸ ರಾಣಿಯು ಅಥವಾ ಇಜಿಪ್ತ ದೇಶದಲ್ಲಿ ಕ್ಲಿಯೋಪಾಟ್ರಾ ರಾಣಿಯು ತಮ್ಮ ಅನಿಯಂತ್ರಿತವಾದ ಅಧಿಕಾರವನ್ನು ನಡೆಸಿದಂತೆ ಸಾರ್ವಭೌಮ ಬಾದಶಹಾ ಜಹಾಂಗೀರನ ಮೇಲೂ ಅವನ ಪ್ರಚಂಡವಾದ ರಾಜ್ಯದ ಮೇಲೂ ನೂರಜಹಾನ ಇವಳು ಇಪ್ಪತ್ತು ವರ್ಷಗಳ ವರೆಗೆ ತನ್ನ ಅಖಂಡವಾದ ಸತ್ತೆಯನ್ನು ನಡೆಸಿದಳು.

ಈ ಸೌಂದರ್ಯಶಾಲಿನಿಯಾದ ಸ್ತ್ರೀಯ ಬಾಲಕತನದ ಮತ್ತು ಪ್ರೌಢತ್ವದ ಇತಿಹಾಸವು ಸರ್ವತ್ರ ಆಶ್ಚರ್ಯಮಯುವಾಗಿ ಕಂಡುಬರುತ್ತದೆ. ನೂರಜಹಾನಳ ತಂದೆಯಾದ ಖ್ವಾಜಾಅಯಾಸ ಇವನು ಪಶ್ಚಿಮತಾರ್ತರಿಯ ಮೂಲನಿವಾಸಿಯಾಗಿದ್ದು, ತನ್ನ ದೈವಪರೀಕ್ಷೆಯನ್ನು ಮಾಡುವದರ ಸಲುವಾಗಿ ಜನ್ಮಭೂಮಿಯನ್ನು ಬಿಟ್ಟು ಹಿಂದುಸ್ಥಾನಕ್ಕೆ ಬಂದಿದ್ದನು. ಸುಪ್ರಸಿದ್ಧವಾದ ಒಂದು ದೊಡ್ಡ ಕುಲದಲ್ಲಿ ಇವನು ಜನ್ಮವನ್ನು ತಾಳಿದ್ದರೂ ದುರ್ದೈವದ ಚಕ್ರದಲ್ಲಿ ಸಿಲುಕಿ ಇವನ ಮನೆತನವು ತೀರ ಹೀನಸ್ಥಿತಿಗೆ ಬಂದು ಮುಟ್ಟಿತ್ತು. ಇವನಿಗೆ ಕೊಡುವದಕ್ಕೆ ಇವನ ತಂದೆಯ ಹತ್ತಿರ ದ್ರವ್ಯವಿರದಿದ್ದರೂ ಅವನಿಂದ ಇವನಿಗೆ ದೊರೆದ ವಸ್ತುವಿನ ಯೋಗ್ಯತೆಯು ದ್ರವ್ಯದಕಿಂತ ಎಷ್ಟೋ ಮಡಿಯಿಂದ ದೊಡ್ಡದಾಗಿತ್ತು. ಆ ದೊರೆದ ವಸ್ತುವೆಂದರೆ, ಉದಾರ ಶಿಕ್ಷಣವು ಈ ಶಿಕ್ಷಣದ ಸಂಸ್ಕಾರವು ಖ್ವಾಜಾಅಯಾಸ ಇವನ ಬುದ್ಧಿಯ ಮೇಲೆ ಹಾಗು ಅಂತಃಕರಣದ ಮೇಲೆ ಒಳಿತಾಗಿ ಆಗಿತ್ತು. ಇವನ ಮನೆತನದಂತೆ ಹೀನಸ್ಥಿತಿಯನ್ನು ಹೊಂದಿದ ಒಂದು ಮನೆತನದೊಳಗಿನ ಸುಸ್ವರೂಪಿಯಾದ ತರುಣಿಯ ಮೇಲೆ ಇವನು ತನ್ನ ತಾರುಣ್ಯದ ಪ್ರಾರಂಭದಿಂದಲೇ ಪ್ರೇಮ ಮಾಡಹತ್ತಿದ್ದನು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಅವರ

ವಿವಾಹವಾಗಿ ಉಭಯತರಲ್ಲಿ ಪತಿಪತ್ನಿಯರ ಸಂಬಂಧವು ಘಟಿತವಾಯಿತು. ಆ ಕಾಲಕ್ಕೆ ಉತ್ತರ ಭಾಗದಲ್ಲಿರುತ್ತಿದ್ದ ತಾರ್ತರ ಜನರಿಗೆ ದಾರಿದ್ರ್ಯದ ವ್ಯಥೆಯು ಅಸಹ್ಯವಾಗಹತ್ತಿತೆಂದರೆ, ಅವರು ಹಿಂದುಸ್ಥಾನದ ದಾರಿಯನ್ನು ಹಿಡಿಯುತ್ತಿದ್ದರು. ಮನೆಬಾಗಿಲವಿಲ್ಲದೆ! ಗೃಹಸ್ಥಾಶ್ರಮವನ್ನು ಆರಂಭಿಸಿದ ಖ್ವಾಜಾಅಯಾಸನಿಗಾದರೂ ಇದೇ ಮಾರ್ಗವನ್ನು ಅವಲಂಬಿಸಬೇಕಾಯಿತು.

ಪ್ರವಾಸದ ನಿಶ್ಚಯವಾದ ಕೂಡಲೆ ಖ್ವಾಜಾಅಯಾಸನು ತನ್ನ ಹತ್ತಿರ ವಿದ್ದ ಎಲ್ಲ ಚೂರುಚಾರು ಒಡಿವೆಗಳನ್ನು ಮಾರಿ, ಒಂದು ಕುದುರೆ ಮತ್ತು ಸ್ವಲ್ಪ ಹಣ, ಇಷ್ಟು ಸಾಮುಗ್ರಿಯನ್ನು ತನ್ನ ಸಂಗಡ ತೆಗೆದುಕೊಂಡು ಪತ್ನಿ ಸಮೇತನಾಗಿ ಹಿಂದುಸ್ಥಾನಕ್ಕೆ ಬರಬೇಕೆಂದು ಹೊರಟನು. ನಿಸರ್ಗತಃ ಕೋಮಲ, ಆದರಲ್ಲಿ ಗರ್ಭಿಣೀಸ್ಥಿತಿಯನ್ನು ಹೊಂದಿ ತೀರ ಅಶಕ್ತಳಾದ ತನ್ನ ಹೆಂಡತಿಯನ್ನು ಕುದುರೆಯ ಮೇಲೆ ಕುಳ್ಳಿರಿಸಿ, ಖ್ವಾಜಾಅಯಾಸನು ಅವಳ ಹಿಂದೆ ನಡೆಯಹತ್ತಿದನು.

ಕೆಲವು ಕಾಲದ ವರೆಗೆ ಎಲ್ಲ ಸಂಗತಿಗಳು ಸುಸೂತ್ರವಾಗಿ ನಡೆದವು. ಆದರೆ ಅವರು ಮಾಡತಕ್ಕ ಪ್ರವಾಸವು ಅವರು ಯೋಚಿಸಿದಷ್ಟು ಸವಿಸ್ತಾರ ವುಳ್ಳದ್ದಾಗಿದ್ದಿಲ್ಲ; ಹಾಗು ಹತ್ತರವಿದ್ದ ಗಂಟು ಸಾಕಾಗುವಂತಿದ್ದಿಲ್ಲ. ಹತ್ತಿರ ವಿದ್ದ ಎಲ್ಲ ಹಣವು ತೀರಿಹೋದ ಬಳಿಕ ಅವರು ದೊಡ್ಡ ಪೇಚಿನಲ್ಲಿ ಬಿದ್ದರು. ಭಿಕ್ಷೆಯ ವೃತ್ತಿಯನ್ನು ಸ್ವೀಕರಿಸಿ ಕೆಲವು ದಿವಸಗಳ ವರೆಗೆ ತಮ್ಮ ಮಾರ್ಗ ಕ್ರಮಣವನ್ನು ಮಾಡಿದರು. ಮುಂದೆ ಇವರು ಹಿಂದುಸ್ಥಾನ ಮತ್ತು ತಾರ್ತರಿ ಇವುಗಳ ಮಧ್ಯದಲ್ಲಿರುವ ನಿರ್ಜನವಾದ ಪ್ರದೇಶದ ಸೀಮೆಯನ್ನು ಹೊಕ್ಕ ಬಳಿಕ ಪ್ರಾರಂಭವಾದ ಇವರ ಕಷ್ಟಾಪೇಷ್ಟೆಗಳ ವರ್ಣನ ಮಾಡು ವದು ತೀರ ಅಶಕ್ಯವಾದದ್ದು. ಅಸಹ್ಯವಾದ ಕಟಕಟೆ ಚಳಿಯು; ರಾತ್ರಿ ಯಲ್ಲಾದರೂ ವಿಶ್ರಮಿಸಿಕೊಳ್ಳಬೇಕೆಂದರೆ ಗುಡಿಸಲ ಸಹ ಇಲ್ಲ; ಸಂಕಟ ದಲ್ಲಿ ಯಾರನ್ನಾದರೂ ಕರೆಯಬೇಕೆ ದರೆ, ಇವರ ಕೂಗು ಕೇಳಿ ಸಮೀಪದಲ್ಲಿ ರುವವರು ಯಾರಾದರೂ ಸಹಾಯಾರ್ಥ ಬಂದಾರೆಂದು ಕಲ್ಪಿಸುವದು ಸಹ ತೀರ ಅಸಂಭವವು; ಹಿಂದಕ್ಕೆ ತಿರುಗಿ ಹೋಗಬೇಕೆಂದರೆ, ತಮ್ಮ ದೇಶವು ಬಹಳೇ ದೂರ ಉಳಿದದ್ದರಿಂದ ಮಾರ್ಗದಲ್ಲಿ ಉಂಟಾಗುವ ಅಸಂಖ್ಯ ದುಃಖ ಗಳ ಕಲ್ಪನೆಯು ಅವರ ಮುಂದೆ ಬಂದು ನಿಲ್ಲುತ್ತಿತ್ತು; ಮುಂದೆ ಹೋಗ

ಬೇಕೆಂದರೆ, ಆ ನಿರ್ಜನವಾದ ಪ್ರದೇಶದಲ್ಲಿ ಮರಣದ ಹೊರತು ಎರಡನೆಯ ಗತಿಯೇ ಇದ್ದಿದ್ದಿಲ್ಲ.

ಆದರೂ ಆ ಉಭಯತರು ಎದೆಯನ್ನು ಗಟ್ಟಿ ಮಾಡಿ ಆ ನಿರ್ಜನವಾದ ಅರಣ್ಯವನ್ನು ಹೊಕ್ಕರು. ಅವರು ಅನುಭವಿಸುತ್ತಿದ್ದ ಕಷ್ಟಾಪೇಷ್ಟೆಗಳು ಸಾಕಷ್ಟಾಗಲಿಲ್ಲವೇನೋ ಎಂಬಂತೆ ಅವರ ದುರ್ದೈವಕ್ಕನಿಸಿ ಅವರ ಮೇಲೆ ಪರಾಕಾಷ್ಟೆಯ ಪ್ರಸಂಗವು ಬಂದೊದಗಿತು. ಖಾಜಾಅಯಾಸನ ಹೆಂಡತಿಗೆ ಪ್ರಸವವೇದನೆಗಳು ಆಗಹತ್ತಿದವು. ಪ್ರಾಣವು ನಿಲ್ಲುತ್ತದೋ ಹೋಗುತ್ತದೊ ಎಂಬ ಸ್ಥಿತಿಯಲ್ಲಿರುವಾಗ ಅವಳು ಪ್ರಸೂತಳಾಗಿ, ಮುಂದೆ ಯಾವಾಕೆಯು ತನ್ನ ಆಯುಷ್ಯವನ್ನು ಸ್ವರ್ಗತುಲ್ಯವಾದ ವೈಭವದಲ್ಲಿ ಕಳೆದಳೋ ಆ ನೂರಜಹಾನಳ ಜನ್ಮವು ಅಂಥ ವಿಪದಾವಸ್ಥೆಯಲ್ಲಾಯಿತು. ಮಾರ್ಗವನ್ನಾಕ್ರಮಿಸುವ ಯಾವನಾದರೊಬ್ಬ ದಾರಿಕಾರನು ಭೆಟ್ಟಿಯಾದರೆ ಅವನಿಂದ ಸಹಾಯವು ದೊರೆತೀತೆಂಬ ಆಶೆಯಿಂದ, ಆ ಉಭಯತರು ಆ ಚಿಕ್ಕ ಅರ್ಭಕವನ್ನು ಹತ್ತರ ಕರೆದುಕೊಂಡು ಕೆಲವು ಕಾಲ ಹರಣ ಮಾಡಿದರು. ಆದರೆ ಅಮಾವಾಸ್ಯೆಯ ನಿಬಿಡಾಂಧಕಾರದಲ್ಲಿ ಚಂದ್ರಪ್ರಕಾಶವನ್ನಪೇಕ್ಷಿಸುವವರಂತೆ ಅವರ ಅವಸ್ಥೆಯಾಯಿತು. ಕಟ್ಟಕಡೆಗೆ ಸೂರ್ಯನು ಅಸ್ತನಾಗಿ, ಭಯಾನಕವಾದ ರಾತ್ರಿಯು ಹಬ್ಬಹತ್ತಿತು. ಮೊದಲೇ ಅರಣ್ಯವು, ಅದರಲ್ಲಿ ನಿಬಿಡಾಂಧಕಾರವಾದ ರಾತ್ರಿಯು. ನಾಲ್ಕೂ ದಿಕ್ಕಿನಿಂದ ಹಿಂಸ್ರಶ್ವಾಪದಗಳ ಭಯಾನಕ ಗರ್ಜನೆಗಳು ಅವರ ಕಿವಿಗೆ ಬೀಳಹತ್ತಿ, ಅಂಜಿಕೆಯಿಂದ ಅವರ ಹೌಹಾರಿಹೋಯಿತು. ಇಂಥ ಸ್ಥಿತಿಯಲ್ಲಿ ಆ ಸ್ಥಾನದಲ್ಲಿ ರಾತ್ರಿಯನ್ನು ಕಳೆಯುವದು ಬಹಳ ಗಂಡಾಂತರದ್ದೆಂದು ತಿಳಿದು ಖ್ವಾಜಾಅಯಾಸನು ತನ್ನ ಹೆಂಡತಿಯನ್ನು ಕುದುರೆಯ ಮೇಲೆ ಕೂಡ್ರಿಸಿದನು. ತಾಯಿಯು ಮಗುವನ್ನು ತನ್ನ ಎದೆಗೆ ಅವುಚಿಕೊಂಡಳು. ಆದರೆ ಆಕೆಯು ತೀರ ಸೋತುಹೋದದ್ದರಿಂದ ಮಗುವನ್ನು ಎತ್ತಿಹಿಡಿಯುವದು ಸಹ ಅವಳಿಗೆ ಅಸಾಧ್ಯವಾಯಿತು. ಅಯಾಸನು ತನ್ನ ಶಕ್ತಿಯನ್ನು ಮೀರಿ ದಣಿದುಹೋದದ್ದರಿಂದ ಅವನಿಗೆ ತನ್ನ ಕಾಲುಗಳ ಮೇಲೆ ನಿಲ್ಲುವದು ಸಹ ಅಸಂಭವವುಳ್ಳದ್ದಾಯಿತು. ಮಗುವಿನ ವಿಷಯವಾಗಿತ್ತವರು ಅಂತಃಕರಣಗಳನ್ನು ಕಳವಳಿಸಗೊಟ್ಟರೆ ತಾವು ಪಾರಗಾಣುವದು ದುಃಸಾಧ್ಯವೆಂದು ತುಸುಹೊತ್ತಿನ ವಿಚಾರಾಂತ್ಯದಲ್ಲಿ ಅವರಿಗೆ

ತೋಚಹತ್ತಿ, ಆ ಕೂಸನ್ನು ಮಾರ್ಗದಲ್ಲಿಯೇ ಇಟ್ಟು ಬಿಡಬೇಕೆಂದು ಅವರ ಕೊನೆಯ ನಿಶ್ಚಯವಾಯಿತು. ಸುತ್ತುವದಕ್ಕೆ ಅರಿವೆಯು ಚಿಂದಿಗಳಾದರೂ ಅವರ ಹತ್ತರ ಇರದ್ದರಿಂದ, ಲತಾಪಲ್ಲವಗಳಿಂದ ಆ ಕೂಸನ್ನು ಮುಚ್ಚಿ, ಅದರ ರಕ್ಷಣ ಮಾಡುವದಕ್ಕಾಗಿ ಶೋಕಾಕುಲ ಅಂತಃಕರಣಗಳಿಂದ ಪರಮೇಶ್ವರನ ಪ್ರಾರ್ಥನೆಯನ್ನು ಮಾಡಿ, ಅತ್ಯಂತ ದುಃಖದಿಂದ ಅಶ್ರುಧಾರೆಗಳನ್ನು ಸುರಿಸುತ್ತ ಆ ಉಭಯತರು ಮುಂದಿನ ಮಾರ್ಗವನ್ನು ಕ್ರಮಿಸಹತ್ತಿದರು. ಅಂಥ ಸ್ಥಿತಿಯಲ್ಲಿ, ತಂದೆ-ತಾಯಿಗಳು ಕೇವಲ ನಿರುಪಾಯವುಳ್ಳವರಾಗಿ ಆ ಕೂಸನ್ನು ಒಂದು ವೃಕ್ಷದ ಬುಡದಲ್ಲಿ ಇಟ್ಟಿದ್ದರೂ ಅದರ ಭಾಗ್ಯೋದಯವಾಗತಕ್ಕದ್ದಿದ್ದದರಿಂದ ಅದು ರಕ್ಷಿಸಲ್ಪಟ್ಟಿತು. ಯಾವ ವೃಕ್ಷದ ಬುಡದಲ್ಲಿ ಆ ಕೂಸನ್ನು ಇಟ್ಟಿದ್ದರೋ ಆ ವೃಕ್ಷವು ಕಾಣದಂತಾದ ಕೂಡಲೆ ನೂರಜಹಾನಳ ತಾಯಿಯ ಅಂತಃಕರಣವು ನೀರಾಯಿತು. ಅವಳು ಕುಂದುರೆಯ ಮೇಲಿಂದ ನೆಲಕ್ಕೆ ಬಿದ್ದು ಆಕ್ರೋಶ ಮಾಡಹತ್ತಿದಳು. ತನ್ನ ಸುಕುಮಾರಳಾದ ಮಗಳ ಕಡೆಗೆ ಧಾವಿಸಿ ಹೋಗುವದಕ್ಕಾಗಿ ನೆಲಬಿಟ್ಟು ಏಳುವವಕ್ಕೆ ಪ್ರಯತ್ನ ಮಾಡಹತ್ತಿದಳು; ಆದರೆ ಆ ಪ್ರಯತ್ನದಲ್ಲಿಯೇ ಉಳಿದ ಎಲ್ಲ ಶಕ್ತಿಯು ನಷ್ಟವಾಗಿ ಅವಳು ಭೂಮಿಯ ಮೇಲೆ ನಿಶ್ಚೇಷ್ಟಿತಳಾಗಿ ಬಿದ್ದುಕೊಂಡಳು. ಸ್ವಲ್ಪ ಎಚ್ಚರಪಡೆಯಹತ್ತಿದ ಕೂಡಲೆ ಖ್ವಾಜಾಆಯಾಸನು ಅವಳ ಸಮಾಧಾನ ಮಾಡತೊಡಗಿದನು.

ಆದರೆ ತನ್ನ ಪ್ರಯತ್ನವು ನಿಷ್ಫಲವಾದದ್ದೆಂದು ಕಂಡುಬಂದದ್ದರಿಂದ, ಹುಡುಗೆಯನ್ನು ತರುವದಕ್ಕಾಗಿ ಮರಳಿ ಹಿಂದಕ್ಕೆ ಹೊರಟನು. ಖ್ವಾಜಾಆಯಾಸನು ಆ ವೃಕ್ಷದ ಸಮೀಪಕ್ಕೆ ಬಂದು, ಅಲ್ಲಿ ಸಂಭವಿಸಿದ ಸಂಗತಿಯನ್ನು ನೋಡಿ ಭೀತಿಯಿಂದ ತೀರ ಭ್ರಮಿಷ್ಟನಾದನು. ಒಂದು ದೊಡ್ಡ ಭಯಂಕರವಾದ ಕೃಷ್ಣಸರ್ಪವು ಆ ಹುಡುಗೆಯನ್ನು ಸುತ್ತುಹಾಕಿ ಕೂತುಕೊಂಡದ್ದನ್ನು ನೋಡಿದ ಕೂಡಲೆ, ಆಯಾಸನು ಚಿಟ್ಟನೆ ಚೀರಿ, ಮಗಳನ್ನು ಉಳಿಸುವದಕ್ಕಾಗಿ ಮುಂದೆ ಧಾವಿಸಿದನು. ಅವನ ಧ್ವನಿಯನ್ನು ಕೇಳಿದ ಕೂಡಲೆ ಆ ಸರ್ಪವು ಭಯಭೀತವಾಗಿ ಹತ್ತಿರದಲ್ಲಿದ್ದ ಬಿಲವನ್ನು ಹೊಕ್ಕಿತು. ಖ್ವಾಜಾಆಯಾಸನು ಮುಂದಕ್ಕೆ ಹೋಗಿ ತನ್ನ ಕೂಸನ್ನು ಎತ್ತಿ ಅವುಚಿಕೊಂಡು, ಯಾವ ಸ್ಥಳದಲ್ಲಿ ತನ್ನ ಹೆಂಡತಿಯು ನಿಶ್ಚೇಷ್ಟಿತಳಾಗಿ ಬಿದ್ದಿದ್ದಳೋ

ಅಲ್ಲಿಗೆ ಮರಳಿ ಬಂದನು. ಅವನ ಪತ್ನಿಯು ಎಚ್ಚತ್ತು ತನ್ನ ಕೂಸನ್ನು ಹತ್ತರ ತೆಗೆದುಕೊಂಡಳು; ಮತ್ತು ಸಂಭವಿಸಿದ ಸಂಗತಿಯ ವಿಷಯವಾಗಿ ಉಭಯತರು ಮಾತನಾಡಿ, ಇಂಥ ಅತರ್ಕ್ಯ ಪ್ರಕಾರದಿಂದ ತಮ್ಮ ಮಗಳ ರಕ್ಷಣವಾಯಿತೆಂದ ಮೇಲೆ ಅಪೂರ್ವವಾದ ಭಾಗ್ಯೋದಯವನ್ನು ಅವಳು ತನ್ನ ಮುಂದಿನ ಆಯುಷ್ಯದಲ್ಲಿ ನಿಶ್ಚಯವಾಗಿ ಕಾಣುವಳೆಂದು ಆ ದಂಪತಿಗಳು ಭಾವಿಸಿದರು.

ಅವಳು ಉಚ್ಚಪದವನ್ನೇರಬಾರದೆಂಬ ವಿಧಿಯ ಸಂಕಲ್ಪವಾಗಿದ್ದರೆ, ಇಂಥ ಗಂಡಾಂತರದ ಪ್ರಸಂಗದಿಂದ ಅವಳ ರಕ್ಷಣವೇ ಆಗುತ್ತಿದ್ದಿಲ್ಲ; ಆದರೆ ಮುಂದೆ ಅವಳಿಗೆ ಪ್ರಾಪ್ತವಾದ ಮಹತ್‌ಪದದ ಕಲ್ಪನೆಯು ಆ ಕಾಲಕ್ಕೆ ಆ ಉಭಯತರಿಗೆ ಆಗಲಿಲ್ಲೆಂಬದರಲ್ಲಿ ಆಶ್ಚರ್ಯವೇನು? ಅದು ಯಾರ ಕಲ್ಪನೆಯನ್ನಾದರೂ ಮಿಾರಿದ್ದಾಗಿತ್ತು. ತಮ್ಮ ಜನ್ಮಭೂಮಿಯಲ್ಲಿ ಹತಾಶರಾಗಿ, ಕೇವಲ ಉದರಪೋಷಣಕ್ಕಾಗಿ ಆಶ್ರಯಹೊಂದಿದ ಹಿಂದುಸ್ಥಾನದ ಬಾದಶಾಹೀ ಸಿಂಹಾಸನದ ಮೇಲೆ ತಮ್ಮ ಮಗಳು ಆರೂಢಳಾಗಿ, ತನ್ನ ಸೌಂದರ್ಯದಿಂದಲೂ ಕರ್ತೃತ್ವಶಕ್ತಿಯಿಂದಲೂ ಇಡೀ ಜಗತ್ತನ್ನು ಚಕಿತಮಾಡುವಳೆಂಬ ಸಂಗತಿಯು ಅವರಿಗೆ ಸ್ವಪ್ನಸೃಷ್ಟಿಯಲ್ಲಿ ಸಹ ದೃಗ್ಗೋಚರವಾಗಿರಲಿಕ್ಕಿಲ್ಲ.

ಯಾವ ಕಾಲಕ್ಕೆ ಆ ಕೃಷ್ಣಸರ್ಪವು ಹುಡಗೆಯನ್ನು ಬಿಟ್ಟು ಬಿಲವನ್ನು ಪ್ರವೇಶಮಾಡಿತೋ ಅದು ಅವರ ಭಾಗ್ಯದಿನದ ಪ್ರಭಾತಕಾಲವೆಂದು ಕಲ್ಪಿಸಿದರೂ ಅಡ್ಡಿಯಿಲ್ಲ. ಸೂರ್ಯಪ್ರಕಾಶವಾಗಲು ಕತ್ತಲೆಯು ಗಿರಿಗಹ್ವರಗಳಲ್ಲಿ ಅಡಗಿಕೊಳ್ಳುವಂತೆ, ಅವರ ಕೃಷ್ಣಸರ್ಪರೂಪೀ ದುರ್ದೈವವು ಇಲ್ಲದಂತಾಯಿತು. ಕಾಲವು ಅನುಕೂಲವಾಯಿತೆಂದರೆ, ಅನಪೇಕ್ಷಿತವಾದ ಮಾರ್ಗದಿಂದ ದೈವಯೋಗವು ಕೂಡಿಬರುತ್ತದೆ. ಆ ಸ್ಥಳದಲ್ಲಿ ಉಭಯತರು ಹುಡುಗೆಯನ್ನು ಕರೆದುಕೊಂಡು ಕುಳಿತಾಗ ಕೆಲವು ಮುಸಲ್ಮಾನ ಪ್ರವಾಸಿಗಳು ಅವರಿಗೆ ಭೆಟ್ಟಿಯಾದರು. ಅವರ ಹತ್ತರ ಪ್ರವಾಸಕ್ಕೆ ಬೇಕಾಗುವ ಸಾಮಗ್ರಿಯು ವಿಪುಲವಾಗಿತ್ತು. ಅವರು ಈ ಸಂಕಟ ಸಮಯದಲ್ಲಿ ಇವರಿಗೆ ಸಹಾಯ ಮಾಡಿ ಇವರನ್ನು ಲಾಹೋರಕ್ಕೆ ಮುಟ್ಟಿಸಿದರು. ಆ ಕಾಲಕ್ಕೆ ಅಕಬರ ಬಾದಶಹನ ಸ್ವಾರಿಯು ಅಲ್ಲಿಯೇ ಇತ್ತು. ಬಾದಶಹನ ದರಬಾರದೊಳಗಿನ ಒಬ್ಬ ಗೃಹಸ್ಥನು ತನಗೆ ದೂರಿನ ಆಪ್ತನಾಗಬೇಕೆಂದು ಆಯಾಸ

ನಿಗೆ ತಿಳಿದ ಕೂಡಲೆ ಅವನಿಗೆ ಅತ್ಯಾನಂದವಾಯಿತು. ಈ ಗೃಹಸ್ಥನು ದೊಡ್ಡ ಅಧಿಕಾರಿಯಾಗಿದ್ದು, ಬಾದಶಹನ ಹತ್ತರ ಅವನ ವರ್ಚಸ್ವವಾದರೂ ಒಳಿತಾಗಿತ್ತು. ಆಯಾಸನಿಗೆ ಆಪ್ತನಾಗಿದ್ದ ಈ ಗೃಹಸ್ಥನ ಸಹಾಯದಿಂದ ಅವನ ಊರ್ಜಿತ ಕಾಲವು ಪ್ರಾರಂಭವಾಯಿತು. ಉತ್ತರೋತ್ತರ ಆಯಾಸನ ಅಭ್ಯುದಯವಾಗಹತ್ತಿ, ದರಬಾರದಲ್ಲಿ ಮಾನಮರ್ಯಾದೆಯನ್ನು ಹೊಂದಿದನು. ತನ್ನ ಯೋಗ್ಯತೆ ಮತ್ತು ಪರಿಶ್ರಮ ಇವುಗಳಿಂದ ಅವನು ಸಾವಿರ ಸರದಾರರಮೇಲೆ ಅಧಿಕಾರಿಯಾದನು. ಅವನು ಭಾಗ್ಯಶಾಲಿಯಾದಂತೆ ಬುದ್ಧಿವಂತನಾದರೂ ಇದ್ದದರಿಂದ ಉಚ್ಚುಚ್ಚ ಪದವಿಯನ್ನೇರುತ್ತೇರುತ್ತ ಸ್ವಲ್ಪ ದಿವಸಗಳಲ್ಲಿಯೇ ಬಾದಶಾಹೀ ಖಜೀನದಾರಿಯ ಅತ್ಯುಚ್ಚ ಪದಕ್ಕೇರಿದನು. ಈ ಪ್ರಕಾರ ಕೆಲವು ವರ್ಷಗಳ ಪೂರ್ವದಲ್ಲಿ ತನ್ನ ಹೆಂಡತಿ ಮತ್ತು ಮಗಳ ಸಹಿತವಾಗಿ ಒಂದು ನಿರ್ಜನವಾದ ಅರಣ್ಯದಲ್ಲಿ ಮರಣೋನ್ಮುಖ ಸ್ಥಿತಿಯಲ್ಲಿದ್ದವನು, ತನ್ನ ಭಾಗ್ಯದ ಮತ್ತು ಗುಣಗಳ ಬಲದಿಂದ ಸಂಪೂರ್ಣ ರಾಜ್ಯದಲ್ಲಿ ಮೊದಲನೆಯ ಪ್ರತಿಯ ಸರದಾರ ಮತ್ತು ಪುುತ್ಸದ್ದಿಯಾಗಿ ಕುಳಿತನು. ಲಾಹೋರಕ್ಕೆ ಬಂದು ಕೆಲವು ದಿವಸಗಳು ಗತಿಸಿದ ಬಳಿಕ, ಅರಣ್ಯದಲ್ಲಿ ಭಯಂಕರವಾದ ಗಂಡಾಂತರದಲ್ಲಿ ಸಿಕ್ಕಿದ್ದ ಹುಡುಗೆಯ ಸ್ವರೂಪಮಾಧುರ್ಯದ ಖ್ಯಾತಿಯು ಸರ್ವತ್ರ ಹಬ್ಬಿ ಅವಳಿಗೆ "ಮೆಹೆರ ಉನ್ನಿಸಾ" ಅಂದರೆ ಸ್ತ್ರೀ ತಾರಾಂಗಣದೊಳಗಿನ ಚಂದ್ರವೆಂಬ ಹೆಸರು ಪ್ರಾಪ್ತವಾಯಿತು. ಹುಣ್ಣಿವೆಯ ಚಂದ್ರನನ್ನು ನಾಚಿಸುವ "ಮೆಹೆರ ಉನ್ನಿಸಾ" ಇವಳು ಹದಿನೈದು ವರ್ಷದವಳಾದಾಗಂತೂ ತನ್ನ ನಿಷ್ಕಲಂಕವಾದ ತೇಜದಿಂದ ಎಲ್ಲರ ನೇತ್ರಗಳಲ್ಲಿ ತನ್ನ ಸೌಂದರ್ಯದ ಅಮೃತವೃಷ್ಟಿಯನ್ನು ಮಾಡಹತ್ತಿದಳು. ಅವಳಿಗೆ ಸಮಾನಳಾದ ಸುಂದರ ಸ್ತ್ರೀಯು ಇಡೀ ಖಂಡದಲ್ಲಿ ಇದ್ದಿದ್ದಿಲ್ಲ. ತಾಯಿಯ ರೂಪಸಂಪತ್ತು ಮತ್ತು ತಂದೆಯ ಬುದ್ಧಿವೈಭವ ಇವುಗಳ ಸಮ್ಮೇಲನದಿಂದ ಅವಳ ಅಂತರ್ಬಾಹ್ಯ ತೇಜದ ಕಿರಣಗಳು ದಿನದಿನಕ್ಕೆ ವಿಕಾಸ ಹೊಂದಹತ್ತಿದವು. ಇದ್ದಲಿಯ ರಾಶಿಯಲ್ಲಿ ರತ್ನವು ಮತ್ತು ಶೈವಾಲದಲ್ಲಿ ಕಮಲದ ಶೋಭೆಯು ಲುಪ್ತವಾಗುವದು ಹ್ಯಾಗೆ ಅಸಂಭವವೋ ಹಾಗೆ ಈ ಸ್ತ್ರೀರತ್ನವು ದಾರಿದ್ರ್ಯಪಂಕದಲ್ಲಿ ಪರಿವೇಷ್ಟಿತವಾಗಿ ಉಳಿದಿದ್ದರೂ ಅದು ತನ್ನ ಕಡೆಗೆ ಜಗತ್ತಿನ ದೃಷ್ಟಿಯನ್ನು ಆಕರ್ಷಿತ ಮಾಡಿಕೊಳ್ಳದೆ ಇರುತ್ತಿದ್ದಿಲ್ಲ; ಅಂದ

ಮೇಲೆ ಸಂಪತ್ತು, ಬುದ್ಧಿ ಮತ್ತು ಕೀರ್ತಿ ಈ ಮೂರೂ ಸಾಧನಗಳಿಂದ ದೊಡ್ಡ ಪದವಿಯನ್ನು ಮುಟ್ಟಿದ ಆಯಾಸನಂಥ ಉಮರರಾಯನ "ಅಪತ್ಯ ಪದವಿ"ಯನ್ನು ಹೊಂದಿದ ಈ ತರುಣಿಯ ಮಹಿಮೆಯನ್ನು ಎಷ್ಟೆಂದು ವರ್ಣಿಸಬೇಕು! ಆಕೆಯಲ್ಲಿದ್ದ ಅನೇಕ ಗುಣಗುರುತ್ವದ ಆಕರ್ಷಣದಲ್ಲಿ ಸಿಕ್ಕ ದೊಡ್ಡ ದೊಡ್ಡ ಮನೆತನದ ಉಮರರಾಯರೂ, ನಾಮಾಂಕಿತ ಯೋದ್ಧರೂ ಅವಳನ್ನು ತಮ್ಮ ಪತ್ನಿಪದದ ಮೇಲೆ ಸ್ಥಾಪಿಸಿ ಅವಳ ಚರಣದಲ್ಲಿ ತಮ್ಮ ಸರ್ವಸ್ವವನ್ನು ಅರ್ಪಣ ಮಾಡುವದಕ್ಕೆ ಸಿದ್ಧರಾಗಿದ್ದರು. ಆದರೆ ಯಾವನ ಶೌರ್ಯ ಮತ್ತು ಹೃದಯಸೌಂದರ್ಯ ಇವು ಅಪ್ರತಿಮವಾಗಿದ್ದವೋ ಅಂಥ ಒಬ್ಬ ಸರದಾರನ ಮೇಲೆ ಆಯಾಸನ ಮನಸು ಹೋಗಿ ಅವನನ್ನು ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಅವನು ಮನಸಿನಲ್ಲಿ ನಿಶ್ಚಯಿಸಿದ್ದನು. ಆ ಭಾಗ್ಯಶಾಲಿಯು ಯಾವನೆಂದರೆ, "ಶೇರಅಫಗನ್" ಎಂಬ ಹೆಸರಿನ ಒಬ್ಬ ಪರ್ಶಿಯನ್ ಸರದಾರನು. ಬಂಗಾಲದಲ್ಲಿ ಇವನಿಗೆ ಒಂದು ದೊಡ್ಡ ಜಾಹಗೀರಿ ಇತ್ತು. ಮತ್ತು ಅಕಬರನ ದರಬಾರದಲ್ಲಿ ಇವನಿಗೆ ಸಮಾನನಾದ ಗುಣಸಂಪನ್ನ ಮತ್ತು ಬಲಾಢ್ಯ ಸರದಾರನು ಯಾವನೂ ಇದ್ದಿದ್ದಿಲ್ಲ.

ಆದರೆ, ತಂದೆಯ ಈ ಇಚ್ಛೆ ಮತ್ತು ಯೋಜನೆ ಇವುಗಳ ಸಂಬಂಧವಾಗಿ ಮೆಹೆರಉನ್ನಿಸಾ ಇವಳು ಪೂರ್ಣ ಅಜ್ಞಾತಳಿದ್ದಳು. ಅವಳ ಸ್ವಂತದ ಇಚ್ಛೆಯು ಬೇರೆಯಾಗಿತ್ತು. ಅವಳ ಮಹತ್ವಾಕಾಂಕ್ಷೆಯುಳ್ಳ ಮನಸು ಶಹಾಜಾದಾ 'ಸೇಲೀಮ'ನ ಪ್ರೇಮವನ್ನು ಸಂಪಾದಿಸಬೇಕೆಂಬದಾಗಿತ್ತು. ಒಮ್ಮೆ ಅವನಿಗೆ ತನ್ನ ದರ್ಶನವಾಯಿತೆಂದರೆ, ಅವನು ತನ್ನ ಸೌಂದರ್ಯಕ್ಕೆ ಸಹಜವಾಗಿ ಮೋಹಿತನಾಗುವನೆಂಬ ಅವಳ ತಿಳುವಳಿಕೆಯಾದ್ದರಿಂದ ಅವಳು ಅಂಥ ಸಮಯದ ಮಾರ್ಗನಿರೀಕ್ಷಣೆಯನ್ನು ಮಾಡುತ್ತಿದ್ದಳು; ಮತ್ತು ಅಂಥ ಸಂಧಿಯಾದರೂ ಕೂಡಲೆ ಪ್ರಾಪ್ತವಾಯಿತು ಶಹಾಜಾದನು ಒಂದು ದಿವಸ ಅವಳ ತಂದೆಯ ಭೆಟ್ಟಿಗಾಗಿ ಅವಳ ಮನೆಗೆ ಬಂದನು. ದರಬಾರವು ಮುಗಿದ ಬಳಿಕ ಮುಖ್ಯ ಮುಖ್ಯ ಅತಿಥಿಗಳ ಹೊರತು ಎಲ್ಲ ಜನರು ತಮ್ಮ ತಮ್ಮ ಮನೆಗೆ ಹೋದರು. ತುಂಬಿದ ಮದ್ಯದ ಪೇಲೆಗಳು ದಿವಾಣಖಾನೆಯಲ್ಲಿ ಬಂದ ಬಳಿಕ ಜನಾನಖಾನೆಯೊಳಗಿನ ಪ್ರಮುಖ ಸ್ತ್ರೀಯರು ಬುರಕೀ ಸಹಿತವಾಗಿ

ಹೊರಗೆ ಬಂದರು. ಇದೇ ಸಂಧಿಯು ಆ ಲೋಕೋತ್ತರ ತರುಣಿಗೆ ತನ್ನ ಮೋಹಿನಿಯ ಪ್ರಭಾವವನ್ನು ನೋಡುವದಕ್ಕೆ ಅನಾಯಾಸವಾಗಿ ದೊರೆಯಿತು. ಅವಳ ಮಧುರ ಗಾಯನವನ್ನು ಕೇಳಿ ಶಹಾಜಾದನಿಗೆ ಆಲ್ಹಾದವಾಯಿತು. ಅವಳ ನೃತ್ಯದಿಂದ ಅವನು ಮೋಹಿತನಾದನು. ಅವಳ ಮೈಕಟ್ಟು ಆಕೃತಿ ಮತ್ತು ನಡಿಗೆಯ ಸೊಬಗು ಇವುಗಳ ಅವಲೋಕನದಿಂದ ಅವಳ ಅಪ್ರತಿಮವಾದ ಸೌಂದರ್ಯದ ಕಲ್ಪನೆಯು ಶಹಾಜಾದನ ಮನಸಿನಲ್ಲಿ ಮೂರ್ತಿಮಂತವಾಗಿ ನಿಂತಿತು. ಅವಳ ಅವಯವಗಳ ಮೇಲೆ ನಿಶ್ಚಲವಾಗಿದ್ದ ಅವನ ನೇತ್ರಗಳು ಅವಳ ಸೌಂದರ್ಯರಸದ ಪಾನವನ್ನು ಮನಸೋಕ್ತವಾಗಿ ಮಾಡಹತ್ತಿದವು. ಈ ರೀತಿಯಾಗಿ ಶಹಾಜಾದನು ಅವಳ ಕಡೆಗೆ ಏಕಾಗ್ರದೃಷ್ಟಿಯಿಂದ ನೋಡುತ್ತಿರುವಾಗ, ಆಕಸ್ಮಿಕವಾಗಿ ಬೀಳುವಂತೆ ಅವಳ ಮೋರೆಯ ಮೇಲಿನ ಬುರಕೆಯು ಕೆಳಗೆ ಬಿದ್ದಿತು; ಮತ್ತು ಅವಳ ಲಾವಣ್ಯಪ್ರಭೆಯು ಸೇಲೀಮನ ಅತ್ಯಂತ ಆತುರವಾದ ನೇತ್ರಗಳಲ್ಲಿ ಪೂರ್ಣವಾಗಿ ನೆಟ್ಟಿತು. ಆ ಕಾಲಕ್ಕೆ ಅವಳಿಂದ ಅತಿ ಮೋಹಕತನದಿಂದ ಪ್ರದರ್ಶಿತ ಮಾಡಲ್ಪಟ್ಟ ಸಂಭ್ರಮದಿಂದ ಅವಳ ಮುಖಚಂದ್ರವು ಅತಿಶಯವಾಗಿ ಪ್ರಫುಲ್ಲಿತವಾಯಿತು ಆ ಮೃಗಾಕ್ಷಿಯ ಭಯಚಂಚಲವಾದ ದೃಷ್ಟಿಯಿಂದ ಹೊರಟ ಮದನಬಾಣವು ನಿಮಿಷಾರ್ಧದಲ್ಲಿ ಶಹಾಜಾದನ ಅಂತಃಕರಣವನ್ನು ಪ್ರವೇಶ ಮಾಡಿತು. ತನ್ನ ಲಾವಣ್ಯದ ಪ್ರಭೆಯಿಂದ ಉದ್ದೀಪ್ತನಾದ ಸೇಲೀಮನನ್ನು, ಚಾತುರ್ಯದಿಂದ ತನ್ನ ಮೋಹಜಾಲದಲ್ಲಿ ತೊಡಕಿಸುವ ಪ್ರಯತ್ನವನ್ನು ಅವಳು ಮಾಡುತ್ತಿರಲು, ಸೇಲೀಮನಾದರೂ ಸಾಯಂಕಾಲದ ಸಮಯವನ್ನು ಅಲ್ಲಿಯೇ ಸ್ವಸ್ಥವಾಗಿ ಕುಳಿತು ಕಳೆದನು.

ಈ ರೀತಿಯಾಗಿ ತನ್ನ ಮೋಹಜಾಲದ ಪ್ರಭಾವದ ಪ್ರತೀತಿಯನ್ನು ತೆಗೆದುಕೊಳ್ಳುತ್ತಿರುವಾಗ, ತನ್ನ ಮಹತ್ವಾಕಾಂಕ್ಷೆಯಿಂದ ಮುಂದೆ ತನ್ನ ಮೇಲೆ ಮತ್ತು ಇತರ ಜನರ ಮೇಲೆ ಯಾವ ಪ್ರಸಂಗಗಳು ಬಂದೊದಗುವವೆಂಬದರ ಕಲ್ಪನೆಯಾದರೂ ಮೆಹೆರಉನ್ನಿಸಾಗೆ ಇದ್ದಿದ್ದಿಲ್ಲ. ಸೇಲೀಮನ ಅಂತಃಕರಣವನ್ನಾದರೂ ಅವಳು ಗೆದ್ದಳು, ಮತ್ತು ಅವನು ಬಾದಶಹನಾದ ಮೇಲೆ ವಿವಾಹವಿಧಿಪೂರ್ವಕ ಅವನ ಅರ್ಧಾಂಗಿಯಾಗಿ ಬಾದಶಾಹೀ ಸಿಂಹಾಸನದ ಅರ್ಧ ಯಜಮಾನತಿಯಾದರೂ ಆದಳೆಂಬ ಮಾತು ನಿಜ; ಆದರೆ

ಅವಳಿಂದ ಪ್ರಕಟ ಮಾಡಲ್ಪಟ್ಟ ಈ ಪ್ರೇಮವು, ಮತ್ತು ಶಹಾಜಾದನಿಗೆ ಹಿಡಿದ ಅವಳ ಸೌಂದರ್ಯದ ಹುಚ್ಚು, ಇವುಗಳ ಮೊಟ್ಟಮೊದಲಿನ ಪರಿಣಾಮವು ಬಹಳೇ ವಿಪರೀತವಾಯಿತು. ಶಹಾಜಾದಾ ಸೇಲೀಮನ ಮತ್ತು ತನ್ನ ಮಗಳ ಮನೋಗತಗಳು ಆಯಾಸನಿಗೆ ತಿಳಿದ ಕೂಡಲೆ, ಅವನು ವಿಲಂಬ ಮಾಡದೆ, ಶೇರಅಫಗನನ ಸಂಬಂಧವಾಗಿ ತಾನು ಮಾಡಿದ ವಾಗ್ನಿಶ್ಚಯವನ್ನು ಪ್ರಸಿದ್ಧಪಡಿಸಿದನು. ಮೋಹೆರಉನ್ನಿಸಾನ ಕಿವಿಗೆ ಈ ವರ್ತಮಾನವು ಬಿದ್ದಕೂಡಲೆ ಅವಳು ಕ್ರೋಧಾವಿಷ್ಟಳಾಗಿ ಅತ್ಯಂತ ದುಃಖಪಟ್ಟಳು. ಮತ್ತು ತಂದೆಯ ಯೋಚನೆಯನ್ನು ತಿರುಗಿಸುವದಕ್ಕಾಗಿ ಅನೇಕ ರೀತಿಯಿಂದ ಅವನಿಗೆ ಬೇಡಿಕೊಂಡಳು. ಆದರೆ ಅದರ ಉಪಯೋಗವು ಎಳ್ಳಷ್ಟಾದರೂ ಆಗಲಿಲ್ಲ. ಇತ್ತ ತನ್ನ ಪತಿಯಿಂದ ಬಾದಶಹನು ಮಧ್ಯಸ್ಥಿಯನ್ನು ಮಾಡಬೇಕೆಂದು ಸೇಲೀಮನು ಅಕಬರನಿಗೆ ಬಹಳ ಪರಿಯಿಂದ ಹೇಳಿಕೊಂಡನು. ಈ ಪ್ರಕಾರದ ಅನ್ಯಾಯವು ತನ್ನ ಮಗನ ಸಲುವಾಗಿ ಸಹ ತನ್ನಿಂದಾಗದೆಂದು ಅಕಬರನು ಸ್ಪಷ್ಟವಾಗಿ ಹೇಳಿದನು. ಆ ಬಳಿಕ ಸೇಲೀಮನಿಗೆ ಲಜ್ಜೆಯಿಂದ ಸ್ತಬ್ಧವಾಗಿರಬೇಕಾಯಿತು. ಇನ್ನು ತನ್ನ ಪ್ರಯತ್ನವು ನಿಷ್ಫಲವಾಗುವದೆಂದು ಯೋಚಿಸಿ, ತಂದೆಯು ನಿಶ್ಚಯಿಸಿದಂತೆ ಮೊಹೆರಉನ್ನಿಸಾ ಇವಳು ಶೇರಅಫಗನನ ಅರ್ಧಾಂಗಿಯಾದಳು. ಅವಳ ಮಹತ್ವಾಕಾಂಕ್ಷೆಯ ಪ್ರಶ್ನವನ್ನು ಒಂದು ಬದಿಗಿಟ್ಟರೆ, ತಂದೆಯಿಂಧ ಅವಳ ಸಲುವಾಗಿ ಯೋಚಿಸಲ್ಪಟ್ಟ ಪತಿಯು ಅವಳಿಗೆ ಸೇರುತ್ತಿದ್ದಿಲ್ಲ, ಹೀಗೇನಲ್ಲ.

ಸೇಲೀಮನ ವಿನಂತಿಗನುಸರಿಸಿ, ವಾಗ್ನಿಶ್ಚಯವನ್ನು ಮುರಿಯುವದಕ್ಕೆ ಶೇರಅಫಗನನು ಒಪ್ಪಿಕೊಳ್ಳಲಿಲ್ಲಾದ್ದರಿಂದ ದರಬಾರದಲ್ಲಿ ಅವನ ವರ್ಚಸ್ಸವು ದಿನದಿನಕ್ಕೆ ಕಡಿಮೆಯಾಗಹತ್ತಿತು. ಬಾದಶಹನ ಭೀತಿಯ ಮೂಲಕವಾಗಿ ಸೇಲೀಮನು ಬಹಿರಂಗದಲ್ಲಿ ತನ್ನ ವೈರವನ್ನು ಪ್ರಕಟಮಾಡಲಿಲ್ಲ; ಆದರೂ ದರಬಾರದ ಮತವನ್ನು ಅವನ ವಿರುದ್ಧವಾಗಿ ಕಲುಷಿತಮಾಡುವದಕ್ಕೆ ಅವನು ಹಿಂದೆಮುಂದೆ ನೋಡಲಿಲ್ಲ. ಕೊನೆಗೆ ಅಫಗನನು ಬೇಸತ್ತು ಬಂಗಾಲದಲ್ಲಿದ್ದ ತನ್ನ ಜಾಹಗೀರಿಯ ಮೇಲೆ ಹೊರಟುಹೋದನು; ಮತ್ತು ಅಲ್ಲಿಯ ಸುಭೇದಾರನಿಂದ ಬರದ್ವಾನದ ರಾಜ್ಯಕಾರಭಾರವನ್ನು ತನ್ನ ಕಡೆಗೆ ತೆಗೆದುಕೊಂಡನು. ಅಕಬರನ ಮರಣದವರೆಗೆ ಅವನು ಅಲ್ಲಿಯೇ ಇದ್ದನು. ಅಲ್ಲಿ

ಅವನ ಸಂಸಾರವು ಒಳ್ಳೇ ಸುಖಮಯವಾಗಿ ನಡೆದಿತ್ತು. ತನ್ನ ಶೂರ ಮತ್ತು ಗುಣಸಂಪನ್ನ ಪತಿಯ ವಿಷಯಕವಾಗಿ ಮೆಹೆರಉನ್ನಿಸಾ ಇವಳಿಗೆ ಒಳ್ಳೇ ಅಭಿಮಾನವೆನಿಸುತ್ತಿತ್ತು.

ಇಸ್ವಿಸನ್ ೧೬೦೫ ನೇ ವರ್ಷದಲ್ಲಿ ಆಕಬರ ಬಾದಶಹನು ಮರಣ ಹೊಂದಿದನು. ಜಹಾಂಗೀರ ಅಂದರೆ ಜಗಜ್ಜೇತಾ ಎಂಬ ಭವ್ಯವಾದ ಹೆಸರನ್ನು ಧಾರಣಮಾಡಿ ಸಲೀಮನು ಬಾದಶಾಹೀ ಸಿಂಹಾಸನದ ಮೇಲೆ ಆರೂಢನಾದನು; ಮತ್ತು ಸೂರ್ಯನು ಕ್ಷಿತಿಜವನ್ನೇರಿಬರುವ ಮಂಗಲಮುಹೂರ್ತದಲ್ಲಿ ಅವನು ತನ್ನ ಶಿರೋಭಾಗದಲ್ಲಿ ರಾಜಮುಕುಟವನ್ನು ಇಟ್ಟುಕೊಂಡನು. ರಾಜ್ಯಾಭಿಷೇಕವಾದ ಬಳಿಕ ನಾಲ್ವತ್ತು ದಿವಸಗಳ ವರೆಗೆ ಒಂದೇಸಮನೆ ಉತ್ಸವವು ನಡೆದಿತ್ತು. ಈ ಅಪೂರ್ವವಾದ ಉತ್ಸವಕ್ಕೆ ಸರಿಯಾದ ಮತ್ತೊಂದು ಉದಾಹರಣವು ಈ ಖಂಡದ ಇತಿಹಾಸದಲ್ಲಿ ದೊರೆಯುವದಿಲ್ಲೆಂದರೆ, ಅದು ಅತಿಶಯೋಕ್ತಿಯಾಗಲಿಕ್ಕಿಲ್ಲ. ಈ ಉತ್ಸವವು ಮುಗಿದ ಬಳಿಕ ಬಾದಶಹನ ಲಕ್ಷವು ಮೆಹೆರಉನ್ನಿಸಾನ ಕಡೆಗೆ ಹೋಯಿತು. ಆಕಬರನು ಜೀವಂತನಿರುವಾಗ ಅವನ ಭೀತಿಯಿಂದ ಬಚ್ಚಿಡಲ್ಪಟ್ಟ ಸಲೀಮನ ಪ್ರೇಮಾಗ್ನಿಯು ಈಗ್ಗೆ ಹೊತ್ತ ಹತ್ತಿತು. ಹಿಂದುಸ್ಥಾನದ ಸರ್ವಸತ್ತಾಧಾರಿಯಾದ ಬಾದಶಹನು ತಾನು ಇರುವದರಿಂದ, ಮೆಹೆರಉನ್ನಿಸಾ ಇವಳು ಹೆರವರ ವಿವಾಹಿತ ಪತ್ನಿಯಾಗಿದ್ದರೂ ಅವಳನ್ನು ತನ್ನ ಸ್ವಾಧೀನ ಮಾಡಿಕೊಳ್ಳುವ ಅಧಿಕಾರವು ತನಗೆ ಪೂರ್ಣವಾಗಿರುತ್ತದೆಂದು ಅವನು ತಿಳಿದುಕೊಂಡಿದ್ದನು. ಸ್ತ್ರೀಸಮೇತನಾಗಿ ದಿಲ್ಲಿಗೆ ಬಂದು ದರಬಾರಕ್ಕೆ ಹಾಜರನಾಗಬೇಕೆಂಬ ಹುಕುಮನ್ನು ಬಾದಶಹನು ಶೇರಅಫಗನನಿಗೆ ಕಳಿಸಿದನು. ಹುಕುಮಿಗೆ ಅನುಸರಿಸಿ ಆ ಸರದಾರನು ಹಾಜರನಾದ ಬಳಿಕ ಬಾದಶಹನು, ಬಹಿರಂಗದಲ್ಲಿ ಪ್ರೇಮವನ್ನು ತೋರಿಸಿ ಅವನಿಗೆ ಹೊಸ ಹೊಸ ಮಾನಮರ್ಯಾದೆಗಳನ್ನು ಕೊಟ್ಟನು.

ಶೇರಅಫಗನನು ನಿಸರ್ಗತಃ ನಿಷ್ಕಪಟನೂ, ಉದಾರನೂ ಇದ್ದದರಿಂದ ಬಾದಶಹನ ಮನಸ್ಸಿನಲ್ಲಿ ತನ್ನ ವಿಷಯಕವಾಗಿ ವಿಷವು ತುಂಬಿದೆಂಬ ಶಂಕೆಯಾದರೂ ಅವನಿಗೆ ಬರಲಿಲ್ಲ. ಇಷ್ಟು ಕಾಲವು ಗತಿಸಿಹೋಗಿದೆಂದ ಮೇಲೆ ಬಾದಶಹನು ಇತರ ಸ್ತ್ರೀಯರಲ್ಲಿ ಲಂಪಟನಾಗಿ, ಪೂರ್ವಸಂಗತಿಗಳ ವಿಸ್ಮರಣೆ

ಯಾದರೂ ಅವನಿಗೆ ಆಗಿರಬಹುದೆಂಬ ತಿಳುವಳಿಕೆಯಿಂದ ಶೇಹರಅಫಗನನು ದಿಲ್ಲಿಗೆ ಹೋಗಿದ್ದನು; ಆದರೆ, ತನ್ನ ತಿಳುವಳಿಕೆಯು ತಪ್ಪಿನದೆಂದು ಅವನಿಗೆ ಮುಂದೆ ಕಂಡುಬಂದಿತು.

ತನ್ನ ಪ್ರತಿಸ್ಪರ್ಧಿಯನ್ನು ನಾಶಪಡಿಸಿ ತನ್ನ ಮನೋಗತವಾದ ಸ್ತ್ರೀಯನ್ನು ಕೈವಶಮಾಡಿಕೊಳ್ಳುವ ನಿಶ್ಚಯವನ್ನು ಬಾದಶಹನು ಮಾಡಿದ್ದನು. ಅವನ ಮನಸಿಗೆ ಅವಳ ವಿಸ್ಮರಣೆಯು ಎಂದೂ ಆಗಿದ್ದಿಲ್ಲ. ಮತ್ತು ಅವಳನ್ನು ತನ್ನಾಕೆಯನ್ನಾಗಿ ಮಾಡಿಕೊಳ್ಳುವ ಆಶೆಯಾದರೂ ಅವನ ಮನಸಿನೊಳಗಿಂದ ಎಂದೂ ಹೋಗಿದ್ದಿಲ್ಲ. ತನ್ನ ಮನೋಗತವನ್ನು ಸಾಧಿಸಿ ಕೊಳ್ಳುವದಕ್ಕಾಗಿ ಅವನು ಯೋಚಿಸಿದ ಮಾರ್ಗವು ಮಾತ್ರ ಅವನ ಯೋಗ್ಯತೆಗೆ ಕುಂದು ತರುವಂಥದಾಗಿತ್ತು.

ಹುಲಿಯ ಬೇಟೆಯಲ್ಲಿ ಶೇರಅಫಗನನನ್ನು ಗಂಡಾಂತರದ ಪ್ರಸಂಗವಲ್ಲಿ ಚಾಚಿ ಅವನನ್ನು ನಾಶಮಾಡುವ ಮೊದಲನೆಯ ಯುಕ್ತಿಯನ್ನು ಬಾದಶಹನು ಯೋಚಿಸಿದನು. ನಿಡರಬರಿಯ ಅರಣ್ಯದಲ್ಲಿ ಒಂದು ಭಯಂಕರವಾದ ಹುಲಿಯು ಬಂದಿರುವ ಸುದ್ದಿಯು ಬಂದೊದಗಿತು ಈ ಹುಲಿಯು ಹಳ್ಳಿಕೊಳ್ಳಿ ಯೊಳಗಿನ ಅನೇಕ ದನಕರುಗಳನ್ನು ನಾಶಮಾಡಿತ್ತು, ಮೇಲಾಗಿ ಕೆಲವು ಜನರನ್ನಾದರೂ ಕೊಂದು ತಿಂದಿತ್ತು. ಈ ಹುಲಿಯ ಬೇಟೆಯ ಸಲುವಾಗಿ ಬಾದಶಹನು ಸ್ವತಃ ಹೊರಟನು. ಅವನ ಮುಖ್ಯ ಮುಖ್ಯ ಸರದಾರರೂ, ಶೇರಅಫಗನನೂ ಅವನನ್ನು ಹಿಂಬಾಲಿಸಿದರು. ಆ ಕಾಲದ ಬೇಟೆಯ ಪದ್ಧತಿ ಗನುಸರಿಸಿ ಎಷ್ಟೋ ಮೈಲುಗಳ ವರೆಗೆ ನಾಲ್ಕೂ ದಿಕ್ಕಿನಿಂದ ಸುತ್ತುಗಟ್ಟುತ್ತ ಬೇಟೆಗಾರರು ಅಡವಿಯನ್ನು ಹೊಕ್ಕರು. ಹುಲಿಯು ತನ್ನ ಸ್ಥಾನವನ್ನು ಬಿಟ್ಟು ಗುಡುಗುಹಾಕುತ್ತ ಮುಂದೆ ಬರಹತ್ತಿತು. ಹುಲಿಯ ಗುಡುಗು ಸ್ಪಷ್ಟವಾಗಿ ಕೇಳಬರಹತ್ತಿದ ಕೂಡಲೆ, ಬಾದಶಹನ ಜನರು ಧಾವಿಸಹತ್ತಿದರು. ಎಲ್ಲ ಸರದಾರರು ಏಕತ್ರ ಮಿಲಿತರಾದ ಬಳಿಕ, ಹುಲಿಯ ಮೈ ಮೇಲೆ ಒಬ್ಬನೇ ಸಾಗಿ ಹೋಗಿ ಅದರ ಮೇಲೆ ಹಲ್ಲೆಮಾಡುವ ಸಮರ್ಥನು ನಿಮ್ಮೊಳಗೆ ಯಾವನಿರುವನೆಂದು ಬಾದಶಹನು ಪ್ರಶ್ನೆಮಾಡಿದನು. ಈ ಪ್ರಶ್ನೆಯನ್ನು ಕೇಳಿದ ಕೂಡಲೆ, ಮೂವರು ಸರದಾರರು ಮುಂದೆ ಬಂದು ಹುಲಿಯ ಮೇಲೆ ಸಾಗಿ ಹೋಗುವದಕ್ಕೆ ಅಪ್ಪಣೆಯನ್ನು ಬೇಡಿಕೊಂಡರು. ಇದು ನಡೆದಿರು

ವಷ್ಟರಲ್ಲಿ, ಬಾದಶಹನು ಮನಸ್ಸಿನಲ್ಲಿ ಯೋಚಿಸಿದಂತೆ, ಶೇರಅಫಗನನಿಗೆ ಸ್ಫುರಣವು ತುಂಬಿ, ಇವತ್ತಿನ ವರೆಗೆ ಸಂಪಾದಿಸಿದ ಕೀರ್ತಿಯನ್ನು ಈ ಕಾಲಕ್ಕೆ ಹೋಗಗೊಡಬಾರದೆಂಬ ವಿಚಾರದಿಂದ ಅವನು ಮುಂದೆ ಬಂದು ಅಂದದ್ದೇನಂದರೆ, "ಶಸ್ತ್ರಪಾಣಿಯಾಗಿ ಪಶುಗಳ ಮೇಲೆ ಹಲ್ಲೆಮಾಡುವದು ವಿಶೇಷ ಪುರುಷಾರ್ಥದ್ದಾಗಿರದೆ ಅನ್ಯಾಯದ್ದಾಗಿದೆ. ಈಶ್ವರನು ಹುಲಿಗಳಿಗೆ ಅವಯವಗಳನ್ನು ಕೊಟ್ಟಂತೆ ಮನುಷ್ಯನಿಗಾದರೂ ಕೊಟ್ಟಿದ್ದಾನೆ. ಮೇಲಾಗಿ ತನ್ನ ಶಕ್ತಿಯ ಉಪಯೋಗವನ್ನು ಹ್ಯಾಗೆ ಮಾಡಿಕೊಳ್ಳಬೇಕೆಂಬದರ ವಿಷಯಕವಾಗಿ ಮನುಷ್ಯನು ಈಶ್ವರನಿಂದ ವಿಚಾರಶಕ್ತಿಯನ್ನು ಪಡೆದಿದ್ದಾನೆ."

ಈ ವಿಧಾನಕ್ಕೆ ಉಳಿದ ಸರದಾರರು ಆಕ್ಷೇಪವನ್ನು ತೆಗೆದು ಅಂದದ್ದೇನಂದರೆ, "ಹುಲಿಯ ಶಕ್ತಿಯಕಿಂತ ಮನುಷ್ಯನ ಶಕ್ತಿಯು ಸ್ವಾಭಾವಿಕವಾಗಿಯೇ ಕಡಿಮೆ ಇರುವದು; ಆದಕ್ಕಾಗಿ ಆದರ ನಾಶವನ್ನು ಶಸ್ತ್ರದಿಂದಲೇ ಮಾಡತಕ್ಕದ್ದು."

"ಈ ಮಾತು ನಿಜವಾದದ್ದಲ್ಲವೆಂದು ನಿಮಗೆ ಈಗಲೇ ತಿಳಿದು ಬರುವದು" ಹೀಗೆ ಶೇರಅಫಗನನು ನುಡಿದು, ತನ್ನ ಕೈಯೊಳಗಿನ ಕತ್ತಿ ಢಾಲನ್ನು ಬದಿಗೆ ಒಗೆದು ಬರಿಗೈಯಿಂದ ಹುಲಿಯ ಮೇಲೆ ಸಾಗಿಹೋಗುವದಕ್ಕೆ ಸಿದ್ಧನಾದನು. ಪರಿಣಾಮದಲ್ಲಿ ಘಾತಕವಾಗಿ ತೋರುವ ಈ ಅವಿಚಾರದ ಕೃತ್ಯದಿಂದ ಅವನನ್ನು ಪರಾಙ್ಮುಖಮಾಡುವ ಪ್ರಯತ್ನವನ್ನು ಬಾದಶಹನು ಬಹಿರಂಗವಾಗಿ ಮಾಡಿದರೂ ಅಲ್ಲಿ ನಡೆದ ಸಂಗತಿಯಿಂದ ತನ್ನ ಮನಸ್ಸಿನಲ್ಲಿ ಆನಂದಪಡುತ್ತಿದ್ದನು. ಅವನ ಧೈರ್ಯದ ಸ್ತುತಿಮಾಡಬೇಕೋ ಅಥವಾ ಆವನ ಮೂರ್ಖತನದ ನಿಷೇಧಮಾಡಬೇಕೋ ಎಂಬ ಸಂಶಯದಲ್ಲಿ ಬಾದಶಹನು ಮುಳುಗಿಹೋದನು. ಶೇರಅಫಗನನಿಗೂ ಮತ್ತು ಹುಲಿಗೂ ದ್ವಂದಯುದ್ಧವು ಪ್ರಾರಂಭವಾಯಿತು. ಬಹಳ ಹೊತ್ತಿನ ವರೆಗೆ ಅತ್ಯಂತ ಭಯಂಕರವಾದ ಕುಸ್ತಿಯಾಗಿ ಕೊನೆಗೆ ಆ ಹಿಂಸ್ರಪಶುವು ತನ್ನ ಪ್ರಾಣವನ್ನು ಬಿಟ್ಟಿತು. ಅರ್ಥಾತ್ ಶೇರಅಫಗನನಿಗೆ ಜಯವು ಪ್ರಾಪ್ತವಾಯಿತು. ಅನೇಕ ಸ್ಥಳಗಳಲ್ಲಿ ಗಾಯಗಳಾಗಿ ಅವುಗಳೊಳಗಿಂದ ವಿಶೇಷವಾಗಿ ರಕ್ತಸ್ರಾವವಾದ್ದರಿಂದ ಸರದಾರ ಶೇರಅಫಗನನು ತೀರ ದಣಿದುಹೋಗಿದ್ದನು. ಬಾದಶಹನು ಅವನನ್ನು ಅವನ ಮಂದಿರಕ್ಕೆ ಮುಟ್ಟಿಸಿದನು. ಮೆಹೆರಉನ್ನಿಸಾನ

ಶುಶ್ರೂಷೆಯಿಂದ ಕೆಲವು ದಿವಸಗಳಲ್ಲಿ ಅವನ ಗಾಯುಗಳು ತುಂಬಿಬಂದು ಪ್ರಕೃತಿಯು ಮೊದಲಿನಂತಾಯಿತು. ಈ ಅಲೌಕಿಕ ಧೈರ್ಯದ ಕೃತ್ಯವನ್ನು ಸಾವಿರಾರು ಜನರು ನೋಡಿದ್ದರಿಂದ ಶೇರಅಫಗನನ ಶೌರ್ಯದ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಿತು. ತನ್ನ ಉದ್ದೇಶವು ಸಫಲವಾಗಲಿಲ್ಲೆಂದು ಬಾದಶಹನಿಗೆ ಮಾತ್ರ ಅತ್ಯಂತ ಖೇದವೆನಿಸಿತು. ಆದರೆ ಅವನ ನಿಶ್ಚಯವು ಸ್ಥಿರವಾಗಿ ಉಳಿದು, ನಿರಾಶೆ ಮತ್ತು ಫಜೀತಿ ಇವುಗಳ ಯೋಗದಿಂದ ಅವನ ಇಚ್ಛೆಯು ಮಾತ್ರ ದ್ವಿಗುಣಿತವಾಯಿತು.

ಯಾವ ಪ್ರಯತ್ನದಿಂದಾದರೂ ಮೇಹರಉನ್ನಿಸಾ ಇವಳನ್ನು ತನ್ನ ಹಸ್ತಗತಮಾಡಿಕೊಳ್ಳುವ ಉದ್ದೇಶದಿಂದ ಜಹಾಂಗೀರನು ಮತ್ತೊಂದು ಉಪಾಯುವನ್ನು ಯೋಚಿಸಿದನು. ತನ್ನ ಪ್ರಕೃತಿಯು ಮೊದಲಿನಂತಾದ ಕೂಡಲೆ, ಶೇರಅಫಗನನು ಬಾದಶಹನ ದರ್ಶನಕ್ಕಾಗಿ ಹೋದನು. ಬಾದಶಹನು ಅವನ ಮೇಲೆ ಸ್ತುತಿಯ ವೃಷ್ಟಿಯನ್ನು ಮಾಡಿ ತನ್ನ ಪ್ರೇಮವನ್ನು ವ್ಯಕ್ತಪಡಿಸಿದನು. ಶೇರಅಫಗನನಿಗೆ ಬಾದಶಹನ ಕಾಪಟ್ಯವು ಕಂಡುಬರಲಿಲ್ಲ. ಅವನನ್ನು ಹ್ಯಾಗೆ ಕೊಲ್ಲಬೇಕೆಂಬ ಯುಕ್ತಿಯನ್ನು ಬಾದಶಹನು ಮೊದಲೇ ರಚಿಸಿಟ್ಟಿದ್ದನು. ಶೇರಅಫಗನನಿಗೆ ಒಂದು ಚಿಕ್ಕ ಸಂದಿಯಲ್ಲಿ ಎದುರಾಗಿ, ಜನರಿಗೆ ಕೇವಲ ಅಪಘಾತದಂತೆ ತೋರುವ ಹಾಗೆ ಅವನ ಮೇಲೆ ಒಂದು ದೊಡ್ಡ ಮದೋನ್ಮತ್ತ ಆನೆಯನ್ನು ಹಾಕಿ, ಅವನ ಪ್ರಾಣವನ್ನು ತೆಗೆದುಕೊಳ್ಳುವದಕ್ಕೆ ಬಾದಶಹನು ಒಬ್ಬ ಮಾವುತನಿಗೆ ಹೇಳಿದ್ದನು

ಪಾಲಿಕೆಯಲ್ಲಿ ಕುಳಿತು ಆ ಶೂರ ಸರದಾರನು ತನ್ನ ಮಂದಿರಕ್ಕೆ ಮರಳಿ ಹೋಗುತ್ತಿರುವಾಗ, ಒಂದು ಸಂದಿಯ ಕೊನೆಗೆ ಒಂದು ಆನೆಯು ನಿಂತಿದ್ದು ಮಾರ್ಗವು ಪ್ರತಿಬಂಧಿತವಾಗಿದೆಂದು ಕಂಡಕೂಡಲೆ, ಆನೆಯನ್ನು ಬದಿಗೆ ಮಾಡುವದರ ಸಲುವಾಗಿ ಅವನು ತನ್ನ ಸೇವಕರಿಗೆ ಅಪ್ಪಣೆಯನ್ನು ಮಾಡಿದನು. ಆದರೆ ಆ ಸೇವಕರು ಭಯಭೀತರಾಗಿ ತಮ್ಮ ಒಡೆಯನ ಅಪ್ಪಣೆಯನ್ನು ಲಕ್ಷಕ್ಕೆ ತಾರದೆ, ಅವನು ಕೂತಿದ್ದ ಪಾಲಿಕೆಯನ್ನು ನೆಲಕ್ಕೆ ಚಲ್ಲಿ ಓಡಿಹೋದರು. ಸೇವಕ ಜನರ ಈ ಹೇಡಿತನದ ಕೃತ್ಯವನ್ನು ನೋಡಿ, ಶೇರಅಫಗನನು ಚಟ್ಟನೆ ಎದ್ದು ಒಂದು, ತೀಕ್ಷ್ಣವಾದ ಕತ್ತಿಯನ್ನು ಒರೆಯೊಳಗಿಂದ ಹೊರಗೆ ತೆಗೆದು ಆನೆಯ ಸೊಂಡೆಯ ಮೇಲೆ ಒಂದು ಬಲವಾದ

ಆಘಾತವನ್ನು ಮಾಡಲು, ಆಕ್ಷಣವೇ ಅದು ಕತ್ತರಿಸಿ ನೆಲಕ್ಕೆ ಬಿದ್ದಿತು. ವೇದನೆಯನ್ನು ಸಹಿಸಲಾರದೆ ಆನೆಯು ಚೀರಾಡಹತ್ತಿ, ನೆಲಕ್ಕೆ ಬಿದ್ದು ತತ್ಕ್ಷಣವೇ ಪ್ರಾಣವನ್ನು ಬಿಟ್ಟಿತು. ಅಲ್ಲಿ ನಡೆಯುತಕ್ಕ ಸಂಗತಿಗಳು ತನ್ನ ದೃಷ್ಟಿಗೋಚರವಾಗಬೇಕೆಂಬ ಯೋಜನೆಯಿಂದ ಒಂದು ಬದಿಗೆ ನಿಂತಿದ್ದ ಬಾದಶಹನು ಶೇರಅಫಗನನ ಪರಾಕ್ರಮುವನ್ನು ನೋಡಿ ಚಕಿತನಾಗಿ, ಲಜ್ಜೆಯಿಂದ ತನ್ನ ಅರಮನೆಗೆ ಹೊರಟುಹೋದನು. ಆ ನಿಷ್ಕಪಟಿಯಾದ ಸರದಾರನು, ಪುನಃ ಬಾದಶಹನ ಭೆಟ್ಟಿಯಾದಾಗ್ಗೆ ನಡೆದ ಸಂಗತಿಗಳನ್ನೆಲ್ಲ ನಿವೇದನ ಮಾಡಿದನು. ಬಾದಶಹನು ಅವನ ಸಾಮರ್ಥ್ಯದ ಮತ್ತು ಶೌರ್ಯದ ಸ್ತುತಿಯನ್ನು ಯಥೇಚ್ಛವಾಗಿ ಮಾಡಿ, ತಾನು ರಚಿಸಿದ ವ್ಯೂಹದೊಳಗಿಂದ ಅವನು ಪಾರಾದ ಬಗ್ಗೆ ಮನಸಿನೊಳಗೆ ಒಂದೇ ಸಮನೆ ತಳಮಳಿಸಹತ್ತಿದನು.

ಜೀವದ ಮೇಲೆ ಬಂದೊದಗಿದ ಈ ಪ್ರಸಂಗಗಳಲ್ಲಿ ಬಾದಶಹನ ಅಂಗವಿರುವದೆಂದು ಆ ಸರಲಸ್ವಭಾವದ ಶೇರಅಫಗನನಿಗೆ ಸಂಶಯುವಾದರೂ ಬರಲಿಲ್ಲ. ಆದರೆ ಧೂರ್ತಳಾದ ಅವನ ಹೆಂಡತಿಯ ಲಕ್ಷ್ಯಕ್ಕೆ ಇದರ ಮರ್ಮವು ತೋಚಿ, ತ್ವರಿತವಾಗಿ ಬಂಗಾಲಕ್ಕೆ ಹೋಗುವದಕ್ಕಾಗಿ ತನ್ನ ಗಂಡನಿಗೆ ಬೇಡಿಕೊಂಡಳು. ಅತ್ತ ಹೋದರೆ ತಮ್ಮ ವೈರಿಯು ಖಂಗಿನ ಕೃತಿಗಳಿಂದ ತನ್ನ ಪತಿಯು ರಕ್ಷಣವಾಗುವ ಸಂಭವವಾದರೂ ವಿಶೇಷವಾಗಿರುವದೆಂದು ಅವಳು ವಿಚಾರಿಸಿದಳು. ಮುಂದೆ ಆರು ತಿಂಗಳುಗಳ ವರೆಗೆ ಯಾವದಾದರೂ ವಿಶೇಷವಾದ ಸಂಗತಿಯು ಸಂಭವಿಸಲಿಲ್ಲ; ಆದರಿಂದ ಬಾದಶಹನು ತನ್ನ ಮೇಲಿನ ಲೋಭವನ್ನು ಬಿಟ್ಟಿರಬಹುದು, ಅಥವಾ ಅವನಿಗೆ ಕೃತಕರ್ಮದ ಪಶ್ಚಾತ್ತಾಪವಾಗಿ ಇನ್ನು ಮುಂದೆ ಇವರ ಗೊಡವಿಗೆ ಹೋಗಬಾರದೆಂದು ನಿಶ್ಚಯು ಮಾಡಿರಬಹುದಾಗಿ ಅವಳು ಯೋಚಿಸಿದಳು.

ಬಂಗಾಲದ ಸುಭೇದಾರನಾದ ಕುತುಬಶಹನು ಬಾದಶಹನಿಗೆ ಬಾಲ್ಯದಲ್ಲಿ ಸ್ತನಪಾನ ಮಾಡಿಸಿದವಳ ಮಗನಾಗಿದ್ದನು. ಅವನಿಂದ ಜಹಾಂಗೀರನ ದುಷ್ಟಬುದ್ಧಿಯು ಪುನಃ ಜಾಗೃತವಾಗಹತ್ತಿತು. ಶೇರಅಫಗನನ ಕೊಲೆಯು ಸಲುವಾಗಿ ಕುತುಬಶಹನು ನಾಲ್ವತ್ತು ಜನ ಕೊಲೆಗಾರರನ್ನು ಸಿದ್ಧಪಡಿಸಿ ಯೋಗ್ಯವಾದ ಸಂಧಿಯನ್ನು ನಿರೀಕ್ಷಣ ಮಾಡುತ್ತ ಕುಳಿತಿದ್ದನು. ಒಂದು

ರಾತ್ರಿ ಆ ಸರದಾರನ ಸೇವಕರು ವ್ಯವಸ್ಥಿತರಾಗಿ ನಿಶ್ಚಿಂತರಾಗಿ ಕುಳಿತಿರುವ ಸಂಧಿಯನ್ನು ಸಾಧಿಸಿ, ಈ ನಾಲ್ವತ್ತು ಜನ ಕೊಲೆಗಾರರು ಅವನ ಶಯನ ಮಂದಿರವನ್ನು ಹೊಕ್ಕರು. ಇನ್ನು ಶೇರಅಫಗನನ ಎದೆಯಲ್ಲಿ ಕಠಾರಿಯು ನಡುವದು, ಅಷ್ಟರಲ್ಲಿ ಕೊಲೆಗಾರರಲ್ಲಿ ಒಬ್ಬನಿಗೆ ಪಶ್ಚಾತ್ತಾಪವಾಗಿ ಅವನು ತನ್ನ ಜತೆಗಾರರಿಗೆ ಗಟ್ಟಿಯಾಗಿ ಅಂದದ್ದೇನಂದರೆ, "ಹಾ! ನಿಲ್ಲಿರಿ, ಇವ ನನ್ನು ಕೊಲ್ಲುವದಕ್ಕಾಗಿ ನಮಗೆ ಬಾದಶಹನ ಹುಕುಮವಾಗಿದ್ದರೂ ನಾವು ನಮ್ಮ ಪೌರುಷ್ಯಕ್ಕೆ ಶೋಭಿಸುವಂತೆ ವರ್ತಿಸಬೇಕು. ಇವನು ಒಬ್ಬನು, ಮೇಲಾಗಿ ನಿದ್ರಿಸ್ಥನು; ಇಂಥ ಸ್ಥಿತಿಯಲ್ಲಿ ನಾವು ನಾಲ್ವತ್ತು ಜನರು ಇವನ ಮೇಲೆ ಕಡಿದುಬೀಳುವದು ತೀರ ಅನ್ಯಾಯವಾದದ್ದು."

ಇವನ ಆವೇಶಯುಕ್ತವಾದ ಭಾಷಣದಿಂದ ಎಚ್ಚತ್ತ ಶೇರಅಫಗನನು "ಭಾಪುರೆ, ಶೂರಾ, ಸರಿಯಾಗಿ ನುಡಿದೆ." ಎಂದು ಮಾತಾಡಿ ಹಾಸಿಗೆ ಕೆಳಗಿದ್ದ ಕತ್ತಿಯನ್ನು ಕೈಯಲ್ಲಿ ತೆಗೆದುಕೊಂಡು, ತನ್ನ ಶರೀರದ ಮೇಲಾ ಗುವ ಶಸ್ತ್ರಘಾತಗಳನ್ನು ನಿವಾರಿಸುವದಕ್ಕಾಗಿ ಒಂದು ಮೂಲೆಯಲ್ಲಿ ನಿಂತು ಕೊಂಡನು. ತುಸುಹೊತ್ತಿನಲ್ಲಿಯೇ ಅರ್ಧಾಧಿಕ ಕೊಲೆಗಾರರು ಅವನ ಕತ್ತಿಗೆ ಬಲಿಯಾದರು, ಕೆಲವರು ಗಾಯಪಟ್ಟರು ಮತ್ತು ಉಳಿದವರು ಓಡಿ ಹೋದರು. ತನ್ನ ಗಟ್ಟಿಯಾದ ಭಾಷಣಗಳಿಂದ ಶೇರಅಫಗನನ್ನು ಎಚ್ಚರಿ ಪಡಿಸಿದ ಮುದುಕನೊಬ್ಬನೇ ಅಲ್ಲಿ ನಿಂತನು. ತನ್ನ ಮೇಲೆ ಉಪಕಾರ ಮಾಡಿದ ಮುದುಕನ ಕೈಯಲ್ಲಿ ಕೈಯನ್ನು ಕೊಟ್ಟು ಒಳ್ಳೇ ಪ್ರೇಮದಿಂದ ಶೇರಅಫಗನನು ಆವನ ಸಂಗಡ ಮಾತಾಡತೊಡಗಿದನು ಈ ನೀಚ ಮತ್ತು ನಿರ್ಲಜ್ಜತನದ ಕೃತ್ಯದ ವಿಷಯಕವಾಗಿ ಅವನ ಮುಖದಿಂದ ಎಲ್ಲ ಸಂಗತಿ ಗಳನ್ನು ತಿಳಿದುಕೊಂಡು, ಅವನಿಗೆ ವಸ್ತ್ರಾಭರಣಗಳಿಂದ ಸಂತೋಷಪಡಿಸಿ, ಈ ಸುದ್ದಿಯು ಜನರಲ್ಲಿ ಹಬ್ಬಬೇಕೆಂದು ಶೇರಅಫಗನನು ಅವನನ್ನು ಮುಕ್ತ ಮಾಡಿದನು.

ಈ ರಾತ್ರಿಯಲ್ಲಿ ಸಂಭವಿಸಿದ ಸಂಗತಿಗಳು ಜನರೊಳಗೆ ಹಬ್ಬಹತ್ತಿದ ಕೂಡಲೆ, ಆವನ ಶೌರ್ಯದ ಕೀರ್ತಿಯು ಸರ್ವತ್ರದಲ್ಲಿ ಹಬ್ಬಿ ಅವನು ಹೋದ ಹೋದತ್ತ ಸಕೌತುಕವಾಗಿ ನೋಡುವ ಜನರ ದಟ್ಟಣೆಯು ಅವನ ಸುತ್ತ ಅತಿ ಶಯವಾಗಿ ಆಗಹತ್ತಿದ್ದರಿಂದ, ಅವನಿಗೆ ಮನೆಬಿಟ್ಟು ಹೊರಗೆ ಹೋಗುವದು

ಸಹ ಕಠಿಣವಾಗಹತ್ತಿತು.

ಆ ಬಳಿಕ ಶೇರಅಫಗನನು ತನ್ನ ಪತ್ನೀಸಮೇತನಾಗಿ ಬಂಗಾಲದ ರಾಜಧಾನಿಯನ್ನು ಬಿಟ್ಟು ತಾನು ಮೊದಲು ಇರುತ್ತಿದ್ದ ಬರದ್ವಾನ ಪ್ರಾಂತದಲ್ಲಿ ಇರಹತ್ತಿದನು. ಅಲ್ಲಿಯಾದರೂ ಒಂದು ಕಡೆಗೆ ಇರುವದರಿಂದ ತಾನು ಸುರಕ್ಷಿತವಾಗಿ ಉಳಿಯುವೆನೆಂದು ಅವನು ಯೋಚಿಸಿದ್ದನು. ಆದರೆ, ಈ ಆಶೆಯಾದರೂ ನಿರರ್ಥಕವಾಯಿತು. ಸ್ವಲ್ಪ ದಿವಸಗಳಲ್ಲಿಯೇ ಬಂಗಾಲದ ಸುಭೇದಾರನು ಮಿತ್ರತ್ವದ ಸಂಬಂಧವನ್ನು ಹಚ್ಚಿ ಅವನ ಭೆಟ್ಟಿಗಾಗಿ ಬಂದನು. ಪ್ರಾಂತದ ಸುಭೇದಾರನು ತನ್ನ ಭೆಟ್ಟಿಗೆ ಬರುತ್ತಾನೆಂದು ತಿಳಿದ ಕೂಡಲೆ, ಶೇರಅಫಗನನು ಕುದುರೆಯ ಮೇಲೆ ಸವಾರನಾಗಿ, ಸಂಗಡ ಇಬ್ಬರೇ ಸೇವಕರನ್ನು ತೆಗೆದುಕೊಂಡು ಅವನಿಗೆ ಸನ್ಮಾನಪೂರ್ವಕವಾಗಿ ಎದುರಾದನು. ಪರಸ್ಪರರ ದರ್ಶನವಾದ ಕೂಡಲೆ, ಪರಸ್ಪರರಿಗೆ ಅತ್ಯಂತ ಆನಂದವಾದಂತೆ ಕಂಡುಬಂದಿತು. ಕೆಲವು ಹೊತ್ತಿನವರೆಗೆ ಪರಸ್ಪರರ ಸಂಭಾಷಣವಾದ ಬಳಿಕ, ಕುತುಬಶಹನು ತನ್ನ ದರಬಾರದ ಆನೆಯನ್ನು ತರುವದಕ್ಕೆ ಅಪ್ಪಣೆಯನ್ನು ಮಾಡಿದನು; ಮತ್ತು ಅದು ಅಲ್ಲಿಗೆ ಬಂದ ಕೂಡಲೆ, ಅದರ ಮೇಲೆ ಹತ್ತುವದಕ್ಕೆ ಸಿದ್ಧನಾದನು. ಈ ರೀತಿಯಾಗಿ ಕುತುಬಶಹನು ಗಜಾರೂಢನಾಗುತ್ತಿರುವಾಗ ಶೇರಅಫಗನನು ಶಿಷ್ಟಾಚಾರಕ್ಕನುಸರಿಸಿ ವಿನಯಪೂರ್ವಕವಾಗಿ, ತಾನು ಕೂತಿದ್ದ ಕುದುರೆಯನ್ನು ಒಂದು ಬದಿಗೆ ಮಾಡಿದನು. ಇಷ್ಟರಲ್ಲಿ ಒಬ್ಬ ಜವಾನನು ಅವನ ಕುದುರೆಯ ಮೇಲೆ ಕತ್ತಿಯ ಆಘಾತವನ್ನು ಮಾಡಿದನು. ಇದನ್ನು ನೋಡಿದ ಕೂಡಲೆ ಮುಂದೆ ಸಂಭವಿಸುವ ಎಲ್ಲ ಸಂಗತಿಗಳು ಅವನ ಮುಂದೆ ಮೂರ್ತಿಮಂತವಾಗಿ ನಿಂತವು. ಕೂಡಲೆ ಕುತುಬನ ಸಂಗಡದಲ್ಲಿದ್ದ ಜವಾನರು ತಮ್ಮ ಕತ್ತಿಗಳನ್ನು ಹಿರಿದರು. ತ್ವರಿತವಾಗಿ ಯಾವದಾದರೊಂದು ಯೋಚನೆಯನ್ನು ಯೋಚಿಸಿದ ಹೊರತು ತನ್ನ ಪ್ರಾಣರಕ್ಷಣವಾಗುವದು ದುರ್ಲಭವಾದದ್ದೆಂದು ತಿಳಿದು ಶೇರಅಫಗನನು ತನ್ನ ಕುದುರೆಯನ್ನು ಮುಂದಕ್ಕೆ ದಬ್ಬಿದನು; ಮತ್ತು ಕ್ಷಣಾರ್ಧದಲ್ಲಿ ಆನೆಯ ಹತ್ತಿರ ಬಂದು ತನ್ನ ಶಸ್ತ್ರದ ಒಂದೇ ಆಘಾತದಿಂದ ಆನೆಯ ಮೇಲಿನ ಅಂಬಾರಿಯನ್ನು ನೆಲಕ್ಕೆ ಕೆಡವಿ, ಅದರಲ್ಲಿ ಕುಳಿತಿದ್ದ ಕುತುಬನನ್ನು ಎರಡು ತುಂಡು ಮಾಡಿದನು. ಬಾದಶಹನಿಗೆ ಪ್ರಿಯವಾದ

ದ್ದನ್ನು ಮಾಡುವದರ ಸಲುವಾಗಿ ಯೋಚಿಸಿದ ಯುಕ್ತಿಯನ್ನು ಕಡೆಗಾಣಿಸು ವದರಲ್ಲಿ ಕುತುಬನು ತನ್ನ ಜೀವಕ್ಕೆ ಎರವಾದನು. ಮತ್ತು ವಿಶ್ವಾಸಘಾತಕ ತನದ ಯೋಗ್ಯವಾದ ಪ್ರಾಯಶ್ಚಿತ್ತವು ಅವನಿಗೆ ದೊರೆಯಿತು.

ಈ ರೀತಿಯಾಗಿ ಕುತುಬಶಹನ ಪರಿಸಮಾಪ್ತಿಯಾದ ಬಳಿಕ, ಶೇರ ಅಫಗನನು ತನ್ನ ಸುತ್ತ ಸಂದಟ್ಟವಾಗಿ ನಿಂತಿದ್ದ ಜವಾನರ ಕಡೆಗೆ ದೃಷ್ಟಿ ಯನ್ನು ಹೊಳ್ಳಿಸಿದನು. ಕೆಲವು ಹೊತ್ತು ಚಕಮಕಿ ಹಾರಿದ ಬಳಿಕ ಕುತು ಬನ ಸಂಗಡದಲ್ಲಿದ್ದ ನಾಲ್ಕು ಜನ ಸರದಾರರು ಗತಪ್ರಾಣರಾದರು. ಉಳಿದ ಸರದಾರರೂ ಶಿಪಾಯರೂ ಭಯಚಕಿತರಾಗಿ ಓಡಿಹೋಗಿ ದೂರದಲ್ಲಿ ನಿಂತು ಕೊಂಡು, ಶೇರಅಫಗನನ ಮೇಲೆ ಗುಂಡು ಮತ್ತು ಬಾಣಗಳ ವೃಷ್ಟಿಯನ್ನು ಮಾಡಹತ್ತಿದರು. ಶೇರಅಫಗನನ ಕುದುರೆಗೆ ಒಂದು ಗುಂಡು ತಗಲಿ ಅದು ಸತ್ತು ನೆಲಕ್ಕೆ ಬಿದ್ದಿತು. ಮುಂದೆ ಯಾವ ಉಪಾಯವೂ ಉಳಿಯಲಿಲ್ಲೆಂಬ ದನ್ನು ಕಂಡು ಶೂರನಾದ ಶೇರಅಫಗನನಿಗೆ ಬಹಳೇ ವಿಷಾದವೆನಿಸಹತ್ತಿತು. ಅವನು ಆ ಅಸಂಖ್ಯ ಶಿಪಾಯರ ಹೇಡಿತನಕ್ಕಾಗಿ ಅವರ ನಿರ್ಭರ್ತ್ಸನೆಯನ್ನು ಮಾಡಿದನು. "ನೀವು ಒಬ್ಬೊಬ್ಬರೇ ನನಗೆ ಎದುರಾಗಿ ಶೂರರಿಗೆ ಉಚಿತ ವಾಗಿರುವ ಮಾರ್ಗದಿಂದ ಕ್ಷಾತ್ರಧರ್ಮದ ಆಚರಣೆಯನ್ನು ಮಾಡಿರಿ" ಮುಂತಾದ ಅನೇಕ ಮಾತುಗಳನ್ನು ಆಡಿದರೂ ಆ ದುಷ್ಟರು ಅವನ ವಿನಂತಿ ಯನ್ನು ಮಾನ್ಯಮಾಡಲಿಲ್ಲ. ಇನ್ನು ಮೇಲೆ ನಿಶ್ಚಿತವಾಗಿ ಮರಣದ ಹೊರತು ಗತ್ಯಂತರವಿಲ್ಲೆಂದು ಯೋಚಿಸಿ, ತನ್ನ ಕೈಯೊಳಗಿನ ಖಡ್ಗವನ್ನು ನೆಲಕ್ಕೆ ಚೆಲ್ಲಿ ಮಕ್ಕೆಯ ದಿಕ್ಕಿಗೆ ಸಮ್ಮುಖನಾಗಿ, ಅಲ್ಲಿ ಅವನಿಗೆ ಆ ಕಾಲಕ್ಕೆ ನೀರು ಸಹ ದೊರೆಯದ್ದರಿಂದ, ಮೃತ್ತಿಕೆಯ ಸ್ನಾನವನ್ನು ಮಾಡಿ ಪರಮೇಶ್ವರನನ್ನು ಪ್ರಾರ್ಥಿಸಿ, ಆ ಬಳಿಕ ಶಾಂತನಾಗಿ ನಿಂತುಕೊಂಡನು. ಆದರೂ ಅವನ ಹತ್ತರ ಹೋಗುವದಕ್ಕೆ ಶತ್ರುಗಳು ಧೈರ್ಯಪಡಲಿಲ್ಲ. ಬಂದೂಕಿನ ಆರು ಗುಂಡುಗಳು ಅವನ ಮೈಯಲ್ಲಿ ನಟ್ಟವು. ಅದರಿಂದ ಅವನು ವಿಹ್ವಲನಾಗಿ ಮೃತ್ಯುಲೋಕವನ್ನು ಬಿಟ್ಟುಹೋದನು. ಅವನು ಗತಪ್ರಾಣನಾಗಿ ನೆಲದ ಮೇಲೆ ಬಿದ್ದಬಳಿಕ ಸಹ ಶತ್ರುಗಳು ಅವನ ಮೇಲೆ ಭೀತಿಯಿಂದ ಗುಂಡು ಗಳನ್ನು ಹಾಕುತ್ತಿದ್ದರು. ಶತ್ರುಪಕ್ಷದವರು ಸಹ ಅವನ ಶೌರ್ಯದ ವರ್ಣನೆಯನ್ನು ಮಾಡಿದರು. ಆದರೆ ಅವರು ಅವನ ಕೀರ್ತಿಯನ್ನು ಹಬ್ಬಿ

ಸುವದರಲ್ಲಿ ತಮ್ಮ ಅಪಕೀರ್ತಿಯನ್ನು ದಿಗಂತರ ಮಾಡಿಕೊಂಡರೆಂದು ಒಬ್ಬ ಇತಿಹಾಸಜ್ಞನು ಅಂದದ್ದು ಅಕ್ಷರಶಃ ನಿಜವಾಗಿದೆ.

ಈ ರೀತಿಯಾಗಿ ಶೇರಅಫಗನನ ಅಂತವಾಯಿತು. ಅವನಿಗೆ ಸರಿಯಾದ ನಿಷ್ಕಪಟಿಯೂ, ಉದಾರನೂ, ದಯಾವಂತನೂ, ಶೂರನೂ ಆ ಕಾಲಕ್ಕೆ ದೊರೆಯುತ್ತಿದ್ದಿಲ್ಲ. ಇಂಥ ಶ್ರೇಷ್ಠ ನರರತ್ನವು ಮಣ್ಣುಪಾಲಾಗಿ ಹೋಗುವದಕ್ಕೆ ಒಬ್ಬ ಸ್ತ್ರೀಯ ಅದ್ಭುತ ಸೌಂದರ್ಯವೇ ಕಾರಣವಾಯಿತು.

ಕುತುಬನು ಮರಣಹೊಂದಿದ ಬಳಿಕ ಆವನ ಪದಕ್ಕೆ ಬಂದ ಸರದಾರನು ಶೇರಅಫಗನನ ಮರಣದ ನಿಶ್ಚಿತವಾದ ಸುದ್ದಿಯನ್ನು ತಿಳಿದು, ಮೆಹೆರಉನ್ನಿಸಾ ಇವಳಿಗೆ ಮುಂದೆ ಏನು ಮಾಡಬೇಕೆಂಬ ವಿಚಾರವನ್ನಾದರೂ ಮಾಡುವದಕ್ಕೆ ಅವಧಿಯನ್ನು ಸಹ ಕೊಡದೆ, ಅವಳು ಇರುತ್ತಿದ್ದ ಮಂದಿರಕ್ಕೆ ಮುತ್ತಿಗೆಯನ್ನು ಹಾಕಿ, ಅವಳನ್ನು ಕೈಸೆರೆ ಹಿಡಿದು ದಿಲ್ಲಿಗೆ ಕಳಿಸಿಕೊಟ್ಟನು. ಮೆಹೆರಉನ್ನಿಸಾ ಇವಳು ದಿಲ್ಲಿಗೆ ಮುಟ್ಟಿದ ಕೂಡಲೆ, ಅನಪೇಕ್ಷಿತವಾದ ಸಂಗತಿಗಳು ಸಂಭವಿಸಿದವು. ಬಾದಶಹನ ವರ್ತನದಲ್ಲಿ ಅವಳ ವಿಷಯಕವಾಗಿ ಅತ್ಯಂತ ನಿಷ್ಠುರತೆ ಮತ್ತು ದುರ್ಲಕ್ಷ್ಯವು ಕಂಡುಬರಹತ್ತಿತು. ರಾಜಮಂದಿರದೊಳಗಿನ ಒಂದು ಕೀಳುಪ್ರತಿಯ ಚಿಕ್ಕ ಮನೆಯಲ್ಲಿ ಅವಳು ಇರಬೇಕೆಂತಲೂ, ಉದರನಿರ್ವಾಹಕ್ಕೆ ತೀರ ಮರ್ಯಾದಿತವಾದ ಸಂಬಳವು ದೊರೆಯಬೇಕೆಂತಲೂ ಗೊತ್ತುಮಾಡಲ್ಪಟ್ಟಿತು. ಮುಂದೆ ಆರು ವರ್ಷಗಳವರೆಗೆ ಅವಳಿಗೆ ಬಾದಶಹನ ದರ್ಶನ ಸಹ ಆಗಲಿಲ್ಲ.

ಶೇರಅಫಗನನ ಘಾತವಾದ ಬಳಿಕ ಮೆಹೆರಉನ್ನಿಸಾ ಇವಳು ದಿಲ್ಲಿಯೊಳಗಿನ ರಾಜಮಂದಿರಕ್ಕೆ ತರಲ್ಪಟ್ಟ ಕೂಡಲೆ, ಅವಳ ವಿಷಯಕವಾಗಿ ಆತುರನಾಗಿದ್ದ ಬಾದಶಹನು ಅವಳಿಗೆ ಭೆಟ್ಟಿಯಾದನು. ಶೇರಅಫಗನನ ಗುಣಗಳಿಗೆ ಅವಳು ಲುಬ್ಧಳಾಗಿದ್ದ ಕಾರಣ, ಅವನ ಕೊಲೆಯನ್ನು ಮಾಡಿಸಿದ ಜಹಾಂಗೀರ ಬಾದಶಹನ ದರ್ಶನವಾದ ಕೂಡಲೆ, ಆ ಅತ್ಯಂತ ಮಾನೀ ಸ್ತ್ರೀಯಳಿಗೆ ಪರಮಾವಧಿಯ ಕೋಪ ಹುಟ್ಟಿ ಅವನನ್ನು ಅತ್ಯಂತ ನಿರ್ಭರ್ತ್ಸನಾಪೂರ್ವಕವಾಗಿ ಧಿಕ್ಕರಿಸಿದಳು. ಈ ಮಾನಹಾನಿಯಿಂದ ಬಾದಶಹನ ಕ್ರೋಧಾಗ್ನಿಯು ಪ್ರದೀಪ್ತವಾಗಿ, ಅವನು ಇಂದಿನವರೆಗೆ ತನ್ನ ಹೃದಯದಲ್ಲಿ ಅವಳ ವಿಷಯಕವಾಗಿ ಪೋಷಣ ಮಾಡಿದ ಪ್ರೇಮಾಗ್ನಿಯು ಕಮರಿ

ಹೋಯಿತು. ಬಾದಶಹನು ಮೆಹೆರಉನ್ನಿಸಾ ಇವಳನ್ನು ತನ್ನ ಸಮ್ಮುಖದಿಂದ ಹೊರಗೆ ಹೋಗುವದಕ್ಕಾಗಿ ಅಪ್ಪಣೆಯನ್ನು ಮಾಡಿ, ತನ್ನ ತಾಯಿಯ ಹತ್ತರ ಅವಳು ತೊತ್ತಾಗಿರಬೇಕೆಂದು ಗೊತ್ತುಪಡಿಸಿ, ಅವಳಿಗೆ ಪ್ರತಿ ತಿಂಗಳಿಗೆ ಅರವತ್ತು ರೂಪಾಯಿಗಳನ್ನು ಮಾತ್ರ ಕೊಡಬೇಕೆಂದು ಆಜ್ಞೆ ಮಾಡಿದನು. ಆ ಬಳಿಕ ಅವನು ಅವಳ ಉಸಾಬರಿಯನ್ನೇ ಬಿಟ್ಟುಕೊಟ್ಟನು.

ಈ ರೀತಿಯಾಗಿ ಕೆಲವು ಕಾಲವು ಗತಿಸಲು, ಮೆಹೆರಉನ್ನಿಸಾಳ ಸೌಂದರ್ಯ ಮತ್ತು ಗುಣಗಳ ಕೀರ್ತಿಯು ಪರಿಮಳವು ಜನರಲ್ಲಿ ಹಬ್ಬಹತ್ತಿದ್ದರಿಂದ ಜಹಾಂಗೀರ ಬಾದಶಹನಿಗೆ ಅವಳ ದರ್ಶನದ ಲಾಲಸೆಯು ಮತ್ತೆ ಉಂಟಾಯಿತು. ಬಾದಶಹನು ತನ್ನ ಮನೋಗತ ಉದ್ದೇಶದ ಪರಿಸ್ಫೋಟವನ್ನು ಮಾಡದೆ ಆಕಸ್ಮಿಕವಾಗಿ ಅವಳ ಮುಂದೆ ಹೋಗಿ ನಿಲ್ಲುವ ಯೋಚನೆಯನ್ನು ಮಾಡಿದನು. ಬಾದಶಹನು ಅವಳ ಮಹಾಲಿನಲ್ಲಿ ಕಾಲಿಟ್ಟಕೂಡಲೆ, ಅಲ್ಲಿಯ ಶೋಭೆ ಹಾಗೂ ಅವರ್ಣನೀಯವಾದ ಸುವ್ಯವಸ್ಥೆಯನ್ನು ನೋಡಿ ಆಶ್ಚರ್ಯಚಕಿತನಾದನು. ಅಲ್ಲಿದ್ದ ಎಲ್ಲ ಪದಾರ್ಥಗಳು ಅತ್ಯಂತ ಮನೋಹರವಾಗಿದ್ದವು. ಅಲ್ಲಿಯ ಒಡೆಯಳಾದ ನೂರಮಹಾಲಳು ಸರ್ವಸಾಧಾರಣವಾದ ಶುಭ್ರ ಉಡಿಗೆಯನ್ನು ಧಾರಣಮಾಡಿ, ಚಿತ್ರವಿಚಿತ್ರವಾದ ಮಂಚದ ಮೇಲೆ ಒಂದು ಕೈಯನ್ನು ಊರಿ ನಿಂತುಕೊಂಡಿದ್ದಳು. ಅವಳ ಸುತ್ತಲೂ ತಮ್ಮ ತಮ್ಮ ಕಾರ್ಯಗಳಲ್ಲಿ ಮಗ್ನರಾದ ದಾಸೀ ಜನರ ಪರಿವಾರವಿತ್ತು. ಅವರೆಲ್ಲರ ಮೈಮೇಲೆ ಉಚ್ಚ ಉಚ್ಚ ವಸ್ತ್ರಾಭರಣಗಳಿದ್ದವು. ಬಹಳ ವರ್ಷಗಳಿಂದ ಬಾದಶಹನ ಮುಖವು ದೃಷ್ಟಿಗೆ ಬೀಳದ್ದರಿಂದ, ಮತ್ತು ಬಾದಶಹನು ಅಲ್ಲಿ ಅವಚಿತವಾಗಿ ಬಂದು ನಿಂತದ್ದರಿಂದ ಮೊದಲು ಅವಳು ತುಸು ಗೊಂದಲದಲ್ಲಿ ಬಿದ್ದಳು. ಸ್ವಾಗತಪರಶಬ್ದಗಳು ಸಹ ಅವಳ ಮುಖದೊಳಗಿಂದ ಹೊರಬೀಳಲಿಲ್ಲ. ಆದರೆ, ತನ್ನ ಕೋಮಲವಾದ ಕರಗಳಿಂದ ತನ್ನ ಮನೋಹರವಾದ ಹಣೆಯನ್ನು ಮುಟ್ಟಿ ನಮ್ರವಾಗಿ ಬಾದಶಹನಿಗೆ ಸಲಾಮು ಮಾಡಿ, ಮಂಚದ ಮೇಲೆ ವಿಶ್ರಮಿಸಿಕೊಳ್ಳುವದಕ್ಕಾಗಿ ಸಂಜ್ಞೆಯನ್ನು ಮಾಡಿದಳು. ಆ ಮಹಾಲಿನಲ್ಲಿ ಅವಳು ಆರು ವರ್ಷಗಳನ್ನು ಕಳೆದಿದ್ದರೂ ಅವಳ ಲಾವಣ್ಯವು ಎಳ್ಳಷ್ಟಾದರೂ ಕುಂದುಪಡದೆ, ಮೊದಲಿನಕಿಂತ ವಿಶೇಷವಾಗಿ ಶೋಭಿಸುತ್ತಿತ್ತು. ಅವಳ ಮುಖಕಮಲವನ್ನು ನೋಡಿ

ಬಾದಶಹನು ಸಂತೋಷಭರಿತನಾಗಿ ಕಂಬದಂತೆ ನಿಂತುಕೊಂಡನು.

ಸ್ವಲ್ಪಹೊತ್ತಿನಮೇಲೆ ಬಾದಶಹನ ಚಿತ್ತವು ಸ್ಥಿರವಾದ ಬಳಿಕ ಮಂಚದಮೇಲೆ ಕುಳಿತುಕೊಂಡನು; ಮತ್ತು ನೂರಮುಹಾಲಳಿಗಾದರೂ ವಿಶ್ರಮಿಸಿಕೊಳ್ಳುವದಕ್ಕಾಗಿ ಹೇಳಿದನು. ಬಳಿಕ ಬಾದಶಹನು ನೂರ ಮುಹಾಲಳಿಗೆ ಉದ್ದೇಶಿಸಿ: "ನಿಮ್ಮ ದಾಸೀಜನರೆಲ್ಲರೂ ಪರಿಪರಿಯ ವಸ್ತ್ರಾಲಂಕಾರಭೂಷಣಗಳಿಂದ ಭೂಷಿತರಾಗಿರಲು ಅವರ ಸ್ವಾಮಿನಿಯರಾದ ತಾವು ಮಾತ್ರ ತೀರ ಸಾಧಾರಣಪ್ರತಿಯ ವೇಷವನ್ನು ಧರಿಸುವದೆಂದರೆ, ಆಶ್ಚರ್ಯವೇ ಸರಿ."

ಆಗ್ಗೆ ಚತುರಳಾದ ಆ ಸ್ತ್ರೀಯು ಉತ್ತರವನ್ನು ಕೊಟ್ಟದ್ದೇನಂದರೆ, "ಈ ದಾಸೀಜನರು ನನ್ನ ಸೇವಕರು, ನನ್ನ ಇಚ್ಛೆಗನುಸರಿಸಿ ನಾನಂ ಇವರಿಗೆ ವಸ್ತ್ರಾಭೂಷಣಗಳನ್ನು ಕೊಡುತ್ತೇನೆ; ಮತ್ತು ನನ್ನ ತಿಳುವಳಿಕೆಯ ಪ್ರಕಾರ ಇವರ ಹೀನಸ್ಥಿತಿಯನ್ನು ದೂರಮಾಡಲು ಪ್ರಯತ್ನಿಸುತ್ತೇನೆ. ನಾನು ಅವರ ಸ್ವಾಮಿನಿಯಾಗಿರುವದರಿಂದ ನನ್ನ ಇಚ್ಛೆಯ ಪ್ರಕಾರ ಅವರಿಗೆ ನಡೆದುಕೊಳ್ಳಬೇಕಾಗುತ್ತದೆ. ಆದರೆ ಶಹಾನಶಹರೇ, ನಾನು ಈ ತಮ್ಮ ಚರಣಕಮಲಗಳ ದಾಸಿಯಾಗಿರುವದರಿಂದ ನನ್ನ ವೇಷವು ತಮ್ಮ ಮನೋದಯಾನುರೂಪವಾಗಿಯೇ ಇರಬೇಕು. ಬಾದಶಹರ ಇಚ್ಛೆಯು ನನಗೆ ತಿಳಿಯ ಬಂತೆಂದರೆ ಅದಕ್ಕನುಸಾರವಾಗಿ ನಾನು ನಡೆದುಕೊಳ್ಳುವೆನು."

ಆರು ವರ್ಷಗಳ ಏಕಾಂತವಾಸದಿಂದ ನೂರಮುಹಾಲಳ ಚಿತ್ತವು ಚಂಚಲವಾಗಿತ್ತು; ಮತ್ತು ಬಾದಶಹನೇ ತನ್ನ ಪತಿಯ ಮರಣಕ್ಕೆ ಕಾರಣನಾಗಿದ್ದನೆಂಬ ಸಂಗತಿಯು ವಿಸ್ಮರಣವು ಅವಳಿಗೆ ಆಗಹತ್ತಿತ್ತು. ಅವಳ ಕೂಡ ಸಂಭಾಷಣೆಯು ನಡೆದಾಗ ಬಾದಶಹನ ಪೂರ್ವದ ಪ್ರೇಮವು ಜಾಗೃತವಾಗಿ ಪ್ರೀತಿಪೂರ್ಣ ಅಂತಃಕರಣದಿಂದ ಅವಳನ್ನು ಆಲಿಂಗಿಸಿ, ನಡೆದು ಹೋದ ಸಂಗತಿಗಳನ್ನು ಮರೆತುಬಿಡುವದಕ್ಕಾಗಿ ಅವಳಿಗೆ ಹೇಳಿಕೊಂಡನು. ಮತ್ತು ತತ್ಕ್ಷಣವೇ ದೊಡ್ಡ ಆಕಾರಗಳುಳ್ಳ ನಾಲ್ವತ್ತು ಮುತ್ತುಗಳ ಒಂದು ಅಮೌಲ್ಯವಾದ ಮುಕ್ತಾಹಾರವನ್ನು ತನ್ನ ಸ್ವಹಸ್ತದಿಂದ ಅವಳ ಕಂಠದಲ್ಲಿ ಹಾಕಿ "ನಾನು ನಿನ್ನನ್ನು ನನ್ನ ಸಿಂಹಾಸದ ಸ್ವಾಮಿನಿಯನ್ನು ಮಾಡುವೆನೆಂಬ" ಮಧುರ ವಾಕ್ಯವನ್ನು ಅವಳ ಕಿವಿಯಲ್ಲಿ ನುಡಿದನು. ಕೂಡಲೆ,

ಅವಳನ್ನು ಆ ನಿಗ್ರಹದ ಸ್ಥಳದಿಂದ ಮುಕ್ತಮಾಡಿ, ವಿಶಾಲವಾದ ರಮ್ಯ ರಾಜಮಂದಿರಗಳನ್ನು ಅವಳ ವಶಕ್ಕೆ ಕೊಟ್ಟನು. ಅವಳ ಸೌಂದರ್ಯಕ್ಕೂ ಪರಸ್ಪರರ ಪ್ರೀತಿಗೂ ಒಪ್ಪುವಂತೆ ಅವರ ವಿವಾಹವು ಒಳ್ಳೇ ಸಡಗರದಿಂದ ಆಯಿತು. ಬಾದಶಹನು ಅತ್ಯುತ್ಕಟ ಪ್ರೇಮದಿಂದ ಅವಳಿಗೆ "ನೂರಜಹಾನ" ಎಂದು ನಾಮಾಭಿಧಾನವನ್ನು ಮಾಡಿ, ಅವಳ ಹೆಸರಿನ ಸುವರ್ಣದ ನಾಣ್ಯಗಳನ್ನು ಮುದ್ರಿಸುವದಕ್ಕಾಗಿ ಅಪ್ಪಣೆಯನ್ನು ಮಾಡಿದನು.

ಬಾದಶಹನು ನೂರಜಹಾನಳ ತಂದೆಯನ್ನು ಮುಖ್ಯ ಪ್ರಧಾನನನ್ನಾಗಿ ಮಾಡಿದ್ದರಿಂದ ಅವಳ ಅಮರ್ಯಾದಿತ ಸತ್ತೆಯು ಒಳಿತಾಗಿ ದೃಢವಾಯಿತು. ಅವಳ ತಮ್ಮನಾದ ಆಸಫಖಾನನನ್ನು ಜಹಾಂಗೀರನು ತನ್ನ ದರಬಾರದಲ್ಲಿ ಮೊದಲನೆಯ ಪ್ರತಿಯ ಉಮರಾವನನ್ನಾಗಿ ಮಾಡಿದನು. ಈ ಆಸಫಖಾನನ ಮಗಳಕೂಡ ಬಾದಶಹನ ಪುತ್ರನಾದ ಶಹಾಜಹಾನ ಇವನ ಲಗ್ನವಾಯಿತು. ಶೇರಅಫಗನನಿಂದ ನೂರಜಹಾನಳಿಗೆ ಹುಟ್ಟಿದ ಮಗಳ ಕೂಡ ಬಾದಶಹನ ಎರಡನೇ ಮಗನಾದ ಶಹಾರಿಆರನು ಮದುವೆಯಾದನು. ಭಯಾನಕವುತ್ತು ನಿರ್ಜನವಾದ ಪ್ರದೇಶದಲ್ಲಿ ಒಂದು ಕಾಲಕ್ಕೆ ನಾಮಶೇಷವಾಗಿ ಹೋಗುವ ಪ್ರಸಂಗವು ಬಂದೊದಗಿದ ಕುಟುಂಬವು ಈ ರೀತಿಯಾಗಿ ಭಾಗ್ಯಸೂರ್ಯನ ತೇಜದಿಂದ ಇಡೀ ದೇಶದ ತುಂಬ ಪ್ರಕಾಶಿತವಾಗಹತ್ತಿತು.

ಲಗ್ನದಿವಸದಾರಭ್ಯ ಒಂದೇಸವನೆ ಇಪ್ಪತ್ತು ವರ್ಷಗಳವರೆಗೆ ಬಾದಶಹನ ಮೇಲೂ, ಹಿಂದುಸ್ಥಾನದ ವಿಸ್ತೀರ್ಣವಾದ ರಾಜ್ಯದ ಮೇಲೂ ನೂರಜಹಾನಳು ತನ್ನ ಅನಿಯಂತ್ರಿತವಾದ ಅಧಿಕಾರವನ್ನು ನಡೆಸಿದಳು. ಅವಳ ಇಚ್ಛೆಯ ವಿರುದ್ಧವಾಗಿ ರಾಜ್ಯದಲ್ಲಿ ಯಾರಿಗೂ ಯಾವ ಪ್ರಕಾರದ ಅಧಿಕಾರವು ದೊರೆಯುತ್ತಿದ್ದಿಲ್ಲ. ಪರರಾಷ್ಟ್ರಗಳ ಕೂಡ ಆಗುತ್ತಿದ್ದ ಒಪ್ಪಂದಗಳು ಸಹ ಅವಳ ಸಮ್ಮತಿಯ ಹೊರತು ಆಗದಂತಾದವು.

ಈ ರೀತಿಯಾಗಿ ಕೆಲವು ವರ್ಷಗಳ ವರೆಗೆ ಎಲ್ಲ ಸಂಗತಿಗಳು ಸುಸೂತ್ರವಾಗಿ ನಡೆದವು; ಆದರೆ ಜಹಾಂಗೀರ ಬಾದಶಹನ ತರುವಾಯ ಪಟ್ಟವು ಯಾರಿಗೆ ದೊರೆಯಬೇಕೆಂಬ ಪ್ರಶ್ನೆಯು ಉದ್ಭವಿಸಿದ್ದರಿಂದ ಬಡಿದಾಟಕ್ಕೆ ಪ್ರಾರಂಭವಾಯಿತು. ಜಹಾಂಗೀರ ಮತ್ತು ನೂರಜಹಾನ ಇವರ ನಡುವೆ ಕೊನೆಯ ವರೆಗೆ ಯಾವ ಪ್ರಕಾರದ ವಿತುಷ್ಟವೂ ಉಂಟಾಗಲಿಲ್ಲ. ಉತ್ಪನ್ನ

ವಾದ ಬಡಿದಾಟವು ಮಕ್ಕಳಲ್ಲಿ ನಡೆಯಿತು. ತಂದೆಯು ಹಿಂದೆ ಪಟ್ಟದ ಮೇಲೆ ಕೂಡುವ ಅಧಿಕಾರವು ಶಹಾಜಹಾನನದೆಂದು ಸರ್ವಸಾಧಾರಣ ತಿಳುವಳಿಕೆ ಯಾಗಿತ್ತು; ಆದರೆ ಕೆಲವರ ಮನೋದಯವು ನೂರಜಹಾನಳ ಅಳಿಯನಾದ ಶಹಾರಿಆರನಿಗೆ ಪಟ್ಟವು-ದೊರೆಯಬೇಕೆಂದಿತ್ತು. ಶಹಾಜಹಾನನು ಬಂಡಾಯ ವನ್ನು ಮಾಡಿದನು; ಆದರೆ ಆದರಲ್ಲಿ ಅವನ ಪರಾಜಯವಾಗಿ ತಂದೆಯು ಕ್ಷಮೆಯನ್ನು ಅವನು ಬೇಡಿಕೊಳ್ಳಬೇಕಾಯಿತು.ವ ಎತ್ತು ತಂದೆಯಾದರೂ ಅವನಿಗೆ ಕ್ಷಮೆಯನ್ನು ನೀಡಿದನು. ಶಹಾಜಹಾನನ ಬಂಡಾಯವು ಮುರಿದು ಶಾಂತತೆಯು ನೆಲೆಗೊಳ್ಳುವಷ್ಟರಲ್ಲಿ ಮೋಹಬತಖಾನನೆಂಬ ಒಬ್ಬ ಬಲಿಷ್ಠ ಮತ್ತು ಸುಪ್ರಸಿದ್ಧ ಸರದಾರನು ಬಂಡಾಯವನ್ನು ಆರಂಭಿಸಿದನು. ಈ ಬಂಡಾಯದಲ್ಲಿ ನೂರಜಹಾನಳು ಒಳ್ಳೇ ಧೈರ್ಯವನ್ನು ತೋರಿಸಿದಳು ಮೋಹ ಬತಖಾನನಿಗೆ ಸರಿಯಾದ ವಿಜಯಶಾಲೀ ಸರದಾರನು ಆ ಕಾಲಕ್ಕೆ ಮತ್ತೊಬ್ಬ ನಿದ್ದಿಲ್ಲ. ರಾಜ್ಯದ ಸಂರಕ್ಷಣೆಗಾಗಲೀ ಅಥವಾ ರಾಜ್ಯಕಾರಸ್ಥಾನದ ಸಿದ್ಧ್ಯರ್ಥ ವಾಗಲೀ ಅವನು ಕತ್ತಿಯನ್ನು ಹಿರಿದುಕೊಂಡು ನಿಂತರೆ, ಅವನ ಸುತ್ತಲೂ ಸಾವಿರಾರು ನುರಿತ ವೀರರು ವಿಲಂಬ ಹತ್ತದೆ ಮಿಲಿತವಾಗುವಂತೆ ಅವನ ಕೀರ್ತಿಯು ತುಂಬಿಕೊಂಡಿತ್ತು. ಈ ಸರದಾರನು ಬಂಗಾಲದ ಸುಭೇದಾರ ನಾಗಿದ್ದನು. ಇವನ ರಾಜ್ಯಕಾರಭಾರದಲ್ಲಿ ದ್ರವ್ಯದ ದುರ್ವಿನಿಯೋಗವಾಗಿ ದೆಂಬ ಸಂಗತಿಯ ವಿಚಾರಣೆಯು ದರಬಾರದಲ್ಲಿ ನಡೆದಿತ್ತು. ಆದ್ದರಿಂದ ಕೂಡಲೆ ದರಬಾರದಲ್ಲಿ ಬಂದು ಹಾಜರಾಗುವದಕ್ಕೆ ಅವನಿಗೆ ಅಪ್ಪಣೆಯಾ ಗಿತ್ತು. ತನ್ನ ಮೇಲೆ ಮಿಥ್ಯಾರೋಪ ಬಂದಿರುತ್ತದೆಂದು ಜಾಹೀರಪಡಿಸಿ ದರಬಾರಕ್ಕೆ ಹೋಗುವದನ್ನು ಅವನು ತಪ್ಪಿಸಹತ್ತಿದನು. ಆದರೆ ದರಬಾ ರಕ್ಕೆ ಬರಲೇಬೇಕೆಂದು ವಿಶೇಷವಾದ ಆಗ್ರಹವಾಗಲು, ಅವನಿಗೆ ದಿಲ್ಲಿಗೆ ಹೋಗುವದು ಅಗತ್ಯವಾಯಿತು. ದಿಲ್ಲಿಗೆ ಹೋಗುವ ಕಾಲಕ್ಕೆ ಐದು ಸಾವಿರ ರಜಪೂತ ವೀರರು ಅವನ ಸಂಗಡದಲ್ಲಿದ್ದರು.

ಜಹಾಂಗೀರ ಬಾದಶಹನು ಕಾಬೂಲದ ಮೇಲೆ ದಂಡೆತ್ತಿ ಹೋಗುವ ತಯಾರಿಯಲ್ಲಿದ್ದನು. ಬಾದಶಾಹೀ ಸೈನ್ಯದ ತಳವು ತುಸು ಅಂತರದ ಮೇಲಿ ದ್ದದ್ದನ್ನು ಕಂಡು, ವಾದಗ್ರಸ್ತವಾದ ವಿಷಯದ ನಿರ್ಣಯವನ್ನು ಮಾಡುವ ದಕ್ಕಾಗಿ ಮೋಹಬತಖಾನನು ತನ್ನ ಅಳಿಯನನ್ನು ಮುಂದೆ ಕಳಿಸಿದನು;

ಮತ್ತು ಬಾದಶಹನ ಇಂಗಿತವನ್ನು ತಿಳಿದುಕೊಂಡು ಅವನ ದರ್ಶನಕ್ಕೆ ಹೋಗ ಬೇಕೆಂದು ಯೋಚಿಸಿದ್ದನು. ಇವನಿಂದ ಕಳಿಸಲ್ಪಟ್ಟ ದೂತನಿಗೆ ಬಾದಶಹನ ಅಪ್ಪಣೆಯ ಮೇರೆಗೆ ಚಬಕದ ಸಂಭಾವನೆಯು ದೊರೆದು ಅವನು ಹೊರಗೆ ಹಾಕಲ್ಪಟ್ಟನು. ಈ ಮೇರೆಗೆ ಆದ ತನ್ನ ದೂತನ ಮಾನಖಂಡನೆಯನ್ನು ನೋಡಿ, ಮೋಹಬತಖಾನನಿಗೆ ಅತ್ಯಂತ ವಿಷಾದವೆನಿಸಿ ಕ್ರೋಧಭರಿತನಾದನು. ಆದರೆ, ತನ್ನ ಕೋಪವನ್ನು ದಬ್ಬಿಟ್ಟು ಅಪಮಾನದ ಸೇಡು ತೀರಿಸುವ ಸಂಧಿಯನ್ನು ನಿರೀಕ್ಷಿಸಹತ್ತಿದನು.

ಝೇಲಮ ನದಿಯ ದಂಡೆಯ ಮೇಲೆ ಬಾದಶಹನ ಸೈನ್ಯವು ತಳ ಊರಿಕೊಂಡಿತ್ತು. ಮರುದಿವಸ ಪ್ರಾತಃಕಾಲಕ್ಕೆ ಸೈನ್ಯದ ಮುಖ್ಯ ಭಾಗವು ಪೂಲಿನ ಮೇಲಿಂದ ನದೀ ಪಾರಾಗಿ ಹೋಯಿತು. ಹಿಂದಿನಿಂದ ಬಾದಶಹನ ಸವಾರಿಯ ಪರಿವಾರವು ಹೋಗತಕ್ಕದ್ದಿತ್ತು. ಸೈನ್ಯದ ಮುಖ್ಯ ಭಾಗವು ಮುಂದೆ ಹೋಗಲು, ತನಗೆ ಬೇಕಾಗಿದ್ದ ಸಂಧಿಯು ಪ್ರಾಪ್ತವಾಯಿತೆಂದು ಮೋಹಬತಖಾನನು ಯೋಚಿಸಿ, ಕೂಡಲೆ ತನ್ನ ಜನರನ್ನು ಮುಂದೆ ಮಾಡಿ ಪೂಲಿಗೆ ಬೆಂಕಿ ಹಚ್ಚಿದನು. ಅನಂತರ ಬಾದಶಹನ ಡೇರೆಯ ಕಡೆಗೆ ಸಾಗಿ, ಒಳಹೊಕ್ಕು ಬಾದಶಹನ ಮುಂದೆ ನಿಂತನು. ತನ್ನ ಸಂರಕ್ಷಣೆಗಾಗಿ ಈ ಕೃತ್ಯವನ್ನು ಮಾಡಬೇಕಾಯಿತೆಂದು ಬಾದಶಹನಿಗೆ ನಿವೇದನ ಮಾಡಿ ಅವನನ್ನು ಒಂದು ಆನೆಯ ಮೇಲೆ ಕುಳ್ಳಿರಿಸಿ ತನ್ನ ಬಿಡಾರಕ್ಕೆ ಒಯ್ದನು. ಅಲ್ಲಿ ಹೋದಬಳಿಕ, “ಬಾದಶಹರು ನಿಶ್ಚಿಂತರಾಗಿರಬೇಕು; ಬಾದಶಹರ ಸುರಕ್ಷಿತತನಕ್ಕೆ ಯಾವ ಕೊರತೆಯೂ ಬೀಳಲಿಕ್ಕಿಲ್ಲ; ನಾನು ಈ ಕೃತ್ಯವನ್ನು ಕೇವಲ ನನ್ನ ರಕ್ಷಣೆಗಾಗಿ ಮಾಡಿದೆನು. ಯಾಕಂದರೆ, ನನಗಾದರೂ ನನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕಾಗಿದೆ” ಎಂದು ಖಾನನು ನುಡಿದನು.

ಇತ್ತ ನೂರಜಹಾನಳು ಜನಾನಖಾನೆಯೊಳಗಿನ ಒಂದು ಡೇರೆಯಲ್ಲಿದ್ದಳು; ಮತ್ತು ನಡೆದ ಎಲ್ಲ ಸಂಗತಿಗಳು ಅವಳ ಕಣ್ಣಿಗೆ ಬಿದ್ದಿದ್ದವು. ಆದರೂ ಅವಳ ಧೈರ್ಯವು ಕುಗ್ಗದೆ ಆದಷ್ಟು ತೀವ್ರ ನದಿಯನ್ನು ದಾಟಿ ಸೈನ್ಯವನ್ನು ಕೂಡಿಕೊಳ್ಳಬೇಕು, ಮತ್ತು ಬೇಕಾದಷ್ಟು ಸೈನ್ಯವನ್ನು ಸಂಗಡ ತೆಗೆದುಕೊಂಡು ಬಂದು ಮೋಹಬತಖಾನನ ಮೇಲೆ ಹಲ್ಲೆಯನ್ನು ಮಾಡಿ ಬಾದಶಹನನ್ನು ಬಂಧಮುಕ್ತ ಮಾಡಬೇಕೆಂದು ಯೋಚಿಸಿ, ಕೂಡಲೆ ವೇಷಾಂತರ

ಷನ್ನು ಮಾಡಿ ಹೊರಬಿದ್ದಳು. ಮತ್ತು ಪಾಲಿಕೆಯನ್ನೇರಿ ಸೈನ್ಯವನ್ನು ಕೂಡಿಕೊಂಡಳು. ತನ್ನ ತಮ್ಮನಿಗೂ, ಮುಖ್ಯ ಮುಖ್ಯ ಸರದಾರರಿಗೂ ತನ್ನೆದುರಿಗೆ ಕರೆತರಿಸಿ, ಬಾದಶಹನು ಈ ರೀತಿಯಾಗಿ ಗಂಡಾಂತರದಲ್ಲಿ ಬೀಳುವಷ್ಟು ದುರ್ಲಕ್ಷವು ಅವರಿಂದ ಹ್ಯಾಗೆ ಸಂಭವಿಸಿತೆಂದು ಅವರ ನಿರ್ಭರ್ತ್ಸನೆಯನ್ನು ಮಾಡಿದಳು.

ಬಾದಶಹನ ಮುಕ್ತತೆಗಾಗಿ ಎಲ್ಲ ಸೈನ್ಯವು ಮರುದಿವಸ ಹೊರಬೀಳಬೇಕೆಂದು ಅಪ್ಪಣೆಯನ್ನು ಮಾಡಿ, ಸೈನ್ಯದ ಆಧಿಪತ್ಯವನ್ನು ತನ್ನ ಕಡೆಗೆ ತೆಗೆದುಕೊಂಡಳು. ಒಂದು ಬಲಾಢ್ಯವಾದ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತುಕೊಂಡು ಸೈನ್ಯಕ್ಕೆ ಅಪ್ಪಣೆ ಮಾಡಹತ್ತಿದಳು; ಆದರೆ ನದಿಯ ಪಾತ್ರವು ಬಹಳ ದೊಡ್ಡದಿದ್ದದರಿಂದ, ಮತ್ತು ಅದರ ಮೇಲಿನ ಪೂಲು ಸುಟ್ಟುಹೋದ್ದರಿಂದ ಅವಳ ಪ್ರಯತ್ನವು ನಿಷ್ಫಲವಾಗಹತ್ತಿತು. ಇತ್ತ ಮೋಹಬತಖಾನನ ಸೈನ್ಯದವರು ಒಳ್ಳೇ ರಭಸದಿಂದ ಹೋರಾಡಿ ನೂರಜಹಾನಳ ಸೈನ್ಯವನ್ನು ಸೋಲಿಸಿ ಓಡಿಸಿಬಿಟ್ಟರು.

ಪರಾಭೂತಳಾದ ರಾಣಿಯನ್ನು ಹಿಡಿಯುವದರ ಸಲುವಾಗಿ ಮೋಹಬತಖಾನನು ವಿತಿಮೀರಿ ಪ್ರಯತ್ನಪಟ್ಟನು; ಆದರೆ ಅವಳು ಒಳ್ಳೇ ಧೂರ್ತತೆಯಿಂದ ಅವನ ಕೈಯೊಳಗಿಂದ ಪಾರಾಗಿ ಲಾಹೋರಕ್ಕೆ ಹೋದಳು. ಅದರಿಂದ ಮೋಹಬತಖಾನನ ಎಲ್ಲ ಪ್ರಯತ್ನಗಳು ನಿಷ್ಫಲವಾದವು. ಕೊನೆಗೆ ಅವನು ಬಾದಶಹನ ಕಡಿಂದ "ಎಲ್ಲ ಸಂಗತಿಗಳ ನಿರ್ಣಯವು ಅನುಕೂಲವಾಗಿದೆ; ಇನ್ನುಮೇಲೆ ಬಾದಶಹನನ್ನು ಬಂದು ಕೂಡುವದಕ್ಕೆ ಯಾವ ಪ್ರಕಾರದ ಭೀತಿಯೂ ಇಲ್ಲ"ವೆಂದು ಬಲಾತ್ಕಾರದಿಂದ ಅವಳಿಗೆ ಪತ್ರಗಳನ್ನು ಬರೆಸಿದನು. ಈ ಪತ್ರಗಳನ್ನು ನೋಡಿ ಅವಳ ಮನಸಿನೊಳಗಿನ ಎಲ್ಲ ಸಂಶಯವು ನಷ್ಟವಾಯಿತು; ಬಾದಶಹನ ಬಿಡಾರಕ್ಕೆ ಹೋಗುವದರ ಸಲುವಾಗಿ ಅವಳು ಲಗುಬಗೆಯಿಂದ ಹೊರಟಳು. ಬಿಡಾರದ ಸಮೀಪಕ್ಕೆ ಬಂದ ಕೂಡಲೆ, ಖಾನನ ಸೈನ್ಯದವರು ಅವಳನ್ನು ಸುತ್ತು ಹಾಕಿ, ಸೆರೆಹಿಡಿದು ಬಾದಶಹನ ಮುಂದೆ ತಂದು ನಿಲ್ಲಿಸಿದರು. ತನ್ನ ಅಳಿಯನಾದ ಶಹಾರಿಯಾರನನ್ನು ಪಟ್ಟದ ಮೇಲೆ ಕೂಡ್ರಿಸುವದಕ್ಕಾಗಿ ಇವಳ ಪ್ರಯತ್ನಗಳು ನಡೆದದ್ದರಿಂದ ಇವಳು ರಾಜದ್ರೋಹವನ್ನು ಮಾಡಿದಂತಾಯಿತು; ಮತ್ತು ಇದಕ್ಕಾಗಿ ಇವ

ಳಿಗೆ ದೇಹಾಂತ ಪ್ರಾಯಶ್ಚಿತ್ತವೇ ಯೋಗ್ಯವಾದದ್ದೆಂದು ಖಾನನು ಬಾದಶಹನಿಗೆ ಹೇಳಿದನು. ಬಾದಶಹರ ಯೋಗ್ಯತೆಯು ದೇವರ ಯೋಗ್ಯತೆಗೆ ಸಮಾನವಾದದ್ದೆಂದು ನಾವೆಲ್ಲರೂ ತಿಳಿಯುತ್ತಿರುವಾಗ, ಇವರು ಉಚ್ಚರು ಇವರು ನೀಚರು ಎಂಬ ಪಕ್ಷಪಾತದಿಂದ ಬಾದಶಹರ ಕೈಯಿಂದ ಅನ್ಯಾಯವಾದರೆ, ಲೌಕಿಕಕ್ಕೆ ಹಾನಿಯುಂಟಾಗುವದೆಂದು ಖಾನನು ಬಾದಶಹನಿಗೆ ನಿಕ್ಷಿಸಿ ಹೇಳಿದನು.

ಭಯಂಕರ ಸಂಕಟದಲ್ಲಿ ತೊಳಲಾಡುತ್ತಿದ್ದ ತನ್ನ ಪ್ರೀತಿಯ ರಾಣಿಯ ಯೋಗ್ಯತೆಯನ್ನಾಗಲೀ, ಅಥವಾ ಶೌರ್ಯವನ್ನಾಗಲೀ ಲಕ್ಷ್ಯಕ್ಕೆ ತಾರದೆ, ನೂರಜಹಾನಳಿಗೆ ದೇಹಾಂತ ಶಿಕ್ಷೆಯನ್ನು ವಿಧಿಸುವ ಒಂದು ಕಾಗದದ ಮೇಲೆ ಬಾದಶಹನು ತನ್ನ ಸಹಿಯನ್ನು ಮಾಡಿದನು. ಜಹಾಂಗೀರನ ಈ ನೀಚತನದ ನಿಷೇಧವನ್ನು ಎಷ್ಟು ಮಾಡಿದರೂ ಅದು ಅಲ್ಪವೇ. ಈ ಸಮಯದಲ್ಲಾದರೂ ಅವಳು ತುಸು ಸಹ ಗಾಬರಿಯಾಗದೆ ಬಾದಶಹನ ಹುಕುಮನ್ನು ಶಾಂತಚಿತ್ತದಿಂದ ಕೇಳಿಕೊಂಡಳು. ಮರಣದ ಪೂರ್ವದಲ್ಲಿ ಬಾದಶಹನದೂ ತನ್ನದೂ ಒಮ್ಮೆ ಭೆಟ್ಟಿಯಾಗಬೇಕೆಂಬ ವಿನಂತಿಯನ್ನು ಮಾತ್ರ ಮಾಡಿಕೊಂಡಳು. "ರಾಜರು ಅಥವಾ ಬಾದಶಹರು, ಒಮ್ಮೆ ಸೆರೆಯಲ್ಲಿ ಬಿದ್ದರೆಂದರೆ, ಸ್ವಾತಂತ್ರ್ಯದ ಕೂಡ ಅವರ ಜೀವಿತವಾದರೂ ನಷ್ಟವಾಗುತ್ತದೆಂಬ ನಿಯಮ ಉಂಟು. ಶಹನ ಭೆಟ್ಟಿಯು ನನಗೆ ಒಮ್ಮೆ ಆಗುವಂತೆ ಮಾಡಿರಿ. ನನ್ನ ದೇಹಾಂತಶಿಕ್ಷೆಯ ಹುಕುಮಿನ ಕಾಗದದ ಮೇಲೆ ಸಹಿ ಮಾಡಿದ ಕೈಯನ್ನು ನನ್ನ ಅಶ್ರುಜಲದಿಂದ ತೊಳೆಯುವದರ ಹೊರತಾಗಿ ಬೇರೊಂದು ಬೇಡಿಕೊಳ್ಳಲಿಕ್ಕಿಲ್ಲ"

ಮೋಹಬತಖಾನನು ಈ ವಿನಂತಿಯನ್ನು ಮಾನ್ಯ ಮಾಡಿದನು. ನೂರಜಹಾನಳು ಬಾದಶಹನ ಕಡೆಗೆ ನೋಡಿದಳು; ಅವಳ ಮುಖದೊಳಗಿಂದ ಒಂದು ಶಬ್ದವು ಸಹ ಹೊರಬೀಳಲಿಲ್ಲ. ಅವಳ ಆ ಮುದ್ರೆಯನ್ನು ನೋಡಿ ಬಾದಶಹನು ಸದ್ಗದಿತ ಅಂತಃಕರಣಪೂರ್ಣನಾಗಿ, ಖಾನನಿಗೆ ಅಂದದ್ದು: "ಮೋಹಬತ, ಈಸ್ತ್ರೀಯಳನ್ನು ಯಾಕೆ ಬದುಕಿಸಿಕೊಳ್ಳುವದಿಲ್ಲ? ನೋಡು, ಅವಳ ನೇತ್ರಗಳೊಳಗಿಂದ ಅಶ್ರುಧಾರೆಗಳು ಹ್ಯಾಗೆ ನಡೆದವೆ!" ಈ ಮಾತುಗಳಿಂದ ಆ ಉದಾರ ಸರದಾರನ ಅಂತಃಕರಣವು ದಯೆಯಿಂದ ಕರಗಿ

ಹೋಯಿತು; ಮತ್ತು 'ಬಾದಶಹರ ಅಪ್ಪಣೆಯು ಹ್ಯಾಗೆ ನಿರರ್ಥಕ ವಾದೀತೆ"ಂದು ಉತ್ತರವನ್ನು ಕೊಟ್ಟು, ಕೂಡಲೇ ರಾಣಿಯನ್ನು ಮುಕ್ತ ಮಾಡಿದನು.

ಮುಂದೆ ಕೆಲವು ತಿಂಗಳುಗಳ ವರೆಗೆ ಬಾದಶಹ ಮತ್ತು ನೂರಜಹಾನ ಈ ಉಭಯತರೂ ಮೋಹಬತಖಾನನ ನಜರಕೈದಿನಲ್ಲಿದ್ದರು. ಕೊನೆಗೆ ಬಾದಶಹನು ಪೂರ್ಣ ಮೆತ್ತಗಾಗಿದ್ದಾನೆಂತಲೂ ತನ್ನ ಮಾನಖಂಡನೆಯು ಪೂರ್ಣವಾಗಿ ತುಂಬಿಬಂದಿತೆಂತಲೂ ಭಾವಿಸಿ ಮೋಹಬತಖಾನನು ಆ ಉಭಯತರನ್ನು ಮುಕ್ತ ಮಾಡಿದನು. ಮೋಹಬತಖಾನನ ಪ್ರತಿಬಂಧದೊಳ ಗಿಂದ ಮುಕ್ತನಾದ ಕೂಡಲೆ, ಬಾದಶಹನು ನೂರಜಹಾನಳ ಹೇಳುವಿಕೆಯ ಮೇಲಿಂದ ಮೋಹಬತಖಾನನ್ನು ರಾಜದ್ರೋಹಿ ಎಂದು ಗೊತ್ತುಪಡಿಸಿ, ಅವನನ್ನು ಕೊಲ್ಲುವವರಿಗೆ ಬಕ್ಷೀಸು ಕೊಡುವೆನೆಂದು ಸಾರಿದನು. ಆದರೆ, ಮೋಹಬತಖಾನನ ಯುದ್ಧಚಾತುರ್ಯವು ಎಷ್ಟು ಮಹತ್ವವುಳ್ಳದ್ದಾಗಿದೆಂಬ ದನ್ನು ಆಸಫಖಾನನು ನೂರಜಹಾನಳಿಗೆ ತಿಳಿಸಿಹೇಳಿ ಅವಳ ರೋಷವನ್ನು ಶಾಂತಪಡಿಸಿದನು. ಬಾದಶಹನು ಮೋಹಬತಖಾನನನ್ನು ಕ್ಷಮಿಸಿ, ದಕ್ಷಿಣ ದಲ್ಲಿದ್ದ ಸೈನ್ಯದ ಮೇಲೆ ಅವನನ್ನು ಮುಖ್ಯಸ್ಥನನ್ನಾಗಿ ನೇಮಿಸಿ, ಅಲ್ಲಿಯ ಸುಭೇದಾರಿಯನ್ನು ಅವನಿಗೆ ಕೊಟ್ಟನು. ಈ ಪ್ರಕಾರ ಬಾದಶಹಾ ಮತ್ತು ಮೋಹಬತಖಾನ ಇವರೊಳಗಿನ ವಿರೋಧವು ನಷ್ಟವಾಗಿ, ಒಡೆಯನ ಮೇಲೆ ಸೇವಕನು ವಿಜಯವನ್ನು ದೊರಕಿಸಿದನು

ಮುಂದೆ ಕೆಲವು ವರ್ಷಗಳ ವರೆಗೆ ನೂರಜಹಾನಳ ಸಾಮ್ರಾಜ್ಯವು ಪೂರ್ವವತ್ ನಡೆಯಿತು. ಆದರೆ ಇಸ್ವಿ ಸನ್ನ ೧೬೨೭ನೇ ವರ್ಷ ಜಹಾಂಗೀರನ ಮರಣದ ಕೂಡ ನೂರಜಹಾನಳ ಸತ್ತೆಯಾದರೂ ನಷ್ಟವಾಯಿತು. ಪತಿಯ ಮರಣದ ನಂತರ ೧೮ ವರ್ಷಗಳ ಮೇಲೆ ಅವಳು ಮರಣಹೊಂದಿ ದಳು. ಅವಳಿಗೆ ಪ್ರತಿವರ್ಷ ೨೫ ಲಕ್ಷ ರೂಪಾಯದ ನೇಮಣೂಕವಿತ್ತು. ಅವಳು ಅತ್ಯಂತ ಮಾನೀಸ್ವಭಾವದವಳಿದ್ದದರಿಂದ ಸತ್ತಾಹೀನ ಸ್ಥಿತಿಯಲ್ಲಿ ರಾಜಕಾರಣದ ಎಲ್ಲ ವಿಚಾರವನ್ನು ಬಿಟ್ಟುಕೊಟ್ಟು ಲಾಹೋರದ ಸುಖನಿವಾಸ ದಲ್ಲಿ ತನ್ನ ಉಳಿದ ಆಯುಷ್ಯವನ್ನು ಕಳೆದಳು.

---

## ಶಿಕಂದರ ಬಾದಶಹ

ಕ್ರಿಸ್ತಶಕದ ಪ್ರಾರಂಭಕ್ಕೆ ಮುಂಚಿತವಾಗಿ ನಾಲ್ಕೈದು ನೂರು ವರ್ಷಗಳಿಂದ ಯುರೋಪದಲ್ಲಿ ಅತಿ ಘನತೆಗೇರಿದ ಜನಾಂಗವೆಂದರೆ ಗ್ರೀಕರದು. ಆ ಗ್ರೀಸದೇಶವೆಲ್ಲ ಕೂಡಿದರೆ ಒಂದು ಅಂಗೈಯಷ್ಟು ಪ್ರಾಂತವಾಗಿದ್ದರೂ ಆ ಕಾಲದಲ್ಲಿ ಅವರ ಮಹಿಮೆಯನ್ನು ಹಿಡಿದವರಿದ್ದಿಲ್ಲ. ಜಗತ್ತಿಗೆ ನಿಸಾರಿದ ವೀರರೆಂದರೆ ಆ ಗ್ರೀಕರೇ; ಲೋಕೋತ್ತರರಾದ ತತ್ವಜ್ಞಾನಿಗಳೆಂದರೂ ಅವರೇ. ಗಣಿತ, ಜ್ಯೋತಿಷ, ಪದಾರ್ಥವಿಜ್ಞಾನ ಮುಂತಾದ ಉಪಯುಕ್ತ ಶಾಸ್ತ್ರಗಳ ಸಂಸ್ಥಾಪಕರಾರೆಂದು ಕೇಳಿದರೆ ಅವರನ್ನೇ ತೋರಿಸಬೇಕಾಗಿತ್ತು. ನಾವೆಗಳನ್ನು ಕಟ್ಟಿ ಭೀತಿಯಿಲ್ಲದೆ ದ್ವೀಪ ದ್ವಿಪಾಂತರಗಳಿಗೆ ಕಡಲುಪಯಣವನ್ನು ಮಾಡಿದ ಸಾಹಸಿಗಳಲ್ಲಿ ಗ್ರೀಸದವರೇ ಅಗ್ರಗಣ್ಯರು. ವಕ್ತೃತ್ವಶಕ್ತಿಯುಳ್ಳ ರಾಜನೀತಿಜ್ಞರೆಂದರೆ ಗ್ರೀಕರಲ್ಲದೆ ಮತ್ತೊಬ್ಬರಿಲ್ಲ. ಅಸಾಧಾರಣರಾದ ಕವಿಗಳವರು; ನಿಷ್ಣಾತರಾದ ಶಿಲ್ಪಿಗರು. ಇತಿಹಾಸಲೇಖನವು ಅವರಿಂದಲೇ ಮೊದಲು ಹುಟ್ಟಿತು. ಆದರೂ, ಆ ಗ್ರೀಸ ದೇಶದಲ್ಲಿ ಸ್ವತಂತ್ರ ಸ್ವತಂತ್ರವಾದ ಅನೇಕ ಸಂಸ್ಥಾನಗಳು. ಸ್ಪಾರ್ಟಾ, ಅಥೆನ್ಸ, ಥೀಬ್ಸ, ಮಾಸಿಡೋನಿಯಾ, ಇಲ್ಲೀರಿಯಾ ಮುಂತಾದ ಜನಾಂಗದವರೆಲ್ಲ ಗ್ರೀಕರೇ ಆಗಿದ್ದರೂ ಅವರಲ್ಲಿ ಒಬ್ಬರ ನೆರಳು ಒಬ್ಬರಿಗೆ ಸರಿಬರುತ್ತಿದ್ದಿಲ್ಲ. ಇಂದು ಸ್ಪಾರ್ಟಾದ ವೀರರು ಪ್ರಬಲರಾಗಿ ಉಳಿದ ಗ್ರೀಕರನ್ನು ತಮ್ಮ ಅಂಕೆಯಲ್ಲಿಟ್ಟುಕೊಂಡಿದ್ದರೆ, ನಾಳೆ ಅಥೆನ್ಸದವರು ತಮ್ಮ ಯುಕ್ತಿವಾದ, ರಾಜನೀತಿ, ಕೌಟಿಲ್ಯ, ವಕ್ತೃತ್ವ, ಪರಾಕ್ರಮಾದಿಗಳ ಬಲದಿಂದ ಉಳಿದವರ ತಲೆಯಮೇಲೆ ಕೈ ಆಡಿಸಿದರು. ಒಮ್ಮೆ ಥೀಬ್ಸದವರು ಪ್ರಬಲರಾದರೆ, ಮತ್ತೊಮ್ಮೆ ಮಾಸಿಡೋನಿಯಾದ ಹಿಂದುಳಿದ ಜನಾಂಗವು ಜಿಗಿದು ಮುಂದಕ್ಕೆ ಬಂದು ತನ್ನ ವಿಲಕ್ಷಣವಾದ ತೇಜಸ್ಸಿನಿಂದ ಲೋಕವನ್ನು ಬೆರಗುಮಾಡಿಕೊಟ್ಟಿತು.

ಈಗಿನ ಸರ್ವಿಯಾ ಹಾಗೂ ಬಲ್ಗೇರಿಯಾದ ಪಶ್ಚಿಮದ ಅರ್ಧಭಾಗ ಕೂಡಿ ಆಗುವ ಪ್ರಾಂತಕ್ಕೆ ಪೂರ್ವಕಾಲದಲ್ಲಿ ಮಾಸಿಡೋನಿಯಾ ಎಂಬ ಹೆಸರು. ಸ್ಪಾರ್ಟಾ ಅಥೆನ್ಸ ಮುಂತಾದ ಸಂಸ್ಥಾನಗಳು ಅತ್ಯುಚ್ಛ್ರಿತವಾಗಿ

ಮೆರೆಯುವ ಕಾಲಕ್ಕೆ ಮಾಸಿಡೋನಿಯಾ ಪ್ರಾಂತವು ಬಹು ಹೀನವಾದ ಸ್ಥಿತಿಯಲ್ಲಿತ್ತು. ಅಲ್ಲಿಯ ಜನರಲ್ಲಿ ಶೌರ್ಯವಿದ್ದಿಲ್ಲ. ವಿದ್ಯೆಯಿದ್ದಿಲ್ಲ, ಕಲಾ ಕೌಶಲ್ಯಗಳಿದ್ದಿಲ್ಲ. ಇಂಥ ದೇಶವನ್ನೇ ಬೆಳಸಿ ಬಲಿಸಿ ಮುಂದಕ್ಕೆ ತಂದವ ರೆಂದರೆ ನಮ್ಮ ಚರಿತ್ರನಾಯಕನಾದ ಶಿಕಂದರಬಾದಶಹನೂ ಅವನ ತಂದೆ ಯಾದ ಫಿಲ್ಲಿಪರಾಜನೂ. ತಂದೆಮಕ್ಕಳೀರ್ವರೂ ಅಸಾಧಾರಣರಾದ ಪುರುಷ ಸಿಂಹರು. ಅವರಲ್ಲಿ ಹೆಚ್ಚಿನವನಾವ ಕಡಿಮೆಯವನಾವನೆಂಬದನ್ನು ಹೇಳಲಿ ಕ್ಕಾಗದು. ಫಿಲ್ಲಿಪರಾಜನ ತಂದೆಯಾದ ಅಮಂತರಾಜನ ಕಾಲಕ್ಕೆ ಥೀಬ್ಸ ಜನಾಂಗದವರು ಬಹು ಪ್ರಬಲರಾಗಿ ಮೆರೆಯುತ್ತಿದ್ದರು. ಅಮಂತರಾಜನ ತರುವಾಯದಲ್ಲಿ ಫಿಲ್ಲಿಪನ ಅಣ್ಣನಾದ ಪರ್ದಿಕನು ರಾಜನಾಗಿರುವಾಗ ಮಾಸಿ ಡೋನಿಯಾದವರಿಗೂ ಥೀಬ್ಸದವರಿಗೂ ಯುದ್ಧವಾಗಿ ಫಿಲ್ಲಿಪನು ಸೋತು ಥೀಬ್ಸದ ಸೇನಾಪತಿಯಾದ ಪಿಲಾಪೀಡನ ಬಂದಿಯಾಗಿ ಹೋದನು (ಕ್ರಿ. ಪೂರ್ವದಲ್ಲಿ ೩೬೦). ಫಿಲ್ಲಿಪನ ಪೂರ್ವಜನ್ಮದ ಸುಕೃತವೇ ಬಂದಿವಾಸದಿಂದ ಅವನಿಗೆ ವಾಂಛಿತಾರ್ಥವನ್ನೀಯುವದಾಯಿತು.

ಆ ಕಾಲಕ್ಕೆ ಥೀಬ್ಸ ಸಂಸ್ಥಾನವೇ ಶೌರ್ಯ ಧೈರ್ಯ ವಿದ್ಯೆಬುದ್ಧಿ ಕಲಾಕೌಶಲ್ಯ ಮುಂತಾದ ಉಚ್ಛ್ರಿತವಾದ ಗುಣಗಳಿಗೆ ತವರ್ಮನೆಯಾಗಿತ್ತು. ಅಥೆನ್ಸದ ಪಂಡಿತರೂ ಸ್ಪಾರ್ಟಾದ ಕಡುಗಲಿಗಳೂ ಈಜಿಪ್ತ ಆಯೋನಿಯಾ ಗಳಲ್ಲಿಯ ಸಾಹಸಿಗಳಾದ ವರ್ತಕರೂ ಅಲ್ಲಿ ತಮ್ಮ ಪ್ರಸ್ಥಗಳನ್ನು ಬೆಳಸಿ ಕೊಂಡಿದ್ದರು. ಅಂಥ ಸುಸಮಯದಲ್ಲಿ ಫಿಲ್ಲಿಪನು ಅಲ್ಲಿಗೆ ರಾಜಕೀಯ ಬಂದಿಯಾಗಿ ಬಂದನು. ಇಪ್ಪತ್ತು-ಇಪ್ಪತ್ತೆರಡು ವರ್ಷದ ನವತರುಣ ನಾದ ರಾಜಕುಮಾರನವನು. ಬುದ್ಧಿಶಾಲಿಯೂ ಉತ್ಸಾಹಯುತನೂ ಮಹತ್ವಾಕಾಂಕ್ಷಿಯೂ ಆಗಿದ್ದ ಫಿಲ್ಲಿಪನು ಥೀಬ್ಸದಲ್ಲಿ ಸಿಕ್ಕಬಹುದಾದ ವಿದ್ಯೆ ಕಲೆಗಳನ್ನೆಲ್ಲ ಎರಡೂ ಕೈಗಳಿಂದ ಬಳಿಬಳಿದು ಕಟ್ಟಿಕೊಳ್ಳಲಾರಂಭಿಸಿದನು. ಸ್ವಯಂ ವ್ಯಕ್ತಿವೀರನಾದ ಆ ರಾಜಕುಮಾರನು ಸಾಮಾನ್ಯನಾದ ಸೈನಿಕ ನಂತೆ ಹಗಲಿರುಳು ದುಡಿದು ಯುದ್ಧಕಲೆಯ ಶಿಕ್ಷಣವನ್ನು ಸಂಪೂರ್ಣವಾಗಿ ಗ್ರಹಿಸಿಕೊಂಡನು. ಥೀಬ್ಸದ ಭೀಷ್ಮನಾದ ಇಪಾಮಿನಂದನೆಂಬವನು ಸೇನೆ ಯಲ್ಲಿಯೂ ರಾಜ್ಯದಾಡಳಿತದಲ್ಲಿಯೂ ಮಾಡಿದ ಸುವ್ಯವಸ್ಥೆಗಳನ್ನು ಫಿಲ್ಲಿಪನು ಲಕ್ಷ್ಯಪೂರ್ವಕವಾಗಿ ನೋಡಿಕೊಂಡನು. ಪಂಡಿತರಾದ ವಕ್ತೃಜನರ

ಶಿಷ್ಯತ್ವವನ್ನು ವಹಿಸಿ ಅವನು ಶ್ರೋತೃಗಳ ಮನಸ್ಸುಗಳನ್ನು ತನ್ನೆಡೆ ಆಕರ್ಷಿಸಿಕೊಳ್ಳುವಂಥ ವಾಕ್ಚಾಪಲ್ಯವನ್ನು ಗಳಿಸಿಕೊಂಡನು. ವಿನಯಾನ್ವಿತನೂ, ಸುಂದರನೂ, ಪ್ರಸನ್ನವದನನೂ ಆಗಿದ್ದ ಫಿಲ್ಲಿಪನ ಬಯಕೆಯನ್ನು ಪೂರೈಸದಿದ್ದ ಜನರೇ ಇರಲಿಲ್ಲ. ಸಾಧುವಾಗಿ ತೋರುವ ತನ್ನ ಬಹಿರಂಗದ ಆಡಂಬರಕ್ಕೆ ಬೆನ್ನಾಸರವೆಂದು ನೆನೆದು ಅವನು ಪ್ರಸಂಗಬಂದಾಗ ಕುಟಿಲನೀತಿಯ ಆಶ್ರಯವನ್ನಾದರೂ ಮಾಡಿಕೊಳ್ಳುವದರಲ್ಲಿ ಹಿಂದು ಮುಂದು ನೋಡಿದವನಲ್ಲ. पराति संधानमधीयते यैर्विग्रहेति ते संतु किलाप्रशाच., ಎಂದು ನಿಂದಾವ್ಯಂಜಕವಾದ ನುಡಿಗಳನ್ನಾಡುವವರಾದ ನಾವು ಆರ್ಯಜನರು ಕೆಟ್ಟು ಹೋದೆವು. ಫಿಲ್ಲಿಪರಾಜನು ಮುಂದಕ್ಕಾದವನು ಆಗಿಹೋಗಿ ಅಜರಾಮರವಾದ ಕೀರ್ತಿಯನ್ನು ಪಡೆದನು.

ಹೀಗೆ ವಿದ್ಯಾಸಂಪನ್ನನಾದ ಫಿಲ್ಲಿಪ ರಾಜಕುಮಾರನು ಥೀಬ್ಸದಿಂದ ಬಿಡುಗಡೆಯನ್ನು ಹೊಂದಿ ತನ್ನ ದೇಶವಾದ ಮಾಸಿಡೋನಿಯಾಕ್ಕೆ ಬರುವಷ್ಟರಲ್ಲಿ ತೆರವಾಗಿದ್ದ ಸಿಂಹಾಸನವು ಅವನ ಮಾರ್ಗಪ್ರತೀಕ್ಷೆಮಾಡುತ್ತಲಿತ್ತು. ಅವನ ಅಣ್ಣನಾದ ಪರ್ದಿಕರಾಜನು ಪರರಾಯರೊಡನೆ ಯುದ್ಧಮಾಡುವಾಗ ಮಡಿದುಹೋಗಿದ್ದನು. ಪ್ರಜರೆಲ್ಲರೂ ಫಿಲ್ಲಿಪನನ್ನು ಆದರದಿಂದೆತ್ತಿ ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಅನಲಸನಾದ ಆ ರಾಜನು ತಡಮಾಡದೆ ತನ್ನ ರಾಜ್ಯದಲ್ಲಿ ಸುವ್ಯವಸ್ಥೆಯನ್ನುಂಟುಮಾಡಿ ಪ್ರಜರಲ್ಲಿ ವಿದ್ಯಾಪ್ರಸಾರವಾಗುವಂತೆ ಮಾಡಿದನು. ದೊಡ್ಡದೊಂದು ಸೇನೆಯನ್ನು ಕೂಡಿಸಿ ಅದಕ್ಕೆ ಯುದ್ಧಕಲೆಯನ್ನು ಚೆನ್ನಾಗಿ ಕಲಿಸಿದನು. ಚುಚ್ಚುಗೋಲಿನ (ಬರ್ಚಿಯ) ಭಟರದೊಂದು ಚಮತ್ಕಾರವಾದ ವ್ಯೂಹವನ್ನು (ಫ್ಯಾಲ್ಯಾಂಕ್ಸ) ಇವನೇ ನಿರ್ಮಿಸಿದವನು. ಫಿಲ್ಲಿಪನ ಕೈಕೆಳಗೆ ವಿನೂತನವಾದ ಯುದ್ಧಕಲೆಯನ್ನು ಕಲಿತುಕೊಂಡ ಅವನ ಸೇನೆಯು ಸಮಗ್ರವಾದ ಗ್ರೀಸದೇಶಕ್ಕೆ ಮಾರಿದ್ದಾಯಿತು. ಮಾಸಿಡೋನಿಯಾದ ಪೂರ್ವಕ್ಕಿದ್ದ ಥ್ರೇಸ (ಬಲ್ಗೇರಿಯಾದ ಪೂರ್ವಭಾಗ+ ಈಗಿನ ಯುರೋಪದ ತುರ್ಕಸ್ಥಾನ) ದೇಶವನ್ನೂ ಪಶ್ಚಿಮಕ್ಕಿದ್ದ ಇಲ್ಲೀರಿಯಾ ದೇಶವನ್ನೂ ದಕ್ಷಿಣಕ್ಕೆ ಥೀಬ್ಸ, ಅಥೆನ್ಸ ಮುಂತಾದ ಸಂಸ್ಥಾನಗಳನ್ನೂ ಫಿಲ್ಲಿಪನು ಹೊಡೆದು ಕೆಡವಿ ಮಣಿಸಿದನು. ಕ್ಷುದ್ರವಾದದ್ದೆನ್ನಿಸಿಕೊಳ್ಳುತ್ತಿದ್ದ ಮಾಸಿಡೋನಿಯಾ ಸಂಸ್ಥಾನವು ಫಿಲ್ಲಿಪನ ಆಳಿಕೆಯಲ್ಲಿ

ಗ್ರೀಸದ ಅಗ್ರೇಸರವಾದ ಸಂಸ್ಥಾನವಾಗಿ ಮೆರೆಯಲಾರಂಭಿಸಿತು.

ಸಕಲ ಗ್ರಹಗಳು ಉಚ್ಚಸ್ಥಾನದಲ್ಲಿರುವಾಗ ಫಿಲ್ಲಿಪ ರಾಜನಿಗೆ ಪುತ್ರೋತ್ಸವವಾಯಿತು. ಆ ಸುಪುತ್ರನೇ ಜಗದ್ವಿಖ್ಯಾತನಾದ ಅಲೆಕ್‌ಝಾಂಡರನು (ಶಿಕಂದರ ಬಾದಶಹನು). ಶಿಕಂದರನ ತಾಯಿಯಾದ ಆಲಿಂಪಿಯಾ ರಾಣಿಯು ಎಪೀರ ಎಂಬ ಪುರಾತನವಾದ ರಾಜವಂಶದಲ್ಲಿ ಹುಟ್ಟಿದವಳು; ತಂದೆಯಂತೂ ಚಂಡವಿಕ್ರಮನಾದ ಫಿಲ್ಲಿಪರಾಜನು. ಅಂಥ ತಾಯಿ-ತಂದೆಗಳ ಹೊಟ್ಟೆಯಲ್ಲಿ ಹುಟ್ಟಿದವನಾದ ಶಿಕಂದರನು ಲೋಕೋತ್ತರನಾದ ವೀರಸಾಹಸನೆಂಬದು ಸಹಜವೇ. ಶಿಕಂದರ ರಾಜಕುಮಾರನ ಶಿಕ್ಷಣ-ಪೋಷಣಗಳ ಕ್ರಮವು ಒಳ್ಳೇ ಆಸ್ಥೆಯಿಂದಲೂ ವ್ಯವಸ್ಥೆಯಿಂದಲೂ ನಡೆಯಿತೆಂದು ಹೇಳಬೇಕಾಗಿಲ್ಲ. ಮಗನ ಶಿಕ್ಷಣದ ವಿಷಯದಲ್ಲಿ ಫಿಲ್ಲಿಪರಾಜನಿಗೆ ಹೆಚ್ಚಾದ ಆಸ್ಥೆಯಿರುವದು ಆಶ್ಚರ್ಯವಲ್ಲ. ಆದರೆ ಕ್ಷಾತ್ರಧರ್ಮಾಭಿಮಾನಿನಿಯಾದ ಅವನ ತಾಯಿಯು, ತನ್ನ ಮಗನು ಲೋಕೈಕವೀರನಾಗಬೇಕೆಂದೆಣಿಸಿ ಬಹು ಸಾಹಸಪಡುತ್ತಿದ್ದಳು. ಆದಕ್ಕಾಗಿ ಆಲಿಂಪಿಯಾ ರಾಣಿಯು ಶಿಕಂದರನ ಶಿಕ್ಷಣದ ಮೇಲ್ವಿಚಾರಣೆಯ ಕೆಲಸವನ್ನು ತನ್ನ ಆಪ್ತನಾದ ಲಿಯೋನೀಡನೆಂಬ ವೀರನಿಗೆ ಒಪ್ಪಿಸಿದ್ದಳು ಹದಿಮೂರು ವರ್ಷದವನಾಗುವಷ್ಟರಲ್ಲಿ ಶಿಕಂದರನು ದೃಢಾಂಗನೂ, ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿ ಅತಿ ನಿಷ್ಣಾತನೂ, ಧೈರ್ಯಶಾಲಿಯೂ ಆಗಿ ತೋರಿದನು. ಮುಂದೆ ಅವನ ಮಾನಸಿಕ ಶಿಕ್ಷಣದ ಕೆಲಸವು ಜಗದ್ವಿಖ್ಯಾತ ತತ್ವಜ್ಞಾನಿಯಾದ ಅರಿಸ್ಟಾಟಲನ ಕಡೆಗೆ ಬಂದಿತು. ಬಂಗಾರಕ್ಕೆ ಕುಂದಣವನ್ನಿಟ್ಟ ಹಾಗಾಯಿತು. ಹದಿನಾರು ವರ್ಷದ ನವತರುಣನಾದ ಶಿಕಂದರ ಯುವರಾಜನು ಸೇನಾಧುರಂಧರನಾದ ವೀರನೂ ಉದಾತ್ತವಿಚಾರದ ರಾಜಕುಮಾರನೂ ಆಗಿ, ಎಲ್ಲರ ಆದರಕ್ಕೂ ಪ್ರೀತಿಗೂ ಪಾತ್ರನಾದನು. ಫಿಲ್ಲಿಪರಾಜನ ಉಚ್ಛ್ರಾಯವನ್ನು ಸಹಿಸದವರಾದ ಅಥೆನ್ಸ ಹಾಗು ಥೀಬ್ಸ ಸಂಸ್ಥಾನಗಳವರು ಪ್ರಬಲವಾದ ಸೇನೆಯನ್ನು ಕಟ್ಟಿಕೊಂಡು ಮಾಸಿಡೋನಿಯಾದ ಮೇಲೆ ಸಾಗಿ ಬಂದಾಗ, ಹದಿನಾರು ವರುಷದ ಎಳೆಪ್ರಾಯದವನಾದ ಶಿಕಂದರ ರಾಜಕುಮಾರನು ತನ್ನ ತಂದೆಯ ಕೈಕೆಳಗೆ ಸೇನಾಪತಿಯಾಗಿ ಯುದ್ಧಮಾಡುತ್ತಿದ್ದನು. "ಚರೋನಿಯಾ" ಎಂಬ ಸ್ಥಳದಲ್ಲಿ ಯುದ್ಧವು ನಡೆದಿರಲು,

ಶಿಕಂದರನ ಶೌರ್ಯಸಾಹಸಗಳಿಂದಲೇ ಶತ್ರುಗಳು ಸಂಪೂರ್ಣವಾಗಿ ಸೋತು ಹೋದರು. ಹದಿನಾರು ವರ್ಷದ ಬಾಲಕನು ಕಂಡಿರಾ! ನಮ್ಮಲ್ಲಿ ಅಂಥವನನ್ನು ಮುಲಕೀಪರೀಕ್ಷೆಗೆ ಕೂಡ ಕರಕೊಳ್ಳಲಿಕ್ಕಿಲ್ಲ! ಹದಿನಾರು ವರ್ಷದ ಬಾಲಕನೇ ಥೀಬ್ಸ ಅಥೆನ್ಸಗಳಂಥ ಎರಡು ಬಲಾಢ್ಯವಾದ ಸಂಸ್ಥಾನಗಳ ಸಂಯುಕ್ತವಾದ ಸೇನೆಯನ್ನು ಸ್ವಪರಾಕ್ರಮದಿಂದ ಸೋಲಿಸಿ ಮುರಿದು ಹಾಕಿದನು.

ಗ್ರೀಕ ಜನಾಂಗದವರೆಲ್ಲರ ಬಗ್ಗುಬಡಿದ ಬಳಿಕ ಫಿಲ್ಲಿಪ ರಾಜನು ಏಸಿಯಾಖಂಡದ (ಭೂಮಧ್ಯಸಮುದ್ರದಿಂದ ಸಿಂಧು ನದದ ವರೆಗಿರುವ) ಸಾರ್ವಭೌಮನಾದ ದರಾಯುಸ ಬಾದಶಹನ ಮೇಲೆ ದಂಡೆತ್ತಿಹೋಗಬೇಕೆಂದು ವಿಚಾರಮಾಡಿ ಒಳ್ಳೇ ಸಿದ್ಧತೆಯನ್ನು ಮಾಡತೊಡಗಿದನು. ಸೇನೆಯನ್ನು ಅತಿಶಯವಾಗಿ ಬೆಳಿಸಿ ತಾನೇ ನಿಂತು ಅದಕ್ಕೆ ಯುದ್ಧಶಿಕ್ಷಣವನ್ನು ಕೊಡುತ್ತಿದ್ದನು. ಸಾಮೋಪಚಾರದಿಂದ ಗ್ರೀಕ ಸಂಸ್ಥಾನಿಕರೆಲ್ಲರ ಸಹಾನುಭೂತಿಯನ್ನು ಗಳಿಸಿಕೊಂಡನು. ವಿಖ್ಯಾತರಾದ ಸೇನಾನಾಯಕರೊಡನೆ ಸ್ನೇಹಸಂಬಂಧಗಳನ್ನು ಬೆಳಿಸಿದನು. ಇದೇ ಉದ್ದೇಶದಿಂದಲೇ ಫಿಲ್ಲಿಪನು ಅಟ್ಟಾಲನೆಂಬ ಸೇನಾಪತಿಯ ಮಗಳಾದ ಕ್ಲಿಯೋಪಾತ್ರಾ ಎಂಬ ಸುಂದರಿಯನ್ನು ಮದುವೆಮಾಡಿಕೊಂಡನು. ಆದರೆ ಈ ಮದುವೆ ಮಾತ್ರ ಫಿಲ್ಲಿಪ ರಾಜನ ಇತಿಶ್ರೀಯು ಕಾರಣವಾಯಿತು. ವಿವಾಹ ಸಮಾರಂಭವು ನಡೆದಾಗ ಫಿಲ್ಲಿಪನು ತನ್ನ ಆಪ್ತರಿಷ್ಟರದೊಂದು ದೊಡ್ಡ ಬಳಗವನ್ನು ಕೂಡಿಸಿಕೊಂಡು ಮಧುಪಾನೋತ್ಸವವನ್ನು ನಡೆಸಿದ್ದನು ಆ ಸಮಯದಲ್ಲಿ ಕ್ಲಿಯೋಪಾತ್ರೆಯ ತಂದೆಯಾದ ಅಟ್ಟಾಲನು ಕಿಂಚಿತ್ ಮದಿರೋನ್ಮತ್ತನಾಗಿ ತನ್ನ ಕೈಯಲ್ಲಿಯ ಚಷಕವನ್ನು (ಪಾನಪಾತ್ರವನ್ನು) ಮೇಲಕ್ಕೆತ್ತಿ ಹಿಡಿದು ' ಈ ನನ್ನ ಮಗಳ ಹೊಟ್ಟೆಯಲ್ಲಿ ಫಿಲ್ಲಿಪರಾಜನ ವಂಶಾಭಿವೃದ್ಧಿಕರನಾದ ಸುಪುತ್ರನು ಹುಟ್ಟಲಿ!'' ಎಂದು ಆಶೀರ್ವದಿಸಿ, ಚಷಕದಲ್ಲಿಯ ಮಧುರಸವನ್ನು ಸೇವಿಸಿದನು. ಆ ವಚನವನ್ನು ಕೇಳಿ ಅಲ್ಲಿಯೇ ಕುಳಿತಿದ್ದ ಶಿಕಂದರನಿಗೆ ಅಸಾಧ್ಯವಾದ ಕೋಪ ಬಂದಿತು. ಅವನು ತನ್ನ ಕೈಯಲ್ಲಿರುವ ರತ್ನಖಚಿತವಾದ ಪಾನಪಾತ್ರವನ್ನು ಅಟ್ಟಾಲನ ಮೋತಿಗೆ ಒಳಿತಾಗಿ ಹೇರಿ "ದುರಾತ್ಮನೆ, ಫಿಲ್ಲಿಪರಾಜನ ಔರಸಪುತ್ರನಾದ ನಾನು ಇಲ್ಲಿ ಕುಳಿತಿರಲು ನೀನೇನು

ಮಾತಾಡಿದೆ? ನಾನು ದಾಸೀಪುತ್ರನೆಂದು ತಿಳಿದಿರುವೆಯಾ?" ಎಂದು ಗದ್ದರಿಸಿ ಕೇಳಿದನು. ತನ್ನ ಹೊಸಮಾವನ ಅಪ್ರತಿಷ್ಠೆಯು ಹೀಗೆ ತನ್ನ ಸಮಕ್ಷದಲ್ಲಾಡದ್ದನ್ನು ಕಂಡು ಫಿಲ್ಲಿಪರಾಜನಿಗೆ ಅತಿಶಯವಾದ ಸಂತಾಪ ವಾಯಿತು. ಹಿಂದುಮುಂದು ನೋಡದೆ ಅವನು ತನ್ನ ಸಿಂಹಾಸನದಿಂದೆದ್ದು ಖಡ್ಗವನ್ನೆತ್ತಿ ಯುವರಾಜನನ್ನು ಅಲ್ಲಿಯೇ ಸಂಹರಿಸಬೇಕೆಂದು ಸಾಗಿಬರು ವಷ್ಟರಲ್ಲಿ ಕಾಲು ಜಾರಿ ಧಡಮ್ಮನೆ ಬಿದ್ದುಬಿಟ್ಟನು. ಆಗ ಶಿಕಂದರನು ತಂದೆಯು ಅಪಹಾಸಮಾಡಿ ನಕ್ಕು "ನೋಡಿದಿರಾ, ಯುರೋಪ ದಿಂದ ಏಸಿಯಾದ ಮೇಲೆ ಸಾಗಿಹೋಗತಕ್ಕವನಾದ ಈ ಮನುಷ್ಯನು ತನ್ನ ಆಸನದಿಂದೆದ್ದು ಮೂರು ಹೆಜ್ಜೆ ಬರುವಷ್ಟರಲ್ಲಿ ಉರುಳಿಹೋದನು!" ಎಂದು ನುಡಿದವನೇ ನಿಂತಕಾಲಮೇಲೆ ತಂದೆಯ ರಾಜ್ಯವನ್ನು ಬಿಟ್ಟು ಹೊರಟಿದ್ದು ಹೋಗಿ ಇಲ್ಲೀರಿಯಾ ಸಂಸ್ಥಾನದಲ್ಲಿ ನಿಂತುಕೊಂಡನು. ಅಪಮಾನಸಂತಪ್ತಳಾದ ಆಲಿಂಪಿಯಾ ರಾಣಿಯು ಕೂಡ ಗಂಡನ ರಾಜ್ಯ ವನ್ನು ಬಿಟ್ಟು ತನ್ನ ತಮ್ಮನ ರಾಜ್ಯಕ್ಕೆ ತೆರಳಿದಳು. ಈ ಸಂಗತಿಯಾದ ಸ್ವಲ್ಪ ದಿವಸಗಳಲ್ಲಿಯೇ ಪಾಸಾನಿಯನೆಂಬ ನೀಚನೊಬ್ಬನು ರಾಜಮಾರ್ಗ ದಲ್ಲಿ ಬರುವ ಫಿಲ್ಲಿಪರಾಜನನ್ನು ಕಡಿದು ಕೊಂದುಹಾಕಿದನು. ಆ ಕೊಲೆ ಯನ್ನು ಆಲಿಂಪಿಯಾ ರಾಣಿಯೇ ಮಾಡಿಸಿದಳೆಂದು ತತ್ಕಾಲೀನರಾದ ಹಲವು ಜನ ಇತಿಹಾಸಕಾರರು ಅವಳ ಮೇಲೆ ಆರೋಪ ಹೊರಿಸಿದ್ದಾರೆ. ಆದರೆ ಆ ಅನರ್ಥಕರವಾದ ಕೊಲೆಯಲ್ಲಿ ಶಿಕಂದರ ರಾಜಕುಮಾರನ ಅಂಗವು ಎಷ್ಟು ಮಾತ್ರವೂ ಇದ್ದಿಲ್ಲವೆಂಬದು ಎಲ್ಲ ಇತಿಹಾಸಕಾರರ ಏಕವಾಕ್ಯವಾದ ಅಭಿ ಪ್ರಾಯವು.

"ಗೂಳಿ ಬಿದ್ದ ಬಳಿಕ ಆಳಿಗೊಂದು ಕಲ್ಲು" ಎಂಬಂತೆ ಫಿಲ್ಲಿಪನ ಪಾದಾಕ್ರಾಂತರಾದ ಗ್ರೀಕ ಸಂಸ್ಥಾನಿಕರೆಲ್ಲರೂ, ದರ್ಪಹರನಾದ ಆ ರಾಜನು ಅಪಮೃತ್ಯುವನ್ನು ಹೊಂದಿದನೆಂಬ ವಾರ್ತೆಯನ್ನು ಕೇಳಿ ಸಂತೋಷದ ಉಬ್ಬಿನಿಂದ ಕೊಬ್ಬಿ, ಇನ್ನು ಮಾಸಿಡೋನಿಯಾದ ರಾಜ್ಯವನ್ನು ಮುರಿದು ಹರಗಿಬಿಡಬೇಕೆಂಬ ಹವಣಿಕೆಗೆ ಬಿದ್ದರು. ಡಿಮಾಸ್ಥಿನಿಯೇ ಮುಂತಾದ ಅಥೆನ್ಸದ ವಾಚಾಲರು ಜಗಲಿ ಜಗಲಿಗಳನ್ನೇರಿಕೊಂಡು ಸ್ವದೇಶಾಭಿಮಾನೋ ತ್ತೇಜಕವಾದ ವ್ಯಾಖ್ಯಾನಗಳನ್ನು ಕೊಟ್ಟು ಫಿಲ್ಲಿಪನ ಮರಣದ ಸುಸಂಧಿ

ಯನ್ನು ಸಾಧಿಸಿ ಅವನ ರಾಜ್ಯದ ಮೇಲೆ ಅಭಿಯೋಗವನ್ನು ಮಾಡತಕ್ಕದ್ದೆಂದು ಬೋಧಿಸಿ ಜನರಲ್ಲಿ ಹುರುಪು ತುಂಬಲಾರಂಭಿಸಿದರು. ಸಂಸ್ಥಾನ ಸಂಸ್ಥಾನಗಳ ನಡುವೆ ಅಖಂಡವಾಗಿ ಪತ್ರವ್ಯವಹಾರಗಳು ನಡೆದವು. ಪ್ರಬಲನಾದ ಫಿಲಿಪನು ಸತ್ತುಹೋದನು; ಅವನ ಮಗನಾದ ಶಿಕಂದರನೆಂದರೆ ಅಪ್ರೌಢನಾದ ಹೊಸ ತರುಣನು. ಫಿಲಿಪನು ತಮ್ಮ ಕೊರಳಿನಲ್ಲಿ ಕಟ್ಟಿದ ಗುದ್ದಿಯನ್ನು ಬಿಚ್ಚಿ ಒಗೆಯಲು ಇದೇ ಸಮಯವೆಂದು ಥೀಬ್ಸದವರು ಆಸ್ಥೆತೊಟ್ಟರು. घी देखे और बहगा नहि देखे ಎಂಬಂತೆ ಫಿಲಿಪನು ಸತ್ತರೆ ಶಿಕಂದರನು ತಂದೆಗೆ ಇಮ್ಮಡಿಯಾದ ಪ್ರತಾಪಶಾಲಿಯೆಂಬದನ್ನು ಆ ಜನರು ತಿಳಕೊಳ್ಳಲಿಲ್ಲ.

ಈ ಸಂಸ್ಥಾನಿಕರೆಂದರೆ ಕಃಪದಾರ್ಥವೆಂದು ಶಿಕಂದರನು ಚರೋನಿಯಾದ ಕಾಳಗದಲ್ಲಿಯೇ ಕಂಡುಕೊಂಡುಬಿಟ್ಟಿದ್ದನು. ಇವರ ಲಕ್ಷ್ಯವು ಅವನಿಗಷ್ಟು ಮಾತ್ರವೂ ಇದ್ದಿಲ್ಲ. ಪರ್ಶಿಯಾದ ಸಾರ್ವಭೌಮನಾದ ದರಾಯುಸನ ಕೈ ಒಡ್ಡುಮುರಿದು ಅವನ ಹಿಡಿತದಲ್ಲಿರುವ ರಾಜ್ಯಸೂತ್ರವನ್ನು ಅಪಹರಿಸಿಕೊಳ್ಳುವದೇ ಶಿಕಂದರರಾಜನ ಮುಖ್ಯವಾದ ಧ್ಯೇಯವಾಗಿತ್ತಾದ್ದರಿಂದ ಅವನು ಅನ್ಯವಿಷಯಗಳಲ್ಲಿ ಮನಸ್ಸು ಹಾಕದೆ ಮುಂದಿನ ಮಹಾಯುದ್ಧದ ಸಿದ್ಧತೆಯಲ್ಲಿಯೇ ಅವನು ತತ್ಪರನಾಗಿದ್ದನು. ಗ್ರೀಕ ಸಂಸ್ಥಾನಿಕರೆಲ್ಲರೂ ತಮ್ಮತಮ್ಮ ಪತ್ರವ್ಯವಹಾರಗಳನ್ನು ಮುಗಿಸಿಕೊಂಡು ಒಕ್ಕಟ್ಟಾಗಿ ಕೂಡಬೇಕಾದರೆ ಎಷ್ಟೋ ಅವಕಾಶವಿರುವದೆಂಬದನ್ನು ಅರಿತವನಾದ ಶಿಕಂದರನು ಅಲಸ್ಯ ಮಾಡದೆ ಆ ಅವಧಿಯಲ್ಲಿ ಡಾನ್ಯೂಬ ನದೀತೀರವಾಸಿಗಳಾದ ಜನಾಂಗದವರನ್ನು ಮರ್ದಿಸಿ, ಅವರಿಂದ ಮುಂದೆ ತನಗಾವ ಬಗೆಯ ತೊಂದರೆಗಳಾಗದಂತೆ ಜಾಗ್ರತೆಯಿಂದ ಕೆಲಸ ನಡಿಸಿದನು. ಶಿಕಂದರನು ಈ ವ್ಯವಸಾಯದಲ್ಲಿ ತೊಡಗಿರುವನೆಂಬದನ್ನರಿಯದೆ ಅವನು ತಮ್ಮ ಭೀತಿಗಾಗಿ ಎಲ್ಲಿಗೋ ಓಡಿಹೋಗಿರುವನೆಂದು ಥೀಬ್ಸ, ಅಥೆನ್ಸ ಮುಂತಾದ ಗ್ರೀಕ ಜನಾಂಗದವರು ನಂಬಿ ಸಂತೋಷಭರಿತರಾಗಿ ತಮ್ಮ ಉದ್ಯೋಗಗಳಲ್ಲಿ ವಿಲಂಬಮಾಡಲಾರಂಭಿಸಿದರು. ಇತ್ತ ಸಮಯ ಸಾಧಕನೂ ಸ್ವಕಾರ್ಯನಿರತನೂ ಪರಾಕ್ರಮಶಾಲಿಯೂ ಆದ ಶಿಕಂದರನು ಡಾನ್ಯೂಬ ತೀರಸ್ಥರ ಪಾರಿಪತ್ಯವನ್ನು ಮಾಡಿದವನೇ ಮಾಯಾಮಂತ್ರಸಾಧಕನ ತ್ವರದಿಂದ ಸಾಗಿ

ಬಂದು, ಥ್ರೇಸ ಇಲ್ಲೀರಿಯಾಗಳ ಜನಾಂಗಗಳನ್ನು ಜಡಿದು ಮಂಗೂಲಿಗೆ ಕೂಡಿಸಿ ಸೇನಾಸಮೇತನಾಗಿ ನೆಟ್ಟನೆ ಥೀಬ್ಸ ಪ್ರಾಂತದಲ್ಲಿ ಒಳನುಗ್ಗಿ ಬಂದನು. ಧೂಮಕೇತುವಿನಂತೆ ಭೀಕರವಾಗಿ ಎದ್ದು ಕಾಣಿಸಿ ಬರುವ ಶಿಕಂದರನ ಧ್ವಜವನ್ನು ಕಾಣುತ್ತಲೆ ಥೀಬ್ಸದವರ ಕೈಕಾಲುಗಳು ತಣ್ಣಗಾದವು. ಅವರ ದೇಶದಲ್ಲೆಲ್ಲ ಹಾಃಹಾಃಕಾರವದ್ದಿತು. ಆ ಜನರ ದುರವಸ್ಥೆಯನ್ನು ಕಂಡು ಶಿಕಂದರ ಬಾದಶಹನಿಗೆ ಕನಿಕರ ಬಂದಿತು. ಕ್ಷಮೆ ಬೇಡಿಕೊಂಡು ಆ ಜನರು ತಮ್ಮ ಮನೆಯಲ್ಲಿ ಸುಮ್ಮನೆ ಕುಳಿತರೆ ಕುಳ್ಳಿರಲೆಂದು ಅವನು ಅವರ ಮೈಮೇಲೇರಿ ಹೋಗದೆ ಕೆಲಹೊತ್ತು ಸುಮ್ಮನಿದ್ದನು. ಆದರೆ, ಆಥೆನ್ಸದವರು ಅವರನ್ನು ಸುಮ್ಮನಿರಗೊಡಲಿಲ್ಲ. ಕೀರ್ತನ ಪುರಾಣಶ್ರವಣಜನ್ಯವಾದ ವೀರಾವೇಶವನ್ನಾಂತ ಡಿಮಾಸ್ಥನಿಯೇ ಮುಂತಾದ ವಕ್ತೃತ್ವೋತ್ತೇಜಕರಾದ ರಾಮಭಟ್ಟ ಹರಿಭಟ್ಟರು ಸ್ಪೃಥಃಶ್ವಾಸನಗಳನ್ನಿತ್ತು ಆ ಬಡಜನರ ಬಾಲ ಒಡ್ಡಮುರಿದು ಯುದ್ಧಕ್ಕೆ ನಿಲ್ಲಿಸಿದರು. ಶಿಕಂದರನಿಗೆ ದರಾಯುಸನೊಡನೆ ಯುದ್ಧಮಾಡುವ ಹವ್ಯಾಸವು. ಗ್ರೀಕ ಜನರೊಡನೆ ಆಟ ಆಡುತ್ತ ಕಾಲ ಕಳೆಯಲು ಅವನಿಗೆ ಅವಕಾಶವಿದ್ದಿಲ್ಲ. ರುದ್ರಾವತಾರವನ್ನು ತೊಟ್ಟ ಆ ಮಹಾವೀರನು ಥೀಬ್ಸದವರ ಮೇಲೆ ಹರಿಬಿದ್ದು ಒಂದೇ ಹೊಡೆತಕ್ಕೆ ಆ ಜನಾಂಗದ ಸೇನೆಯನ್ನು ಸಂಪೂರ್ಣವಾಗಿ ಮುರಿಬಡಿದು, ದಯಾ–ಕ್ಷಮೆಗಳನ್ನೆಷ್ಟು ಮಾತ್ರವೂ ತೋರಿಸದೆ ಆ ದೇಶದಲ್ಲಿರುವ ಗಂಡುಪ್ರಾಣಿಯನ್ನೊಂದೂ ಉಳಿಸದಂತೆ ಕಡಿದುಹಾಕಿಸಿದನು. ವಾಚಕರೇ, ಇದು ಅನೀತಿಯೆಂದು ಹೇಳಿ ಶಿಕಂದರನನ್ನು ನಿಂದಿಸಬೇಡಿರಿ. ರಾಜಕಾರಣವಿಶೇಷಗಳಲ್ಲಿ ಹೀಗೆ ಮಾಡಲೇಬೇಕಾಗುತ್ತದೆ. ಥೀಬ್ಸದವರು ದುರ್ಬುದ್ಧಿಪ್ರೇರಿತರಾಗಿ ಮಾಸಿಡೋನಿಯಾದ ಮೇಲೆ ಸಾಗಿಬರುವ ಆಲೋಚನೆಯನ್ನು ಮಾಡಿದ್ದೊತ್ತಟ್ಟಿಗಿರಲಿ, ಶಿಕಂದರನು ಏಶಿಯಾದ ಮೇಲೆ ಸಾಗಿ ಹೋದಾಗ ಈ ದುಷ್ಟರು ಅವನ ಪಶ್ಚಾತ್ತದಲ್ಲಿ ಮಾಸಿಡೋನಿಯಾಕ್ಕೆ ದಾಳಿಯನ್ನು ತರದೆ ಬಿಡುತ್ತಿದ್ದಿಲ್ಲವಷ್ಟೆ? ಥೀಬ್ಸದವರಿಗಾದ ಪ್ರಾಯಶ್ಚಿತ್ತವನ್ನು ಕಂಡು ಉಳಿದ ಗ್ರೀಕ ಜನಾಂಗದವರೆಲ್ಲ ಹಲ್ಲು ಮುರಿದ ಹಾವುಗಳಂತೆ ರಜ್ಜುಪ್ರಾಯರಾಗಿ ಬಿದ್ದುಕೊಂಡರು. ಇಷ್ಟೆಲ್ಲ ಕುಚೇಷ್ಟೆಯನ್ನು ಮಾಡಿದ ಆಥೆನ್ಸದವರೇ ಅಭಿಮಾನಶೂನ್ಯರಾಗಿ ಶಿಕಂದರನಿಗೆ ಶರಣಾಗತರಾಗಿ ಬಂದು, 'ಪ್ರಭುವೆ, ನೀನೇ ಇಂದ್ರ, ನೀನೇ ಚಂದ್ರ'

ಎಂದು ಹೊಗಳಿದರು.

ಹೀಗೆ ಗೃಹಕಲಹಗಳ ಜಂಜಡವೆಲ್ಲ ಬಯಲಾದ ಬಳಿಕ, ಪ್ರತಾಪಶಾಲಿ ಯಾದ ರಘುರಾಜನಂತಿರುವ ಶಿಕಂದರ ರಾಜನು ವಿಶ್ವಜಿತ್ತನಂಥದೇ ಒಂದು ದೊಡ್ಡ ಅಧ್ವರವನ್ನು ಮಾಡಿ, ಯೋಗಿ ತತ್ವಜ್ಞಾನಿಗಳನ್ನೂ, ಕವಿಜನ ಪಂಡಿತ ರನ್ನೂ, ಅತಿರಥಿ ಮಹಾರಥಿಗಳನ್ನೂ, ರಾಜಪುತ್ರ ಸರದಾರರನ್ನೂ ಬಹು ಮಾನ ಪಾರಿತೋಷಕಾದಿಗಳಿಂದ ಸಂತೋಷಗೊಳಿಸಿದನು. ಆ ಧನಸಂತರ್ಪಣ ದಲ್ಲಿ ಶಿಕಂದರ ಮಹಾರಾಜನ ಭಾಂಡಾರದಲ್ಲಿದ್ದ ಮಣಿಮೌಕ್ತಿಕ ಧನಕನ ಕಾದಿಗಳ ಅಪರಿಮಿತವಾದ ರಾಶಿಗಳೆಲ್ಲ ನಿಃಶೇಷವಾಗಿ ಸವೆದುಹೋದವು. ಅದನ್ನು ಕಂಡು ಪರ್ದಿಕನೆಂಬ ಕೋಶಾಧಿಪತಿಯು ರಾಜನನ್ನು ಕುರಿತು “ಮಹಾರಾಜ, ಹೀಗೆ ಇದ್ದ ಸಂಪತ್ತೆಲ್ಲ ತೂಳಿದುಹೋದ ಬಳಿಕ ತಮ ಗೇನು ಉಳಿಯುವದು ? ” ಎಂದು ಕೇಳಲಾಗಿ, ಶಿಕಂದರನು ಆತ್ಮತುಷ್ಟಿ ಯಿಂದ ನಕ್ಕು “ಯಾಕೆ ಕೋಶಾಧಿಪರೆ, ಮುಂದಾಗುವ ಗಳಿಕೆಯೆಲ್ಲ ನನ್ನದೇ ಅಲ್ಲವೆ ? ” ಎಂದು ಕೇಳಿದನು.

ಬಳಿಕಾ ಜಗಜ್ಜಿಗೀಷುವಾದ ರಾಜನು ತನ್ನ ರಾಜ್ಯರಕ್ಷಣದ ಭಾರ ವನ್ನು ಅಂತ್ಯಪೇತರನೆಂಬ ಕಡುಗಲಿಯಾದ ಸೇನಾಪತಿಯೊಬ್ಬನ ಮೇಲೆ ಹೊರಿಸಿ ತಾನು ಅಪರಿಮಿತವಾದ ಸೇನೆಯನ್ನು ಕಟ್ಟಿಕೊಂಡು ಪರ್ಶಿಯಾದ ಮಾರ್ಗ ಹಿಡಿದು ನಡೆದನು ( ಕ್ರಿ. ಪೂ. ೩೩೪ ). ವಿಜಯೋತ್ಸುಕವಾದ ಅವನ ಸೇನೆಯೂ ಅವನೂ ಭರದಿಂದ ಪಯಣದ ಮೇಲೆ ಪಯಣವನ್ನು ಮಾಡುತ್ತ ಹದಿನಾರೇ ದಿವಸಗಳಲ್ಲಿ ಮಾಸಿಡೋನಿಯಾದಿಂದ ಗ್ಯಾಲಿಪೋಲಿ ದ್ವೀಪಕಲ್ಪದಲ್ಲಿರುವ ಸೆಸ್ಟಾಸ ಎಂಬ ಪಟ್ಟಣಕ್ಕೆ ಬಂದುಬಿಟ್ಟರು. ಆ ಪಟ್ಟ ಣದ ಸಮೀಪದಲ್ಲಿಯೇ, ಯುರೋಪ, ಏಶಿಯಾಖಂಡಗಳ ಸೀಮೆಯಾಗಿದ್ದ ಹೆಲೆಸ್ಪಾಂಟವೆಂಬ ಸಾಮುದ್ರಧುನಿಯಿರುವದು. ಧರ್ಮಾರ್ಥ ಕಾಮಮೋ ಕ್ಷಾದಿಗಳನ್ನು ಸಾಧಿಸಿಕೊಳ್ಳಲಪೇಕ್ಷಿಸುವ ಜನರು ಮಹಾತೀರ್ಥಗಳ ಸನ್ನಿ ಧಾನದಲ್ಲಿ ಪಾರ್ವಣಶ್ರಾದ್ಧಗಳನ್ನು ಮಾಡುತ್ತಿರುವಂತೆ, ಶಿಕಂದರ ರಾಜ ನಾದರೂ ತಾನು ಕೈಕೊಂಡಿರುವ ಮಹತ್ಕಾರ್ಯದ ಸಿದ್ಧ್ಯರ್ಥವಾಗಿ ಹೆಲೆ ಸ್ಪಾಂಟನೆಂಬ ಆ ತೀರ್ಥರಾಜನ ಸನ್ನಿಧಾನದಲ್ಲಿ ಪಾರ್ವಣಶ್ರಾದ್ಧವನ್ನು ಮಾಡಿ, ರತ್ನಖಚಿತವಾದ ಸುವರ್ಣ ಕಲಶದಲ್ಲಿ ತುಂಬಿಟ್ಟ ಮದಿರಾ ರಸದಿಂದ

ದೇವತಾತರ್ಪಣವನ್ನು ಮಾಡಿದನು. "ಸುರೆಯೇನು? ತರ್ಪಣವೇನು? ಶಾಂತಂ ಪಾಪಂ! ಶಾಂತಂ ಪಾಪಂ!" ಎಂದು ದೇಶಕಾಲಗಳ ಜ್ಞಾನ ರಹಿತರಾದ ಆಧುನಿಕ ಭಟ್ಟ ಭಿಕ್ಷುಕರು ಕೂಗಿಕೊಳ್ಳಬಹುದು. 'रविमावमते सतां क्रियायै सुध (?) या तर्पयते सुरान् पितृश्च' ಎಂದು ಕವಿಶ್ರೇಷ್ಠನು ಹೇಳಿದಂತೆ ಪ್ರತ್ಯಕ್ಷ ಚಂದ್ರನೇ ಸುಧೆಯಿಂದ [ ಮಧುರಸದಿಂದ ] ದೇವತಾಪಿತೃ ತರ್ಪಣವನ್ನು ಮಾಡುತ್ತಿರುವನು. ಮಧುರಸವೆಂದರೆ, ಮದಿರೆಯೇ. [नत्र शाशप्रतिमाभरणं मधु]. ಅತಿಥಿಗಳು ಮನೆಗೆ ಬಂದಾಗ ನಾವು ಮಧುಪರ್ಕವನ್ನು ( ಮಧುಸಮರ್ಪಣವನ್ನು ) ಮಾಡುವ ಸಂಪ್ರದಾಯವಿರುವದು. ಈಗಿನ ಕಾಲದಲ್ಲಿ ನಾವು ಮಧುರಸವನ್ನು ಮುಟ್ಟಲಾರೆವು; ಇತ್ತ ಶಾಸ್ತ್ರ ವಿಹಿತವಾದ ಮಧುಪರ್ಕವಿಧಿಯನ್ನಾದರೂ ಬಿಡಲಾರೆವು. ಈ ವಿಧಿಯನ್ನು ನಾವೀಗ ಜೇನುತುಪ್ಪ ಮೊಸರಿನ ಮೇಲೆ ಸಾಗಿಸುತ್ತೇವೆ. ಮುತ್ತಿನ ಹತ್ತೊಂಟೆ ಇಲ್ಲದ್ದಕ್ಕಾಗಿ ನಾವು ಸಮಾವರ್ತನೆಯ ಕಾಲದಲ್ಲಿ ಮಕ್ಕಳ ಕಿವಿಗಳಲ್ಲಿ ಕಣಕದ ಕೋಡಬಳೆಗಳನ್ನು ಮಾಡಿ ಸುತ್ತುತ್ತೇವೆ. ಆ ಕೋಡ ಬಳೆಯು ಹತ್ತೊಂಟೆಯಾಗಲಿಲ್ಲ; ಮೊಸರು ಜೇನುತುಪ್ಪಗಳಿಂದ ಮಧುಪರ್ಕವಾಗಲಿಲ್ಲ! ಆದರೆ, ಅಯ್ಯಾ ಸುರಾಭಕ್ತರೆ, ನಾವು ಈ ಟೀಕೆಯ ಮುಖಾಂತರವಾಗಿ ನಿಮ್ಮ ಸುರಾಪಾನಕ್ಕೆ ಅನುಮೋದವನ್ನಿತ್ತೆವೆಂದು ಮಾತ್ರ ಸರ್ವಥಾ ತಿಳಿಯಬೇಡಿರಿ.

ಕ್ರಮಾನುಗತವಾದ ಪೂಜಾವಿಧಾನಗಳೂ ಭೋಜನಾದಿ ಸಮಾರಂಭಗಳೂ ತೀರಿದ ಬಳಿಕ ಶಿಕಂದರ ರಾಜನು ಸೇನಾಸಮೇತನಾಗಿ ಡಾರ್ಡಾನೆಲ್ಲ [ಹೆಲೆಸ್ಪಾಂಟ] ಸಾಮುದ್ರಧುನಿಯನ್ನು ಸುಖರೂಪವಾಗಿ ದಾಟಿ ಏಶಿಯಾದ ಸೀಮೆಯಲ್ಲಿ ತನ್ನ ಬಲಗಾಲನ್ನಿಟ್ಟನು. ಕೂಡಲೆ ವಿಜಯಸೂಚಕಗಳಾದ ಕಹಳೆ ತುತೂರಿ ನಗಾರಿ ನೌಬತ್ತು ಮುಂತಾದ ರಣವಾದ್ಯಗಳ ಘನತರವಾದ ನಿನಾದವೆಸಗಿತು. ಉದ್ರಿಕ್ತರಾದ ವೀರರೆಲ್ಲರೂ ಒಕ್ಕಟ್ಟಿನಿಂದ ಜಯಘೋಷ ಮಾಡಲು ಆ ಶಬ್ದಸಮುಚ್ಚಯದ ನಿತಾಂತವಾದ ಪ್ರಹಾರಕ್ಕೆ ಬುದ್ಬುದಾಕಾರವಾಗಿ ತೋರುವ ವ್ಯೋಮಪಟಲವು ಫಟ್ಟನೆ ಒಡೆದುಹೋಗುವದೋ ಎಂಬಂತೆ ಕಂಡಿತು. ಬಳಿಕ ದೇವತಾರಾಧನ ಪ್ರಾರ್ಥನೆಗಳಾದ ಬಳಿಕ ಸೇನೆಯವರೆಲ್ಲರೂ ಆ ದಿವಸ ವಿಶ್ರಾಂತಿಯನ್ನು ಹೊಂದುವವರಾದರು.

ಪ್ರಬಲವಾದ ಶತ್ರುಸೇನೆಯು ತನ್ನ ರಾಜ್ಯದಲ್ಲಿ ಬಂದಿಳಿಯುವ ವರೆಗೆ ದರಾಯುಸ ರಾಜನ ಅಧಿಕಾರಿಗಳು ನಿಶ್ಚಿಂತರಾಗಿ ಕುಳಿತಿರುವ ಪ್ರಮಾದವನ್ನು ಕಂಡು, ನನಗಿನ್ನು ಅಪಜಯವೇ ಇಲ್ಲವೆಂದು ಖಂಡಿತವಾಗಿ ತಿಳಿದು ಶಿಕಂದರ ರಾಜನು ನಿರ್ಭೀತನಾಗಿ ಒಳದೇಶದಲ್ಲಿ ಜಾಗ್ರತೆಯಿಂದ ಪ್ರವೇಶ ಮಾಡಲಾರಂಭಿಸಿದನು. ಹೇಳದೆ ಕೇಳದೆ ತಮ್ಮ ದೇಶದಲ್ಲಿ ಆಗಂತುಕನಾಗಿ ಶಿಕಂದರನು ಸೇನೆಯನ್ನು ಕಟ್ಟಿಕೊಂಡು ಬಂದಿರುವನೆಂಬ ವಾರ್ತೆಯನ್ನು ಕೇಳಿ, ಲಿಡಿಯಾ ಆಯೋನಿಯಾ ಎಂಬ ಪ್ರಾಂತಗಳ ಕ್ಷತ್ರಪರು [ದರಾಯುಸನ ಸುಭೇದಾರರು] ಎಚ್ಚತ್ತವರಾಗಿ ಶಿಕಂದರನ ಮಾರ್ಗನಿರೋಧ ಮಾಡಬೇಕೆಂದು ಸೇನೆಯನ್ನು ಕಟ್ಟಿಕೊಂಡು ಗ್ರಾನಿಕಾ ಎಂಬ ಹೊಳೆಯ ದಂಡೆಯ ಮೇಲಿರುವ ಝೀಲೇಯ ವೆಂಬ ಗ್ರಾಮದ ಸಮೀಪದಲ್ಲಿ ನಿಂತುಕೊಂಡಿದ್ದರು. ಅಲ್ಲಿ ಗ್ರಾನಿಕಾ ನದಿಯು ಕಾಲ್ದೊಳೆಯಾಗಿದ್ದಿಲ್ಲ. ಒತ್ತಟ್ಟಿಗೆ ಎದೆಮಟ, ಒತ್ತಟ್ಟಿಗೆ ಕುತ್ತಿಗೆಮಟ, ಮತ್ತೊತ್ತಟ್ಟಿಗೆ ಈಸಿಗೆಯಾಗಿರುವ ಆ ಹೊಳೆಯ ನೀರು ಒಳ್ಳೇ ಸೆಳವಿನಿಂದ ಹರಿಯುತ್ತಿತ್ತು. ಆಚೆಯ ದಂಡೆಯ ಮೇಲೆಯೇ ಶತ್ರುಸೇನೆಯ ಶಿಬಿರವು. ಅಂತಿರುವ ಪರಿಸ್ಥಿತಿಯನ್ನು ಕಂಡು ಶಿಕಂದರನ ಸೇನಾಪತಿಯಾದ ಪಾರ್ಮೆನಿಯೋನೆಂಬವನು ರಾಜನಿಗೆ ಅಂದದ್ದು: "ಪ್ರಭುಗಳೆ, ಹೊಳೆ ದಾಟುವದನ್ನು ನಾಳೆಗೆ ನೋಡೋಣ; ಇದು ಹೊತ್ತಲ್ಲ." ಆ ಮಾತು ಕೇಳಿ ರಾಜನು ನಕ್ಕು "ಏನು ಹೇಳುವಿರಿ ನಾಯಕರೆ? ಸಮುದ್ರವನ್ನು ಸಹಜವಾಗಿ ಉಲ್ಲಂಘಿಸಿ ಬಂದವರಾದ ನಮಗೆ ಈ ಕ್ಷುದ್ರವಾದ ನದಿಯು ದುಸ್ತರವಾಯಿತೆ?" ಎಂದು ನುಡಿದು "ಭಟರೆ, ನೋಡುವಿರೇನು? ಶುಭಸ್ಯ ಶೀಘ್ರಂ" ಎಂದು ಸೈನ್ಯದವರನ್ನು ಹುರಿದುಂಬಿಸಿ ನಿಂತಕಾಲ ಮೇಲೆ ರಾವುತರ ಪಡೆಯನ್ನು ಹೊಳೆಗೆಡವಿದನು. ರಾವುತರು ನಡುಹೊಳೆಗೆ ಬಂದು ಅಲ್ಲಿ ಆಳವಾಗಿದ್ದ ನೀರಿಗೆ ಹೆದರಿ ಹಿಂಜರಿಯಲಾರಂಭಿಸಿದರು. ಶಿಕಂದರ ರಾಜನು ತನ್ನ ಕುದುರೆಯನ್ನು ಆರ್ಭಟೆಯಿಂದ ಓಡಿಸಿಕೊಂಡು ಬಂದು 'ಧೈರ್ಯಂ ಸರ್ವತ್ರ ಸಾಧಕಂ' ಎಂದವನೇ ನೀರಿನ ಸೆಳವು ಈಸಿಗೆಗಳನ್ನು ಲಕ್ಷಿಸದೆ, ಹೊಳೆ ಬಿದ್ದು ಸಾಹಸದಿಂದ ದಾಟಿ, ಆಚೆಯ ದಂಡೆಗೆ ಹೋದನು. ರಾಜನ ಸಾಹಸವನ್ನು ಕಂಡು, ಪ್ರೋತ್ಸಾಹಿತರಾದ ರಾವುತರೆಲ್ಲರೂ ಧರ್ಮೋಜಯವೆಂದವರೇ ಆ ತಮ್ಮ ವೀರಾಗ್ರೇಸರನ ಬೆನ್ನು ಬಿಡದೆ

"ಹುರ್ ! ಹುರ್ರ್ !" ಎಂದು ಆರ್ಭಟಿಯಿಂದ ಕೂಗಾಡುತ್ತ ಹೊಳೆಯನ್ನು ದಾಟಿಯೇ ಬಿಟ್ಟರು. ಇವರು ಹೊಳೆ ದಾಟುವಷ್ಟರಲ್ಲಿಯೇ ಶತ್ರುಸೇನೆಯು ಅಲ್ಲಿಗೆ ಬಂದಿತು. ಕೂಡಲೆ ಭಯಂಕರವಾದ ಕದನವೆಸಗಿತು. ಈ ಸಮಯದಲ್ಲಿ ತನ್ನ ಸೇನೆಯು ಹಿಂಜರಿದರೆ ಘಾತವೇ ಎಂದು ಕಂಡುಕೊಂಡವನಾದ ಶಿಕಂದರ ರಾಜನು, ಹಿಂದೆ ಮುಂದೆ ನೋಡದೆ ಶತ್ರುಸೇನೆಯ ಮಧ್ಯದಲ್ಲಿ ಹೊಕ್ಕು ವೀರಗರ್ಜನೆಯನ್ನು ಮಾಡುತ್ತ ಖಡ್ಗವನ್ನೆತ್ತಿ ಜಾರಗಡತದ ಕೊಲೆಯನ್ನೆಬ್ಬಿಸಿದನು. ಅವನಿಗೆ ಜೀವದ ಅಂಜಿಕೆಯೆಲ್ಲಿ ! ರಾಜನ ಸಾಹಸವನ್ನು ಕಂಡು ಸೈನ್ಯದವರಲ್ಲೆಲ್ಲ ಮಿತಿಮೀರಿದ ಸ್ಫೂರ್ತಿ ತುಂಬಿತು. ಆ ಭಟರ ಶಸ್ತ್ರಗಳ ಭಯಂಕರವಾದ ಪ್ರಹಾರಗಳಿಗೆ ಶತ್ರುಸೇನೆಯು ಈಡಾಗಲಿಲ್ಲ. ಹೊಡೆತವನ್ನು ತಾಳಲಾರದೆ ಅವರು ಹಿಂದಿರುಗಿ ಓಡಲಾರಂಭಿಸಿದರು. ಅಲ್ಲಿಂದೇನು ಕೇಳುವದು ? ಮಾಸಿಡೋನಿಯಾದ ವೀರರು ಉದ್ರಿಕ್ತರಾಗಿ ಶತ್ರುಗಳ ಬೆನ್ನಟ್ಟಿ ಹೋಗಿ ಅವರನ್ನು ಜಡೆಜಡೆದು ಕಡಿದರು. ಯುದ್ಧವು ಮುಗಿಯಿತು. ವಿಜಯಲಕ್ಷ್ಮಿಯು ಬಹು ಪ್ರೀತಳಾಗಿ ಶಿಕಂದರ ಮಹಾರಾಜನ ಕೊರಳಿಗೆ ಮಾಲೆ ಹಾಕಿದಳು.

ಜಯವು ವಿಜಯಿಗೆ ಸ್ಫೂರ್ತಿಯನ್ನೀಯುತ್ತಿತ್ತು. ಅಪಜಯವು ಶತ್ರುಗಳ ಸತ್ವವನ್ನೇ ಹರಣಮಾಡಿಕೊಂಡಿತು. ರಣರಂಗದಲ್ಲಿ ನಿಂತು ಶಸ್ತ್ರಾಸ್ತ್ರಗಳ ದುಃಸಹವಾದ ಪ್ರಹಾರಗಳನ್ನು ಹೇಗಾದರೂ ಸಹಿಸಿಕೊಳ್ಳಬಹುದಾದರೂ, ಅಪಜಯದ ವಾರ್ತಾಮಾತ್ರದಿಂದಲೇ ಪರಬಲದ ತೇಜಸ್ಸೆಲ್ಲ ಅಡಗಿಹೋಗಿ ಅದು ಇದ್ದರೂ ಸತ್ತಂತೆಯೇ ಆಗುವದು. ವಿಜಯಿಯಾದ ಶಿಕಂದರನು ಝೋಲೇಯದಿಂದ ಮುಂದಕ್ಕೆ ಸಾಗಿಹೋಗಿ ಸಾರ್ದಿ ಎಂಬ ಕೋಟೆಗೆ ಸಾಗಿಬರುವೆನೆಂಬ ಸುದ್ದಿಯನ್ನು ಕೇಳಿದ ಮಾತ್ರದಿಂದಲೆ ಅಲ್ಲಿದ್ದ ಶತ್ರುಸೇನೆಯು ಎದೆಯೊಡಕೊಂಡು ಕೋಟೆಯನ್ನು ಬಿಟ್ಟು ಓಡಿಹೋಗಿತ್ತು. ಮತ್ತೆ ಆ ಮಹಾವೀರರು ದಕ್ಷಿಣಕ್ಕೆ ಸಾಗಿ ಇಫೇಜವೆಂಬ ಕೋಟೆಗೆ ಬರುವಷ್ಟರಲ್ಲಿಯೇ ಅದೂ ಅವನ ಹಸ್ತಗತವಾಗಿಹೋಯಿತು. ಹೀಗೆ ಏಜಿಯನ್ ಸಮುದ್ರದಂಡೆಯಲ್ಲಿರುವ ಎಲ್ಲ ಪಟ್ಟಣಗಳು ಕೈಸನ್ನೆ ಮಾಡಿ ಶಿಕಂದರರಾಜನನ್ನು ಕರಕೊಂಡಂತೆ ಮಾಡಿದವು. "ಇನ್ನಂತೂ ನಮಗೆ ಶತ್ರುಗಳ ಹಡಗುಪಡೆಯ ಭೀತಿಯು ಇಲ್ಲದಾಯಿತೇ !" ಎಂದು ಉದ್ಗಾರ

ತೆಗೆದವನೇ ಶಿಕಂದರನು ಪೂರ್ವೋತ್ತರವಾದ ದಿಶೆಯಿಂದ ತುರ್ಕಸ್ಥಾನದ ಹೊಟ್ಟೆ ಹೊಗಲಾರಂಭಿಸಿದನು. ಅಲ್ಲಿಯಾದರೂ ಯುದ್ಧವೆಲ್ಲಿ? ನಗರ ನಗರಿಗಳ ನಿವಾಸಿಗಳು ಊದಿಸುತ್ತ ಬಾರಿಸುತ್ತ ಶಿಕಂದರನನ್ನು ಎದಿರ್ಗೊಂಡು ತಮ್ಮೂರಿಗೆ ಕರಕೊಂಡು ಹೋಗಲಾರಂಭಿಸಿದರು. ಒಂದು ಪಟ್ಟಣದವರಂತೂ ರತ್ನಖಚಿತವಾದ ಕಿರೀಟವನ್ನು ಮಾಡಿಸಿ ಶಿಕಂದರರಾಜನ ಉತ್ತಮಾಂಗವನ್ನು ಅಲಂಕರಿಸಿದರು. ಏಸಿಯಾ ಖಂಡದ ನಿವಾಸಿಗಳವರು! ತಮ್ಮ ರಾಜನಾರೋ, ತಾವು ಸನ್ಮಾನವನ್ನು ತೋರಿಸುತ್ತಿರುವದಾರಿಗೋ! ಅಭಿಮಾನವೆಲ್ಲಿ?

ಚಳಿಗಾಲವು ಬಂದಿತು. ದರಾಯುಸನ ಪ್ರಜರಿಂದಂತೂ ಶಿಕಂದರನಿಗೆ ಎಷ್ಟುಮಾತ್ರವೂ ತೊಂದರೆಯಿರಲಿಲ್ಲ; ಆದರವೇ ಕಂಡುಬಂದಿತು. ಇನ್ನು ಭಯವೆಂದರೆ ಶತ್ರುಸೇನೆಯ ಭಟರುವೇ ಭಯವು. ಆದರೂ ಚಳಿಗಾಲವು ನೀಗಿಹೋಗುವವರೆಗೆ ದರಾಯುಸನು ಯುದ್ಧದ ಉಸಾಬರಿಯನ್ನು ಮಾಡುವಂತಿದ್ದಿಲ್ಲ. ನೆಲ ಮೆತ್ತಗೆ ಕಂಡರೆ ಮೊಳಕೈಯಿಂದ ಅಗಿಯಬಹುದಂತೆ. ಶಿಕಂದರನು ತನ್ನ ಸೇನೆಯಲ್ಲಿರುವ ವಿವಾಹಿತರಾದ ಭಟರೆಲ್ಲರು ಊರಿಗೆ ಹೋಗಿ ತಮ್ಮ ತಮ್ಮ ಹೆಂಡಿರ ಮೋರೆ ನೋಡಿ ಬರಲೆಂದು ಅವರೆಲ್ಲರಿಗೂ ಅಪ್ಪಣೆಕೊಟ್ಟು, ಉಳಿದಷ್ಟು ಸೇನೆಯೊಡನೆಯೇ ಮುಂದೆ ಮುಂದೆ ಹೆಜ್ಜೆಯನ್ನಿಕ್ಕುತ್ತ ತುರ್ಕಸ್ಥಾನದ ನಡುಗರ್ಭದ ಕಡೆಗೆ ನಡೆದನು. ವಸಂತಕಾಲವು ಸಮೀಪಿಸುವಷ್ಟರಲ್ಲಿ ಅವರು ಫ್ರಿಜಿಯಾ ಎಂಬ ಪ್ರಾಂತದಲ್ಲಿ ಸೇರಿ ಅಲ್ಲಿಯ ಪ್ರಸಿದ್ಧವಾದ ಗಾರ್ಡಿಯಾ ಎಂಬ ಪಟ್ಟಣವನ್ನು ಹಿಡಕೊಂಡರು. ಆ ಪ್ರಾಚೀನವಾದ ಪಟ್ಟಣದಲ್ಲಿ ಪೂರ್ವಕಾಲದ ಪುಣ್ಯಾತ್ಮನಾದ ಒಬ್ಬ ರಾಜನ ರಥವಿದ್ದಿತು. ದೇವತಾಪುರುಷನ ಪವಿತ್ರವಾದ ರಥವೇ ಅದೆಂದು ಭಾವಿಸಿ ಅಲ್ಲಿಯ ಜನರು ಅದನ್ನೊಂದು ಮಂದಿರದಲ್ಲಿರಿಸಿ ಪೂಜಿಸುತ್ತಿದ್ದರು. ಆ ಬಂಡಿಯ ಉದ್ದಿಗೆಗೆ ನೊಗವನ್ನು ಹಗ್ಗದಿಂದ ಕಟ್ಟಿ, ಕಟ್ಟಿದ ಸ್ಥಳದಲ್ಲಿ ಬ್ರಹ್ಮಗಂಟಿನಂಥ ಗಂಟು ಹಾಕಿ, ಹಗ್ಗದ ತುದಿಯನ್ನು ಅಡಗಿಸಿಬಿಟ್ಟಿದ್ದರು. ಆ ಗಂಟು ಉಚ್ಚುವಂತೆಯೇ ಇದ್ದಿಲ್ಲ. ಗ್ರಂಥಿಭೇದನವನ್ನು ಮಾಡಿದ ಜಾಣನು ಸಮಗ್ರವಾದ ಏಸಿಯಾ ಖಂಡದ ಸಾರ್ವಭೌಮನಾಗತಕ್ಕವನೆಂಬದೊಂದು ಆಖ್ಯಾಯಿಕೆಯು ಇತ್ತು. ಜನರನ್ನು ಮರುಳುಗೊಳಿಸುವ ಸಮಯ

ವಿದೇ ಎಂದು ತಿಳಿದು, ಶಿಕಂದರನು ನೆಟ್ಟಗೆ ರಥದ ಬಳಿಗೆ ಹೋಗಿ ತನ್ನ ಖಡ್ಗದಿಂದ ಆ ಗ್ರಂಥಿಯನ್ನು ಕಚ್ಚನೆ ಕಡಿದು ನೊಗವನ್ನು ಕಡೆಗೆ ಚಿಮ್ಮಿ ಬಿಟ್ಟನು. ಆ ಗಂಟನ್ನು ಉಚ್ಚಲಿ, ಕಡಿದುಹಾಕಲಿ, ಗ್ರಂಥಿಭೇದನವಾದದ್ದಂತೂ ಸರಿಯೇ. ಇಲ್ಲವೆಂದು ಹೇಳಲು ಆಸ್ಥಾನಪಂಡಿತರಿಗೆ ಹಳೆ ಹೊಸ ವ್ಯಾಕರಣಗಳ ಪ್ರಕರಣಗಳಲ್ಲಿ ಸೂತ್ರಾಧಾರಗಳೆಲ್ಲಿಯೂ ಸಿಗದ್ದಕ್ಕಾಗಿ ಶಿಕಂದರನು ಗ್ರಂಥಿಭೇದನವನ್ನು ಮಾಡಿದನೆಂದು ಅವರು ಅನಿವಾರ್ಯಹಕ್ಕಾಗಿ ಒಪ್ಪಿಕೊಂಡರು. ಅಹಲ್ಯೆಯ ಮದುವೆಯ ಕಾಲಕ್ಕೆ ಗೌತಮನು ಈಯುತ್ತಿರುವ ಆಕಳಿಗೆ ಪ್ರದಕ್ಷಿಣೆಯನ್ನು ಹಾಕಿ ಭೂಪ್ರದಕ್ಷಿಣೆ ಮಾಡಿದ ಶ್ರೇಯಸ್ಸನ್ನು ಪಡೆದ ಯುಕ್ತಿಯಂಥ ಯುಕ್ತಿಯನ್ನೇ ಶಿಕಂದರನು ಮಾಡಿದನು. ಇಂಥ ಚಮತ್ಕಾರವಾದ ಯುಕ್ತಿಗೆ ಇಂಗ್ಲಿಶ್ ಭಾಷೆಯಲ್ಲಿ ಗಾರ್ಡೀಯ ಗ್ರಂಥಿ ಭೇದನ ( To cut the Gordian knot ) ಎಂದು ಹೇಳುತ್ತಾರೆ. ಹೇಗೇ ಆಗಲಿ, ಆ ಗ್ರಂಥಿಭೇದನಕ್ಕಾಗಿ ಶಿಕಂದರನೇ ಮುಂದಾಗತಕ್ಕ ಚಕ್ರವರ್ತಿಯೆಂದು ಗಾರ್ಡಿಯಾ ಗ್ರಾಮದ ಸಾಧುಸಂತರು ನುಡಿದರು. ಅವನು ಮಾಡಿದ ಗ್ರಂಥಿಭೇದನವು ಯಥೋಕ್ತವಾಗಲಿಲ್ಲವೆಂದು ಕೆಲವರು ಅಭಿಪ್ರಾಯಪಟ್ಟರೂ, ಶಿಕಂದರನು ಆ ಕೆಲಸವನ್ನು ಇನ್ನೊಬ್ಬರಿಗೆ ಉಳಿಸಲಿಲ್ಲವಾದ್ದರಿಂದ, [ ಗ್ರಂಥಿಯೇ ಕಡಿದು ಹೋದ ಬಳಿಕ ಉಚ್ಚುವದಿನ್ನೇನು ? ] ಅವನೇ ಸಾರ್ವಭೌಮನೆಂದು ಆ ಜನರಾದರೂ ಒಪ್ಪಿಕೊಂಡರು. ಅರ್ಥಾತ್ ಆ ಪ್ರಾಂತದಲ್ಲಿ ದರಾಯುಸನಿಗಿಂತಲೂ ಭಾವೀ ಸಾರ್ವಭೌಮನಾದ ಶಿಕಂದರನಿಗೆಯೇ ಹೆಚ್ಚಿನ ಮಾನಮರ್ಯಾದೆಗಳು ನಡೆದವು. ಸಂತತಿಯನ್ನು ಬಯಸಿದ ಸತಿಯರ ಸಮಾಧಾನಕ್ಕಾಗಿ, ಮನೆಗೆ ಹೋದ ಭಟರ ಮಾರ್ಗಪ್ರತೀಕ್ಷೆಗಾಗಿ ರಾಜನು ಗಾರ್ಡಿಯಾ ಪಟ್ಟಣದಲ್ಲಿಯೇ ಕೆಲಕಾಲ ತಳ ಊರಿಕೊಂಡು ಕುಳಿತನು.

ಆ ಭಟರು ಮರಳಿ ಬರುವಾಗ ತಮ್ಮೊಡನೆ ಇನ್ನೂ ಅನೇಕ ಸಹಸ್ರ ಸಂಖ್ಯಾಕರಾದ ವೀರರನ್ನು ಕಟ್ಟಿಕೊಂಡು ರಾಜನ ಸನ್ನಿಧಾನಕ್ಕೆ ಬಂದ ಕೂಡಲೆ, ಮತ್ತೆ ಹೊಸ ಮಾರ್ಗಕ್ರಮಣಕ್ಕೆ ಪ್ರಾರಂಭವಾಯಿತು. ಅಪ್ರತಿರಥನಾದ ಶಿಕಂದರ ಮಹಾವೀರನು ದಿನಕ್ಕೊಂದು ಹೊಸ ಪ್ರದೇಶವನ್ನು ಗೆದ್ದುಕೊಳ್ಳುತ್ತ ಪೂರ್ವಾಭಿಮುಖನಾಗಿ ಸಾಗಿಹೋಗಿ, ತುರ್ಕಸ್ಥಾನದ

ಕೇಂದ್ರಸ್ಥಾನವಾದ ಆಂಕಿರಾ ಎಂಬ ನಗರಿಯನ್ನು ಆಕ್ರಮಿಸಿಕೊಂಡನು. ಗೆದ್ದ ಪ್ರಾಂತಗಳನ್ನೆಲ್ಲ ನುಂಗಿ ಹೊಟ್ಟೆಯ ಮೇಲೆ ಕೈಯಾಡಿಸಿಕೊಂಡು ತೇಗಿ ಸಮಾಧಾನವನ್ನು ತಳೆದ ಬಳಿಕ ಶಿಕಂದರನು ಮತ್ತೆ ದಕ್ಷಿಣಾಭಿಮುಖನಾಗಿ ಹೊರಟು, ಅಬಾಧಿತನಾಗಿ ಸಿಲೀಸಿಯಾ ಎಂಬ ಪ್ರಾಂತವನ್ನು ಹೊಕ್ಕನು. ವೃಷಾಚಲ (ಟಾರಸ್)ವೆಂಬ ಪರ್ವತವನ್ನಿಳಿದು ಕೆಳಗಿನ ಮಾಗುಭೂಮಿಯಲ್ಲಿ ಬಂದ ಕೂಡಲೆ, ಶಿಕಂದರನಿಗೆ ದೂಷಿತವಾದ ಜ್ವರದ ಭಾವನೆಯಾಗಿದ್ದರೂ ತಾರುಣ್ಯದ ಮದದಲ್ಲಿ ಆವನು ಅಲ್ಲಿರುವ ಕಾಯದನುವೆಂಬ ನದಿಯ ತಣ್ಣಗಿನ ನೀರಲ್ಲಿ ಹಾರಿಕೊಂಡು ಈಜಾಡಿದ್ದರಿಂದ ಆವನಿಗೆ ಅಸಾಧ್ಯವಾದ ಜ್ವರ ಬಂದಿತು. ರಾಜನು ಬದುಕುವನೋ ಇಲ್ಲವೋ ಎಂಬ ದೊಡ್ಡ ಚಿಂತೆ! ಪರಿವಾರದಲ್ಲಿರುವ ಚಿಕಿತ್ಸಕನಾದ ವೈದ್ಯನು ಶಿಕಂದರನಿಗೆ ಒಳ್ಳೇ ನಿದಾನಪೂರ್ವಕವಾಗಿ ಔಷಧೋಪಚಾರಗಳನ್ನು ನಡಿಸಿರಲು, ಕುಚೋದ್ಯಗಾರನೊಬ್ಬನು "ವೈದ್ಯನು ದರಾಯುಸ ಬಾದಶಹನ ಸಂಚಿನಲ್ಲಿ ಸೇರಿ ರಾಜರಿಗೆ ವಿಷಪ್ರಯೋಗವನ್ನು ಈ ದಿವಸ ಮಾಡತಕ್ಕವನಿದ್ದಾನೆ" ಎಂದು ಪತ್ರ ಬರೆದಿದ್ದನು. ಆ ಪತ್ರಕ್ಕೆ ಲೇಖಕನ ಸಹಿಸೂತ್ರಾದಿಗಳಿದ್ದಿಲ್ಲ. ಶಿಕಂದರನಿಗೆ ಆ ಪತ್ರದ ಆಶಯದಲ್ಲಿ ವಿಶ್ವಾಸವಾಗಲಿಲ್ಲ. ಕಷಾಯದ ಬಟ್ಟಲವನ್ನು ವೈದ್ಯನು ತಂದು ಕೊಡುತ್ತಲೆ ರಾಜನು ಅದನ್ನು ತನ್ನ ಬಾಯಿಗೆ ಹಚ್ಚಿ, ವೈದ್ಯನ ಮುಂದೆ ಆ ಪತ್ರವನ್ನು ಚಲ್ಲಿಕೊಟ್ಟನು. ಆ ಭಿಷಗ್ವರ್ಯನು ಅತ್ತ ಆ ಪತ್ರವನ್ನು ಓದುವಷ್ಟರಲ್ಲಿ ಇತ್ತ ಆ ನೃಪಶ್ರೇಷ್ಠನು ಕಷಾಯವನ್ನು ಕುಡಿದು ಬಟ್ಟಲನ್ನು ಡಬ್ಬ ಹಾಕಿದನು. ರಾಜನ ಸವಿಶ್ವಾಸ ಕೃತಿಯನ್ನು ಕಂಡು ವೈದ್ಯನ ಕಣ್ಣುಗಳಲ್ಲಿ ಆನಂದಾಶ್ರುಗಳುದುರಿದವು. ರಾಜನಾದರೂ ಪ್ರಸನ್ನ ವದನನಾಗಿ ನಕ್ಕನು. ದೇವರು ಆ ವೈದ್ಯ ರೋಗಿಗಳ ಗುಣಕ್ಕೆ ಮೆಚ್ಚಿ ಬೇಗನೆ ವ್ಯಾಧಿಯ ಪರಿಹಾರವನ್ನು ಮಾಡಿದನು. ಅಲ್ಲಿಂದವನು ಮುಂದಕ್ಕೆ ಸಾಗುವಷ್ಟರಲ್ಲಿ, ದರಾಯುಸನು ದೊಡ್ಡ ಸೇನೆಯೊಂದಿಗೆ ಶಿಕಂದರನಿಗೆದಿರಾಗಿ ಬರುತ್ತಿರುವನೆಂಬ ವಾರ್ತೆ ಬಂದಿತು. ಮಾವುತ ರಾವುತರೂ ಕಾಲಾಳುಗಳೂ ಕೂಡಿ ಆರು ಲಕ್ಷ ಜನ ಯುದ್ಧ ಮಾಡುವ ಭಟರು ಆ ಪಾರಸೀಕನಾದ ಸಾರ್ವಭೌಮನ ಸುತ್ತಲು ನೆರೆದಿದ್ದರು. ಆ ಜನರಲ್ಲದೆ ಕೂಲಿಕಾರ ರಥಕಾರರೂ, ಅಡಿಗೆ ನೀರಿನವರೂ, ಕಮ್ಮಾರ ಶಿಕಲಿಗಾರರೂ, ಅಂಗಡಿಗಾರ ಸಿಂಪಿಗರೂ, ಆಟ

ನೋಟದವರೂ, ಗಾಯಕ ವಾರಾಂಗನೆಯರೂ ಕೂಡಿ ಎಷ್ಟು ಜನವಿತ್ತೆಂದು ಹೇಳಲು ಲೆಕ್ಕವೆಲ್ಲಿ? ಯುದ್ಧ ಮಾಡಲು ಅನುಕೂಲವಾದ ಸ್ಥಳವನ್ನು ದರಾಯುಸನು ಹಿಡುಕೊಳ್ಳಬೇಕೆನ್ನುವಷ್ಟರಲ್ಲಿಯೇ ಶಿಕಂದರನು ಆ ಸ್ಥಳವನ್ನು ತಾನು ಜಾಗ್ರತೆಯಿಂದ ಹಿಡುಕೊಂಡು ನಿಂತನು. ಸಿರಿಯಾ ಪ್ರಾಂತದಲ್ಲಿ (ಭೂಮಧ್ಯ ಸಮುದ್ರದ ದಂಡೆಯ ಮೇಲೆ) ಇರುವ "ಯಶಸ್" ಎಂಬ ಗ್ರಾಮದ ಬಳಿಯಲ್ಲಿ ದೊಡ್ಡ ಯುದ್ಧವಾಯಿತು. ಈ ಯುದ್ಧದಲ್ಲಿ ಮತ್ತೆ ಶಿಕಂದರನು ಜೀವದ ಅಂಜಿಕೆಯನ್ನು ಬಿಟ್ಟು ಶತ್ರುಸೇನೆಯಲ್ಲಿ ಹೊಕ್ಕು ಅಖಂಡವಾಗಿ ಅರಿಭಟರನ್ನು ಕಡಿಕಡಿದು ಹಾಕುತ್ತಿರುವದನ್ನು ಪ್ರತ್ಯಕ್ಷವಾಗಿ ನೋಡಿ ಸೈನಿಕರೆಲ್ಲರಲ್ಲಿಯೂ ವೀರಾವೇಶವು ತುಂಬಿತು. ಒಬ್ಬೊಬ್ಬನ ಮೈಯಲ್ಲಿ ಆನೆಯ ಬಲವು ಬಂದಂತಾಯಿತು. ನಲ, ನೀಲ, ಅಂಗದ, ಅಂಜನೇಯ ಮುಂತಾದ ವಜ್ರಕಾಯರಾದ ವೀರರು ಕಲ್ಲುದುಂಡೆ ಕೊಂಬೆಕೋಲುಗಳಿಂದ ಜಗದ್ವಲ್ಲಭನಾದ ರಾವಣೇಶ್ವರನ ಅಕ್ಷೌಹಿಣೀ ಗಣ್ಯವಾದ ರಾಕ್ಷಸಸೇನೆಯನ್ನು ನುಗ್ಗುನುಸಿಯಾಗಿ ಮಾಡಿಕೊಟ್ಟಿರಲು, ತತ್ಸಮಾನರಾದ ವೀರರು ಶಸ್ತ್ರಾಸ್ತ್ರಗಳ ಪ್ರಯೋಗನೈಪುಣ್ಯವನ್ನು ಸಂಪಾದಿಸಿ ಸ್ಫೂರ್ತಿಯಿಂದ ಕಾದುತ್ತಿರಲು, ಸುಖದ ಪಿಂಡದವರಾದ ಪಾರಸೀಕ ಸೈನಿಕರ ಪಾಡೇನು? ಫಿಲ್ಲಿಪರಾಜನ ಹೊಸ ಕ್ಲಪ್ತಿಯಾದ "ಫ್ಯಾಲ್ಯಾಂಕ್ಸ" ಎಂಬ ಚುಚ್ಚುಗೋಲಿನ ಭಟರ ಚಮತ್ಕಾರವಾದ ವ್ಯೂಹವು ಸಂಚರಿಸುವ ಗಿರಿಯಂತೆ ಪಾರಸೀಕರ ಸೇನೆಯಲ್ಲಿ ಹೊಕ್ಕು, ತೀಕ್ಷ್ಣವಾದ ತ್ರಿಶೂಲಗಳ ಸಂತಾನದಿಂದ ಇರಿಯುತ್ತ ಬರಲಾಗಿ, ದರಾಯುಸನ ಮಹಾಸೇನೆಯು ಸೋತು ಜರ್ಜರಿತವಾಗಿ ಹಿಂಜರಿಯಲಾರಂಭಿಸಿತು. ಇನ್ನೇನು, ಘಾತವಾಯಿತೆಂದು ನೆನೆದು ದರಾಯುಸ ಮಹಾರಾಯನು ತನ್ನ ದಿವ್ಯವಾದ ರಥದಿಂದಿಳಿದು ಕುದುರೆಯನ್ನು ಏರಿಕೊಂಡವನೇ ಪಲಾಯನಕ್ಕಾರಂಭಿಸಿದನು. ಕೇಳುವದೇನು? ಯಥಾ ರಾಜಾ ತಥಾ ಪ್ರಜಾ! ರಾಜನನ್ನು ಕಂಡು ಸೇನೆಯೂ ಓಡಲಾರಂಭಿಸಿತು. ಓಡಿ ಹೋಗುವ ಹೇಡಿಗೆ ಕೇಡು ತಪ್ಪಿದ್ದುಂಟೆ? ಶಿಕಂದರನ ಸೇನೆಯವರು ಆ ಕ್ಷುದ್ರಜೀವಿಗಳನ್ನು ಹಿಡಿಹಿಡಿದು ಕಡಿದುಹಾಕಿದರು. ಲಕ್ಷಾವಧಿ ಜನರ ಕೊಲೆಯಾಗಿಹೋಯಿತು. ಆ ದುರ್ದೈವಿಗಳೆಲ್ಲರೂ ರಣಾಂಗಣದಲ್ಲಿ ಗಟ್ಟಿಯಾಗಿ ನಿಂತುಕೊಂಡು ಕಾದಿ ಸತ್ತಿದ್ದರೆ ಇತಿಹಾಸದಲ್ಲೇನು ಹೆಚ್ಚುಕಡಿಮೆ

ಯಾಗುತ್ತಿತ್ತೆಂಬದನ್ನು ಯಾರೇನು ಹೇಳಬಲ್ಲರು ? ಸಾರಾಂಶ, ಶಿಕಂದರನು "ಯುಶಸ್" ಕಾಳಗದಲ್ಲಿ ಯಶಸ್ವಿಯಾದನು (ಕಿ. ಪೂ. ೩೩೩).

ದರಾಯುಸನು ಅಪಜಯುವನ್ನೂ ತನ್ನ ಪ್ರಾಣವನ್ನೂ ಸಂಗಡ ಕಟ್ಟಿಕೊಂಡು ಓಡಿಹೋದನಷ್ಟೇ, ಹೊರತಾಗಿ ತನ್ನ ರಾಜ್ಯಲಕ್ಷ್ಮಿ ಧನಲಕ್ಷ್ಮಿ ಗೃಹಲಕ್ಷ್ಮಿಯರೆಲ್ಲರನ್ನು ಶಿಕಂದರನ ಸ್ವಾಧೀನಕ್ಕೆ ಬಿಟ್ಟುಕೊಟ್ಟು ನಡೆದನು. ಮುಖ್ಯ ದರಾಯುಸನ ಪ್ರಿಯಪತ್ನಿಯಾದ ಅಸ್ಟಶೀರೆಯೂ, ಅವನ ತಾಯಿಯಾದ ಸೇಸಿಗಾಂಬಿಯೂ ಶಿಕಂದರನ ಸೆರೆಯಾಳುಗಳಾದರು. ಅಂತಃಪುರದಲ್ಲಿಯ ಮುತ್ತು ರತ್ನಗಳ ಪೆಟ್ಟಿಗೆಗಳೂ, ರಾಜನ ಜಂಗಮ ಭಾಂಡಾರದಲ್ಲಿರುವ ಸುವರ್ಣ ನಾಣ್ಯಗಳ ಅನೇಕವಾದ ರಾಶಿಗಳೂ, ರೇಶಿಮೆ ಜರತಾರಿಯ ತಂಬು ಡೇರೆಗಳೂ, ಆನೆ ಕುದುರೆ ಬಂಡಿ ಎತ್ತುಗಳೂ ಶಿಕಂದರನ ಸ್ವಾಧೀನವಾದವು. "ಯುಶೋ" ಕ್ಷೇತ್ರದಲ್ಲಾದ ವಿಜಯದ ಮೂಲಕವಾಗಿ ಮೆಸೊಪೊಟಾಮಿಯಾದ ಪಶ್ಚಿಮಕ್ಕಿರುವ ಸಮಗ್ರವಾದ ತುರ್ಕಸ್ಥಾನವು ಮಾಸಿಡೋನಿಯಾದ ರಾಜನ ಆಧಿಪತ್ಯಕ್ಕೊಳಗಾಗಿಹೋಯಿತು. ಕಾವಿನಲ್ಲಿ ಕಾವೆಂದು ತಿಳಿದು ಶಿಕಂದರನು ಭೂಮಧ್ಯ ಸಮುದ್ರದ ದಂಡೆಯ ಮೇಲಿರುವ ಕೋಟೆ, ಪಟ್ಟಣ, ಬಂದರಗಳನ್ನೆಲ್ಲ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುವ ಉದ್ಯೋಗವನ್ನು ನಡಿಸಿದನು. ಅವನು "ಉಫ್" ಎಂದು ಊದಿದ ಕೂಡಲೆ ಸಿದ್ಧನವೆಂಬ ಕೋಟೆಯ ಭದ್ರವಾದ ಗೋಡೆಗಳು ಹಾರಿಹೋದವು. ತೀರಕ್ಕೆ ಸಮೀಪದಲ್ಲಿಯೇ ಚಿಕ್ಕದಾದ ನಡುಗಡ್ಡೆಯಲ್ಲಿರುವ "ತೈಯ್ಯಾರ" (Tyre) ಎಂಬ ಕೋಟೆಯು ರಾವಣನ ಲಂಕೆಯಂತೆ ಬಹು ಭದ್ರವಾಗಿತ್ತು. ಆದರೆ ಕೃತಾಂತನಿಗೂ ನಿತಾಂತವಿಕ್ರಮನಿಗೂ ಈ ಲೋಕದಲ್ಲಿ ಈಡಾಗದಿರುವ ವಸ್ತುವಾವದು ? ಅರ್ವಾಚೀನನಾದ ಆ ಶಿಕಂದರಾಖ್ಯನಾದ ರಾಮನು "ತೈಯ್ಯಾರ"ವೆಂಬ ಲಂಕೆಯ ವರೆಗೆ ಸೇತುಬಂಧನವನ್ನು ಮಾಡಿ ಆ ಕೋಟೆಯನ್ನು ಗೆದ್ದುಕೊಂಡನು (೩೩೭). ಮುಂದೆ ಸಮುದ್ರ ತೀರದ ದಿಗ್ವಿಜಯವು ಸುಲಭವಾಗಿ ಸಾಗಿತು. ಗಾಝಾ, ಪೆಲೂಜಿಯ ಬಂದರಗಳನ್ನು ತೆಗೆದುಕೊಂಡರೆ ಬೇಡೆಂದು ಹೇಳುವಂಥ ಅಗಸೆಯವನೂ ಕೂಡ ಇದ್ದಿಲ್ಲ. ಆಮೇಲೆ ಹಸನ್ಮುಖಳಾದ ಮಿಶ್ರದೇಶದ ನೀಲಗಂಗೆಯು ಶಿಕಂದರ ರಾಜನಿಗೆ ಸ್ವಾಗತವನ್ನಿತ್ತಳು. ಆ ನದಿಯ ಮುಖದ ಬಳಿಯಲ್ಲಿಯೇ ಮೂಗುತಿ

ಯಂತೊಪ್ಪುವ "ಅಲೆಕ್ಝಾಂಡ್ರಿಯಾ" ಎಂಬ ಪಟ್ಟಣವನ್ನು ಶಿಕಂದರನು ಕಟ್ಟಿಸಿದನು (ಕ್ರಿ.ಪೂ. ೩೭೭). ಆ ಪಟ್ಟಣವು ಈ ಕಾಲಲ್ಲಿ ಅನುಭವಿಸುತ್ತಿರುವಷ್ಟು ಘನತೆಗೇರುವದೆಂಬದನ್ನು ಶಿಕಂದರನು ಎಣಿಸಿದ್ದನೋ ಇಲ್ಲವೋ ಎಂಬದನ್ನು ಹೇಳಲಿಕ್ಕಾಗದಿದ್ದರೂ ತಾನು ಕಟ್ಟಿದ ಪಟ್ಟಣವು ವ್ಯಾಪಾರದ ದೊಡ್ಡದೊಂದು ಪಡಿಮೂಲೆಯಾಗುವದೆಂಬದನ್ನು ಆ ಚತುರನು ನಿಃಸಂದೇಹವಾಗಿ ನಂಬಿದ್ದನೆಂಬದರಲ್ಲಿ ಸಂದೇಹವಿಲ್ಲ.

ಶಿಕಂದರನು "ತಯ್ಯಾರ" ಕೋಟೆಗೆ ಲಗ್ಗೆಯನ್ನಿಕ್ಕಿದಾಗ ಹತಾಶನಾದ ದರಾಯುಸ ಬಾದಶಹನು ಅವನೊಡನೆ ಸಾಮದಾನಗಳ ಸಂಧಾನವನ್ನು ನಡೆಸಿದನು. "ಸ್ವರ್ಗಾದಪಿ ಗರೀಯುಸೀ." ಸ್ವರ್ಗಾನಂದಕ್ಕಿಂತ ಹೆಚ್ಚಿನ ಆನಂದವನ್ನೀಯುವವಳಾದ ತಾಯಿಯೂ, ಹೊರಗಿನ ಪ್ರಾಣಗಳೇ ಆದ ಪ್ರಿಯ ಭಾರ್ಯೆಯೂ ಶತ್ರುವಿನ ಸೆರೆಯಲ್ಲಿರುವ ವ್ಯಸನವು ದರಾಯುಸನ ಎದೆಯಲ್ಲಿ ಒಳಿತಾಗಿ ಕಟೆಯುತ್ತಿತ್ತು. ಮೇಲಾಗಿ ತನಗಿನ್ನು ಗೆಲವಿಲ್ಲವೆಂಬ ದುಗುಡವಾದರೂ ಅವನನ್ನು ಒಳಿತಾಗಿ ಬಾಧಿಸುತ್ತಿತ್ತು. "ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ" ಎಂಬಂತೆ ಸರ್ವವೂ ಕೈಬಿಟ್ಟು ಹೋಗುವ ಕಾಲದಲ್ಲಿ ಬುದ್ಧಿವಂತನಾದವನು ತಾನಾಗಿ ಅರ್ಧವನ್ನು ಕೊಟ್ಟು ಅರ್ಧವನ್ನು ರಕ್ಷಿಸಿಕೊಳ್ಳತಕ್ಕದ್ದೆಂಬ ನ್ಯಾಯಕ್ಕನುಸಾರವಾಗಿ ಶಿಕಂದರನಿಗೆ ಅರ್ಧ ರಾಜ್ಯವನ್ನೂ, ತಾಯಿ ಹೆಂಡಿರನ್ನು ಬಿಟ್ಟುಕೊಡುವದಕ್ಕಾಗಿ ಇಪ್ಪತ್ತು ಲಕ್ಷ ತೊಲೆ ಬಂಗಾರವನ್ನೂ ಕೊಡುವದಲ್ಲದೆ, 'ವರ್ಷಣಾ' ಎಂಬ ತನ್ನ ರೂಪಸಂಪನ್ನೆಯಾದ ಮಗಳನ್ನು ಕೊಡಲೊಪ್ಪಿ ಯುದ್ಧವನ್ನು ನಿಲ್ಲಿಸಬೇಕೆಂದು ಬೇಡಿಕೊಂಡನು. ಈ ಸಾಮದಾನಗಳ ಸಂಧಾನಗಳನ್ನು ಎಷ್ಟು ಮಾತ್ರವೂ ಆದರಿಸದೆ ಶಿಕಂದರನು ಅವುಗಳನ್ನು ಒಮ್ಮೆಲೆ ನಿರಾಕರಿಸಿಬಿಟ್ಟನು. ಆಗ ಪಾರ್ಮೇನಿಯೋ ಸೇನಾಪತಿಯು ವಿಸ್ಮಯಪಟ್ಟು ನುಡಿದದ್ದು: "ನಾನೇ ಶಿಕಂದರ ರಾಜನಾಗಿದ್ದರೆ ದರಾಯುಸನ ಸಂಧಾನಗಳನ್ನು ಮನ್ನಿಸುತ್ತಿದ್ದೆನು." ಅದಕ್ಕೆ ಶಿಕಂದರನು ನಕ್ಕು ಪ್ರತ್ಯುತ್ತರವಾಗಿ, "ನಾನು ಪಾರ್ಮೇನಿಯೋನಾಗಿದ್ದರೂ ದರಾಯುಸನ ಸಂಧಾನಗಳನ್ನು ಮನ್ನಿಸದೆ ಇರುತ್ತಿದ್ದಿಲ್ಲ" ಎಂಬ ಅಪಹಾಸೋಕ್ತಿಯನ್ನಾಡಿದನು. ಎಲ್ಲವೂ ನಷ್ಟವಾಗಿಹೋಗುವ ಕಾಲ ಬಂದಾಗ ಅರ್ಧವನ್ನು ಬಿಟ್ಟುಕೊಡುವದು ಜಾಣತನ

ವಾಗಿದ್ದರೂ ಎಲ್ಲವೂ ಕೈವಶವಾಗುವ ಕಾಲದಲ್ಲಿ ಅರ್ಧವನ್ನು ಬಿಟ್ಟುಕೊಡು ವದು ಮೂರ್ಖತನವೇ ಸರಿ.

ಶಿಕಂದರನು ಮಿಶ್ರದೇಶ (ಈಜಿಪ್ತ)ವನ್ನು ತನ್ನದಾಗಿ ಮಾಡಿಕೊಂಡು ಮರಳಿ ಜಲಮಾರ್ಗವಾಗಿ "ತ್ರೈಯ್ಯಾರ"ಕ್ಕೆ ಬಂದು, ಅಲ್ಲಿಂದ ಮೆರೆಯುತ್ತ ಮೆರೆಯುತ್ತ ಒಳದೇಶದಲ್ಲಿ ಸಾಗಿಬಂದನು. ಅಲ್ಲಿಯ ನಗರದೇವತೆಗಳು ಆ ವಿಜಯಿಯಾದ ರಾಜನಿಗೆ ಮೆಚ್ಚಿ ಕೈಸನ್ನೆ ಮಾಡಿ ಮಾಡಿ ಕರೆಯುತ್ತಿರುವಂತೆ ಕಂಡವು. ಪಾಲಸ್ತಾನದೊಳಗೆ ಹಾಯ್ದು ಅವನು ಇಫ್ರಾಯತೀ ನದೀತೀರ ದಲ್ಲಿರುವ ಕಾಪಶಾಕವೆಂಬ ಪಟ್ಟಣವನ್ನು ಕೈವಶ ಮಾಡಿಕೊಂಡು ಮೆಸಾ ಪಾಟಾಮಿಯಾ ಪ್ರಾಂತವನ್ನಾಕ್ರಮಿಸಿಕೊಂಡು ತೈಗ್ರೀನದೀ ತೀರದಲ್ಲಿರುವ 'ನಿನವೇ' ಎಂಬ ಪುರಾಣಪ್ರಸಿದ್ಧವಾದ ಪಟ್ಟಣಕ್ಕೆ ಅಪ್ರತಿಹತವಾಗಿ ಬಿಜಯ ಮಾಡಿದನು. ಅಲ್ಲಿ ಬರುತ್ತಲೇ, ದರಾಯುಸನು ಹಾಗೂ ಹೀಗೂ ಮಾಡಿ ಮತ್ತೊಂದು ಪ್ರಚಂಡವಾದ ಸೇನೆಯನ್ನು ನೆರವಿಕೊಂಡು 'ಗಾಗಾಮೆಲಾ' ಎಂಬ ಸ್ಥಳದಲ್ಲಿ ಯುದ್ಧಕ್ಕೆ ಸನ್ನದ್ಧನಾಗಿರುವನೆಂಬ ವಾರ್ತೆಯನ್ನು ಶಿಕಂದ ರನು ಕೇಳಿದನು.

ಒಂದು ದಿನ ರಾತ್ರಿಯಲ್ಲಿ ಶಿಕಂದರ ರಾಜನು ತನ್ನ ತಂಬೂವಿನಲ್ಲಿ ಸುಖ ವಾಗಿ ಮಲಗಿಕೊಂಡಿರುವಾಗ, ಸೇನಾಪತಿಯು ವ್ಯಗ್ರಚಿತ್ತನಾಗಿ ಬಂದು ರಾಜ ನನ್ನು ಲಗಬಗೆಯಿಂದ ಎಚ್ಚರಿಸಿದನು. ಏನು ಸಮಾಚಾರವೆಂದು ರಾಜನು ಎಚ್ಚತ್ತು ಕೇಳಲಾಗಿ "ಪ್ರಭೋ, ದರಾಯುಸನ ಸೇನೆಯು ನಮ್ಮ ಶಿಬಿರದ ಕಡೆಗೆ ಸಾಗಿಬರುವಂತೆ ಕಾಣುತ್ತದೆ. ನೋಡಿದಿರಾ, ಲಕ್ಷಾವಧಿ ದೀವಟಿಗೆ ಗಳಿಂದ ಪ್ರಜ್ವಲಿತವಾದ ಭೂಪ್ರದೇಶವೇ ಇತ್ತ ಕಡೆ ನಡೆತರುವಂತೆ ಭಾಸ ವಾಗುತ್ತದೆ" ಎಂದು ಸೇನಾಪತಿಯು ಬೆಸಗೊಂಡನು. ರಾಜನು ಮಂದಸ್ಮಿತ ನಾಗಿ "ಇದಕಿಷ್ಟೇಕೆ ಉದ್ವಿಗ್ನರಾದಂತೆ ತೋರುವಿರಿ? ವಿಜಯಶ್ರೀಯು ತಾನಾಗಿ ಬೆಳಕು ಮಾಡಿಕೊಂಡು ನಮ್ಮನ್ನು ಇದಿರುಗೊಳ್ಳಲಿಕ್ಕೆ ಬರುತ್ತಿರು ವಳು. ದರಾಯುಸಬಾದಶಹನು ತನ್ನ ಅಪರಿಮಿತವಾದ ಸೇನೆಯನ್ನು ಕಟ್ಟಿ ಕೊಂಡು ನಮ್ಮಿಂದ ದೂರದೂರವಾಗಿ ಸಂಚರಿಸುತ್ತ ಕಣ್ಣುಮುಚ್ಚಾಣಿಕೆಯ ಆಟವನ್ನು ಹೂಡಿದ್ದರೆ ನಮಗೆಷ್ಟು ತೊಂದರೆಯಾಗುತ್ತಿತ್ತೆಂಬದರ ಅರಿಕೆ ನಿಮಗುಂಟೋ? ಹೋಗಿರಿ, ಜಾಗರೂಕರಾಗಿ ಕಾದುಕೊಂಡಿದ್ದು ಪ್ರಾತಃ

ಕಾಲದಲ್ಲಿಯೇ ನನ್ನನ್ನು ಎಬ್ಬಿಸಿರಿ. ಸೂರ್ಯೋದಯಕ್ಕೆ ಸರಿಯಾಗಿ ಯುದ್ಧವು ಪ್ರಾರಂಭವಾಗತಕ್ಕದ್ದು." ಎಂದು ಆಜ್ಞಾಪಿಸಿ, ಅಪಜಯದ ಭೀತಿಯ ಶಿಲಾಂಶವನ್ನಾದರೂ ಕಾಣದವನಾದ ಆ ಸೇನಾನಿಯು ಸ್ವಸ್ಥ ಮನಸ್ಸಿನವನಾಗಿ ಮಲಗಿಕೊಂಡನು. ವಿಚಾರ, ಹಳವಂಡು, ಕನಸುಗಳ ವ್ಯವಧಾನವಿಲ್ಲದೆ ಅವನು ಬೇಗನೆ ನಿದ್ದೆಗೈದನು. ಜಗದ್ವಿಖ್ಯಾತರಾದ ವೀರರ ಮನಃಪ್ರವೃತ್ತಿಗಳು ಯಾವ ಕಾಲದಲ್ಲಿಯಾಗಲಿ ಯಾವ ದೇಶಗಳಲ್ಲಿಯಾಗಲಿ ಏಕಪ್ರಕಾರವಾಗಿರುವವು. ನಪೋಲಿಯನ್, ಜ್ಯೂಲಿಯಸ್ ಸೀಜರ, ರಾಮ, ಅರ್ಜುನರೇ ಮುಂತಾದವರು ತಮ್ಮ ತಮ್ಮ ಯುದ್ಧಗಳ ಪರಿಣಾಮದ ವಿಷಯವಾಗಿ ನಿಃಸಂದೇಹರಾಗಿದ್ದದ್ದರಿಂದ ಅವರ ಚಿತ್ತಕ್ಕೆ ಚಾಂಚಲ್ಯದ ದೋಷವು ತಗಲಲೇ ಇಲ್ಲ.

ಪ್ರಾತಃಕಾಲದಲ್ಲಿಯೇ ಯುದ್ಧಕ್ಕೆ ಪ್ರಾರಂಭವಾಯಿತು. ದರಾಯಸನ ಸೇನೆಯಲ್ಲಿ ಹತ್ತು ಲಕ್ಷ ಜನ ಕಾಲಾಳುಗಳೂ ನಾಲ್ವತ್ತು ಸಾವಿರ ಜನ ರಾವುತರೂ ಇದ್ದಿರಬೇಕು. ಶಿಕಂದರನ ಕಾಲಾಳುಗಳೆಂದರೆ ನಾಲ್ವತ್ತೇ ಸಾವಿರ ಜನರು. ರಾವುತರು ಏಳುಸಾವಿರ ಜನ. ಇನ್ನೂರಕ್ಕೊಬ್ಬ ಕಾಲಾಳೂ ಆರಕೊಬ್ಬ ಕುದುರೆಯವನೂ ಇದ್ದಂತಾಯಿತು. ಹತ್ತೇ ಜನ ಹಾವಳಿಗಾರರು ಸಂತೆಗೆ ಸಂತೆಯನ್ನೇ ಬಡಕೊಂಡು ಹೋಗುವಂತೆ ಶಿಕಂದರನ ಚುಚ್ಚುಗೋಲಿನ ವೀರರ ವ್ಯೂಹವು ಶತ್ರುಸೇನೆಯಲ್ಲಿ ನುಗ್ಗಿ ವಿಲಕ್ಷಣವಾದ ಕೊಲೆಯನ್ನು ಮಾಡಲಾರಂಭಿಸಲು, ದರಾಯಸನ ಸೇನೆಯು ಕಂಗೆಟ್ಟು ಸತ್ತೆ ಕೆಟ್ಟೆನೆಂದು ಎತ್ತೆತ್ತಲೋ ಓಡಲಾರಂಭಿಸಿತು. ಆದರೆ ಶಿಕಂದರನ ಸೇನಾಪತಿಯಾದ ಪಾರ್ಮೆನಿಯೋನು ಕಾದುತ್ತಿರುವ ತಾಣದಲ್ಲಿ ಶತ್ರುಸೇನೆಯ ರಾವುತರು ಅಟ್ಟಿಬಂದು ಒಳ್ಳೇ ಶೌರ್ಯದಿಂದ ಕಾದಿ ಆ ಸೇನಾಪತಿಯನ್ನು ಮುತ್ತಿರಲಾಗಿ, ಆವನು ತನ್ನನ್ನೂ ತನ್ನ ಬಳಿಯಲ್ಲಿರುವ ಸಾಮಗ್ರಿ ಸಂಚಯವನ್ನೂ ಕಾಯಬೇಕಾಗಿ ಸಹಾಯವನ್ನು ಕಳಿಸಿರೆಂದು ಶಿಕಂದರನಿಗೆ ಹೇಳಿ ಕಳಿಸಿದನು. ಅದಕ್ಕೆ ಶಿಕಂದರನು ಪ್ರತ್ಯುತ್ತರವಾಗಿ ಹೇಳಿಕಳಿಸಿದ್ದೇನಂದರೆ "ಸಾಮಗ್ರಿಯು ಹೋಗುವದೆಂಬ ಚಿಂತೆ ಮಾಡಬೇಡಿರಿ. ನಿಮ್ಮ ಸಂರಕ್ಷಣವನ್ನೂ ನಿಮ್ಮ ಸೇನೆಪಡೆಯ ಸಂರಕ್ಷಣವನ್ನೂ ನೀವು ಮಾಡಿಕೊಳ್ಳುವಿರೆಂದು ನಾನು ನಿಶ್ಚಯವಾಗಿ ನಂಬಿದ್ದೇನೆ. ಸಾಮಗ್ರಿಯು ಹೋಗಲಿ; ಅದರ

ಚಿಂತೆಯನ್ನು ಬಿಟ್ಟು ನೀವು ಯುದ್ಧ ಮಾಡಿರಿ. ಯುದ್ಧವು ಮುಗಿದ ಬಳಿಕ ಶತ್ರುಗಳ ಸರ್ವಸ್ವವನ್ನು ನಾವು ಸ್ವಾಧೀನ ಮಾಡಿಕೊಳ್ಳುವಾಗ ನಮ್ಮ ಸಾಮಗ್ರಿಯಾದರೂ ಕೊನೆಯಲ್ಲಿ ನಮ್ಮದೇ ಆಗುವದು." ಹುರುಪು ಬಂದ ಹೊತ್ತಿನಲ್ಲಿ ವಿಶ್ರಾಂತಿಯ ಅಪೇಕ್ಷೆಯನ್ನು ಮಾಡದೆ ಶಿಕಂದರನು ಶತ್ರುಸೇನಾ ಸಂಹಾರವನ್ನು ಮಾಡುತ್ತ ದರಾಯುಸನಿರುವ ಸ್ಥಳದ ಸಮೀಪಕ್ಕೆ ಬಂದದ್ದನ್ನು ಕಂಡು, ಆ ದೈವಹತನಾದ ಸಾರ್ವಭೌಮನು ಮತ್ತೆ ಓಡಿದನು. ಸೈನ್ಯವೆಲ್ಲಾ ಓಡಿತು. ಓಡಿಹೋದರೆ ಶತ್ರುವು ಬಿಡುವನೆ? ಕಾಲಧಾವತಿಯೋ ಕತ್ತೆಂಭಟ್ಟಾ. ಅಲ್ಪಕಾಲದಲ್ಲಿಯೇ ಆ ಓಡುತ್ತಿರುವ ಸೈನ್ಯದ ಇತಿಶ್ರೀಯಾಯಿತೆಂದು ಹೇಳಬೇಕಾಗಿಲ್ಲ. ಗಾಗಾಮೇಲಾದ ಯುದ್ಧದಲ್ಲಿ ದರಾಯುಸನು ಸಂಪೂರ್ಣವಾಗಿ ಸೋತುಹೋದನು. ಪರಿಸ್ಥಿತಿಯು ಬುಡಮೇಲಾಗಿಹೋಯಿತು. ಕಳೆದುಹೋದ ಕ್ಷಣದಲ್ಲಿ ಸಾರ್ವಭೌಮನಾಗಿದ್ದ ದರಾಯುಸ ಬಾದಶಹನು ಈ ಕ್ಷಣದಲ್ಲಿ ಗತಿಗೇಡಿಯಾಗಿ, ಕುಳಿತು ವಿಶ್ರಾಂತಿಯನ್ನು ಹೊಂದಲು ಸ್ಥಳ ಕಾಣದೆಹೋದನು. ಅವನ ಪ್ರಜಗಳೇ ಅವನಿಗೆ ಕುಡಿಯಲು ನೀರು ಕೊಡದಾದರು.

ಗಾಗಾಮೆಲಾದ ವಿಜಯದ ಕೀರ್ತಿಯೇ ವಿದ್ಯುತ್ ಪ್ರವಾಹದ ವೇಗದಿಂದ ಎಣ್ದೆಸೆಗಳಲ್ಲಿ ಹರಡಿಕೊಂಡು, ಇನ್ನು ಮೇಲೆ ಶಿಕಂದರನೇ ಸಮಸ್ತವಾದ ಪೃಥ್ವಿಗೆ ನಾಥನಾದನೆಂದು ಸಾರಿತು. ಶಿಕಂದರನ ಆಜ್ಞಾಪತ್ರ ಶಾಸನಗಳ ಹಾದಿಯನ್ನು ನೋಡದೆ, ದೇಶದೇಶಗಳಲ್ಲಿಯ ಪ್ರಜಾಜನರು ಶಿಕಂದರನೇ ಸಾರ್ವಭೌಮನೆಂದು ಒಪ್ಪಿಕೊಂಡು, ಅವನಿಗೆ ಸತ್ಕಾರವನ್ನೀಯುಲು ಸರ್ವರೂ ಸಿದ್ಧತೆಯನ್ನು ಮಾಡಿಟ್ಟುಕೊಂಡಿದ್ದರು. ಆ ದಿವಸ ಶಿಕಂದರನಿಗೆ ಅತ್ಯಾನಂದವಾಗಿಹೋಯಿತು. ಸಿಂಧು ನದದಿಂದ ಭೂಮಧ್ಯಸಮುದ್ರದವರೆಗೆ ಹಬ್ಬಿರುವ ಮಹಾಸಾಮ್ರಾಜ್ಯದ ಅಧಿಪತಿಯೇ ಅವನಾದನು. ಸೈನಿಕನೊಬ್ಬೊಬ್ಬನ ಪಾಲಿಗೆ ಬಂದ ಸುಲಿಗೆಯು ದೊಡ್ಡದೊಂದು ಐಶ್ವರ್ಯವೇ ಆಗಿತ್ತು. ಇನ್ನು ಮುಂದೆ ಯುದ್ಧದ ಚಿಂತೆ ಯಾರಿಗೂ ಇಲ್ಲ. ರಾಜ್ಯದಲ್ಲೆಲ್ಲ ಮೆರೆಯುತ್ತ ಸಂಚರಿಸುವೆನೆಂಬ ಉಬ್ಬೇ ಉಬ್ಬು. ಬಾಬಿಲೋನ ಎಂಬ ಪುರಾತನವಾದ ರಾಜಧಾನಿಗೆ ಶಿಕಂದರಬಾದಶಹನು ಬಿಜಯ ಮಾಡುವನೆಂಬ ವಾರ್ತೆಯನ್ನು ಕೇಳಿ, ಪುರವಾಸಿಗಳು ನಗರ ಶೃಂಗಾರವನ್ನು ಮಾಡಿ ಭಕ್ತಿ

ಯಿಂದಲೂ, ಆನಂದದಿಂದಲೂ, ಉತ್ಸವದಿಂದಲೂ ಆ ನವೀನನಾದ ನರಾಧಿಪನನ್ನು ಸತ್ಕರಿಸಿ ಸಾರ್ವಭೌಮನಿಗುಚಿತವಾದ ಸ್ವಾಗತವನ್ನೂ ಮಾನಮರ್ಯಾದೆಗಳನ್ನೂ ಕೊಟ್ಟರು. ಆ ಪುರವಾಸಿಗಳ ಸತ್ಕಾರದಿಂದ ಪರಮಸಂತುಷ್ಟನಾದ ಸಿಕಂದರ ಬಾದಶಹನು ಸಾಧುಸಂತರನ್ನೂ, ಪಂಡಿತಶಾಸ್ತ್ರಿಗಳನ್ನೂ, ವೃತ್ತಿ-ಸ್ವಾಸ್ತಿಗಳುಳ್ಳ ಮಹಾಜನರನ್ನೂ ಆದರದಿಂದ ಬೀಳ್ಕೊಂಡು ಅವರೆಲ್ಲರಿಗೆ ಧನಕನಕ ವಸ್ತ್ರಾಭರಣ ಬಿರುದಾವಳಿ ಮುಂತಾದವುಗಳನ್ನಿತ್ತು ಸಂಭಾವಿಸಿದನು. ಪೂರ್ವದ ಮಹಾ ಸಾರ್ವಭೌಮರ ರಾಜಧಾನಿಯಾಗಿದ್ದ ಆ ಬಾಬಿಲೋನ ನಗರವೇ ಅಂದಿನಿಂದ ತನ್ನ ರಾಜಧಾನಿಯಾಯಿತೆಂದು ಬಾದಶಹನು ಹೇಳಿದ ಕೂಡಲೆ, ಅಲ್ಲಿಯವರಿಗೆ ಪರಮಾವಧಿಯ ಸಂತೋಷವಾಯಿತು. ಗುಣಲೇಶವಾದರೂ ಇಲ್ಲದೆ ಕೇವಲ ಆಕಸ್ಮಿಕವಾದ ಜನ್ಮಮಾತ್ರದಿಂದಲೇ ರಾಜನಾಗಿರುವ ಕ್ಷುದ್ರನಾದ ಪ್ರಾಣಿಯು ಪರಪೀಡಾಕಾರಕನಾಗಿರುವನಲ್ಲದೆ, ಅವನಿಂದ ಲೋಕಕಲ್ಯಾಣದ ಕೆಲಸಗಳಾಗುವದಿಲ್ಲ. ದರಾಯುಸನು ತಾನು ಸಾರ್ವಭೌಮ ಪದಕ್ಕೆ ಬಂದ ನಂತರ ಬಾಬಿಲೋನಿಯದ ಜನರ ಧರ್ಮವನ್ನು ಕೆಡಿಸಲಿಕ್ಕೆ ಪ್ರಯತ್ನ ಮಾಡಿದ್ದಲ್ಲದೆ, ಆರಾಧ್ಯ ದೇವತೆಯಾದ ಬೇಲಾನೆಂಬ ದೇವರ ಸಂಸ್ಥಾನಕ್ಕೆ ನಡೆದಿರುವ ವೃತ್ತಿಗಳನ್ನೆಲ್ಲ ಅಪಹರಿಸಿಕೊಂಡು ಅಲ್ಲಿಯವರ ಮನಸ್ಸುಗಳನ್ನು ಬಹುಪರಿಯಾಗಿ ನೋಯಿಸಿದ್ದನು. ಶಿಕಂದರ ಬಾದಶಹನು ಬಾಬಿಲೋನದ ಜನರ ಧರ್ಮದಲ್ಲಿ ತಾನು ಕೈಹಾಕುವದಿಲ್ಲವೆಂದೂ ಅವರ ಧರ್ಮಸಂಸ್ಥೆಗಳಿಗೆ ನಡೆಯುತ್ತಿರುವ ವೃತ್ತಿ-ಸ್ವಾಸ್ತಿಗಳನ್ನು ಯಥಾಪ್ರಕಾರವಾಗಿ ನಡಿಸುವೆನೆಂದೂ ಆಶ್ವಾಸನವನ್ನಿತ್ತದ್ದನ್ನು ಕೇಳಿಯಂತೂ ಸಾಕ್ಷಾತ್ ಸ್ವರ್ಗಾಧಿಪತಿಯೇ ಅವತಾರ ತಾಳಿ ಶಿಕಂದರನ ರೂಪದಿಂದ ತಮ್ಮಲ್ಲಿಗೆ ಬಂದಿರುವನೆಂದು ಅಲ್ಲಿಯವರು ತಿಳಕೊಂಡು, ನವೀನನಾದ ಬಾದಶಹನನ್ನು ಮನಮುಟ್ಟಿ ಹರಸಿದರು. ಅಲ್ಲಿಂದ ಶಿಕಂದರನು ದರಾಯುಸನ ರಾಜಧಾನಿಯಾಗಿದ್ದ ಸೂಸಾ ಪಟ್ಟಣಕ್ಕೆ ಆಗಮನ ಮಾಡಿ ಅಲ್ಲಿಯ ರಾಜಮಂದಿರದಲ್ಲಿ ಒಂದೆರಡು ದಿವಸ ಇದ್ದು, ಆ ಮೇಲೆ ಪರ್ಸಿಪಾಲಿ ಎಂಬ ಪಟ್ಟಣಕ್ಕೆ ಹೋಗಿ, ಅಲ್ಲಿ ತನ್ನ ಡಂಕೆಯನ್ನು ಹೊಡಿಸಿ ಮತ್ತೆ ಉತ್ತರಾಭಿಮುಖನಾಗಿ ಹೊರಟು ಬ್ಯಾಕ್ಟ್ರಿಯಾ ಪ್ರಾಂತಕ್ಕೆ ಬಂದನು.

ದರಾಯುಸನ ಬೆನ್ನಟ್ಟಿ ಅವನನ್ನು ಬಂದಿಯಾಗಿ ಹಿಡತರಬೇಕೇನೆಂದು

ಸೇನಾಪತಿಯು ಕೇಳಲಾಗಿ, ಶಿಕಂದರ ಬಾದಶಹನು ನಿರಾತಂಕವಾದ ಮನಸ್ಸಿನಿಂದ ಹೇಳಿದ್ದು: "ಯಾತಕ್ಕೆ? ದರಾಯುಸನಲ್ಲೇನು ಉಳಿದದೆ? ಗಾಯವನ್ನು ತಾಳಿದ ಸರ್ಪವು ಅಡಗಿಕೊಂಡಲ್ಲಿಯೇ ಇರುವೆಗಳ ಬಾಧೆಯಿಂದ ಸತ್ತುಹೋಗುವಂತೆ ದರಾಯುಸನು ವಿಶ್ರಾಂತಿಯ ಅಭಾವ, ಮನಸ್ತಾಪ, ಸುಖೋಪಭೋಗಗಳ ನ್ಯೂನತೆ ಮುಂತಾದ ಹಲವು ದುಃಖಗಳಿಂದ ಸಂಪೀಡಿತನಾಗಿ ತನ್ನಷ್ಟಕ್ಕೆ ತಾನೇ ಬೇಗನೆ ಮೃತ್ಯುವಶನಾಗುವದು ಗಟ್ಟಿ." ಬಾದಶಹನ ತರ್ಕದಲ್ಲಿ ದೋಷವಿದ್ದಿಲ್ಲ. ಗತಿಹೀನನಾಗಿ ತಿರುಗುತ್ತಿದ್ದ ದರಾಯುಸನ ಪರಿವಾರದವರು ಮೆಲ್ಲಮೆಲ್ಲನೆ ಕಾಲುದೆಗೆದರು. ಕೂಳಿಲ್ಲದ್ದಕ್ಕಾಗಿ ಸೈನ್ಯದವರೆಲ್ಲ ಕಂಡ ದಾರಿಯನ್ನು ಹಿಡಿದು ಹೋಗಿಬಿಟ್ಟರು. ಕುಳ್ಳಿರುವೆನೆಂದರೆ ಹಗಲು ಗಿಡದ ನೆಳಲು ಕೂಡ ಅವನಿಗೆ ಸಿಕ್ಕದಂತಾಯಿತು. ರಾತ್ರಿಯಲ್ಲಿ ಮಲಗುವೆನೆಂದರೆ ಸಮವಾಗಿದ್ದ ನೆಲ ಸಿಕ್ಕರೆ ಅವನಿಗೆ ಸಾಕಾಗಿತ್ತು. ಅಲ್ಪನಾಗಿದ್ದವನನ್ನು ಮೇಲಕ್ಕೆತ್ತಿಕೊಂಡು ತನ್ನ ರಾಜ್ಯದಲ್ಲಿ ಅತಿ ದೊಡ್ಡದಾದ ಅಧಿಕಾರವನ್ನು ಕೊಟ್ಟು ಕಾಪಾಡಿದಂಥ ತನ್ನ ಪಟ್ಟಶಿಷ್ಯನ ಬಳಿಗೆ ಹೋಗಿ ಅವನಲ್ಲಿ ನಾಲ್ಕೊಪ್ಪತ್ತು ವಿಶ್ರಾಂತಿಯನ್ನಾದರೂ ಹೊಂದುವೆನೆಂದು ದರಾಯುಸನು ಹೋಗಲಾಗಿ, ಆ ಅಧಮನು ಅವನನ್ನು ತನ್ನ ಅಂಗಳದಲ್ಲಿ ನಿಲ್ಲಗೊಡಲಿಲ್ಲ. ತನ್ನೊಡನೆ ಒಂದೇ ಜೀವನಾಗಿ ವರ್ತಿಸುತ್ತಿದ್ದ ಬೇಝುಸನೆಂಬ ಕ್ಷತ್ರಪನ ಬಳಿಗೆ ಗತವೈಭವನಾದ ದರಾಯುಸನು ಹೋಗಲಾಗಿ ಆ ದುರಾತ್ಮನು ಅವನನ್ನು ಬಂದಿವಾಸದಲ್ಲಿಟ್ಟು ಭಾರವಾದ ಬೇಡಿಗಳಿಂದ ಬಿಗಿದುಬಿಟ್ಟನು. "ಅಪ ಭಲಾ ತೊ ಜಗ ಭಲಾ!" ಎಂಬಂತೆ ದರಾಯುಸನ ದೈವಬಲವು ಪ್ರಬಲವಾಗಿದ್ದಾಗ ಎಲ್ಲರೂ ಅವನ ಆಜ್ಞೆಯೆಂದರೆ ದೊಡ್ಡದೊಂದು ಪ್ರಸಾದವೇ ಎಂದು ತಿಳಿದವರಂತೆ ನಟಿಸುತ್ತಿದ್ದರು; ಬಾದಶಹನ ಹಿತಕ್ಕಾಗಿಯೇ ತಾವು ಜೀವಿಸುತ್ತಿರುವೆವೆಂದು ತೋರಿಸುತ್ತಿದ್ದರು. ಸೂರ್ಯಚಂದ್ರರೂ, ಮೇಘಮಾರುತರೂ, ಭೂದೇವತೆ ವನದೇವತೆಯರೂ ಬಾದಶಹನ ಹಿತಮಾಡುವದರಲ್ಲಿಯೇ ಯಾವಾಗಲೂ ನಿರತರಾಗಿರುವರೆಂದು ಕವಿಗಳು ವರ್ಣಿಸಿದರು. ಪಾಪ! ವಿಪನ್ನಾವಸ್ಥನಾದ ದರಾಯುಸನ ಆಜ್ಞೆಯನ್ನೇಕೆ, ಪ್ರಾರ್ಥನೆಯನ್ನಾದರೂ ಕಿವಿಮೇಲೆ ಹಾಕಿಕೊಳ್ಳುವವರಿಲ್ಲ. ಬಾದಶಹನ ಹಿತಕ್ಕಾಗಿ ಜೀವಿಸಿರುವೆನೆಂದು ಬೊಗಳುತ್ತಿರುವ ಶ್ವಾನಸಮಾನನಾದ

ನರಾಧಮನೊಬ್ಬನು ಆ ತನ್ನ ಅನ್ನದಾತನನ್ನು ಬಂದಿವಾಸದಲ್ಲಿರಿಸಿದನು. ಸೂರ್ಯನು ಅವನ ಮೋತಿಯನ್ನು ಸುಟ್ಟನು; ಚಂದ್ರನು ಅವನ ದೇಹದಲ್ಲಿ ಸುಂದು ಹುಟ್ಟುವಂತೆ ಮಾಡಿದನು; ವಾಯುವು ದರಾಯುಸನ ಜಡೆಗಟ್ಟಿದ ಗಡ್ಡದಲ್ಲಿ ಮಣ್ಣು ತೂರಿದನು. ಲೋಕಕ್ಕೆ ಭೀಷಣನಾಗಿದ್ದ ಯಮದೇವನೊಬ್ಬನೇ ದರಾಯುಸನಿಗೆ ಒಳ್ಳೆಯವನು. ಅವನೇ ಆ ದುರ್ದೈವಿಯ ದುಃಖಗಳ ಪರಿಮಾರ್ಜನವನ್ನು ಮಾಡತಕ್ಕವನು. ದರಾಯುಸನಾದರೂ ನೀನೇ ಗತಿಯೆಂದು ಅವನಿಗೆ ಶರಣಾಗತನಾದನು. ಬಾದಶಹನ ಹಸ್ತಾಕ್ಷರ ರಾಜಮುದ್ರೆಗಳ ಉಪಯೋಗವನ್ನು ಮಾಡಿ, ಉಳಿದ ಕ್ಷತ್ರಪರಿಂದ ಏನಾದರೂ ಪ್ರಾಪ್ತಿಯನ್ನು ಮಾಡಿಕೊಳ್ಳಬೇಕೆಂತಲೂ ಶಿಕಂದರ ಬಾದಶಹನು ಕೇಳಿದಾಗ ಅವನನ್ನು (ದರಾಯುಸನನ್ನು) ಸ್ವಾಧೀನ ಮಾಡಿ ಏನಾದರೂ ಸಂಭಾವನೆಯನ್ನು ಪಡೆಯಬೇಕೆಂದೂ ಆಲೋಚಿಸಿ ಆ ಸ್ವಾಮಿದ್ರೋಹಿಯಾದ ಬೇಝುಸ್ಸನು ದರಾಯುಸನನ್ನು ಸೆರೆಯಲ್ಲಿ ಹಿಡಿದಿದ್ದನು. ದರಾಯುಸನೂ ಬೇಝುಸ್ಸನೂ ಕೂಡಿ ಶಿಕಂದರನ ವಿರುದ್ಧವಾಗಿ ಬಂಡುಮಾಡುವರೆಂಬ ವಾರ್ತೆಯನ್ನು ಕೇಳಿ ಶಿಕಂದರನು ಬ್ಯಾಕ್ಟ್ರಿಯಾ ಪ್ರಾಂತಕ್ಕೆ ಬರಲಾಗಿ ಬೇಝುಸನು ಬೆದರಿ ಓಡಿದನು. ಓಡುವಾಗ ದರಾಯುಸನನ್ನು ಸಂಗಡ ಕಟ್ಟಿಕೊಂಡು ಹೋಗಬೇಕೆಂಬ ಯೋಚನೆಯನ್ನು ಮಾಡಲು ಅದಕ್ಕೆ ದರಾಯುಸನು ಒಪ್ಪಲಿಲ್ಲಾದ್ದರಿಂದ ಆ ಘಾತಕನು ದೈವಹತನಾದ ಆ ಸಾರ್ವಭೌಮನನ್ನು ಖಡ್ಗದಿಂದಿರಿದು ತಾನು "ಗಚ್ಛ" ಮಾಡಿದನು. ಶಿಕಂದರಬಾದಶಹನು ದರಾಯುಸನಿದ್ದಲ್ಲಿಗೆ ಬರುವಷ್ಟರಲ್ಲಿ ಆ ಗತವೈಭವನಾದ ರಾಜನು ಗತಪ್ರಾಣನಾಗಿ ಗತಿ ಇಲ್ಲದೆ ಬಿದ್ದುಕೊಂಡಿದ್ದನು. ಆ ಹೃದಯದ್ರಾವಕವಾದ ನೋಟವನ್ನು ನೋಡಿ ಶಿಕಂದರನು ದುಃಖಾರ್ತನಾಗಿ ಕಣ್ಣೀರು ಸುರಿಸಿದನು ಅಸ್ತವ್ಯಸ್ತವಾಗಿ ಬಿದ್ದಿರುವ ಆ ಮಹಾರಾಯನ ಪ್ರೇತಕ್ಕೆ ಶಿಕಂದರ ಬಾದಶಹನು ತನ್ನ ಅನರ್ಘವಾದ ಉತ್ತರೀಯವನ್ನು ಹೊಚ್ಚಿ "ಬಂಧುವೆ, ನನಗೆ ಶರಣಾಗತನಾಗಿ ಬಂದಿದ್ದರೆ, ನಿನಗಿಂಥ ಶೋಚನೀಯವಾದ ಗತಿಯು ಸರ್ವಥಾ ಪ್ರಾಪ್ತವಾಗುತ್ತಿದ್ದಿಲ್ಲ" ಎಂಬ ಉದ್ಗಾರವನ್ನು ತೆಗೆದು, ಪ್ರೇತಕ್ಕೆ ಅಂತ್ಯವಿಧಿಯಾಗಲೆಂದು ತನ್ನ ಸೇನಾಪತಿಗೆ ಅಜ್ಞಾಪಿಸಿದನು. ಮಹಾರಾಜನಿಗುಚಿತವಾದ ಸ್ಮಶಾನಯಾತ್ರೆಯಾಯಿತು. ಸ್ವತಃ ಶಿಕಂದರನು ಸಕಲರಾದ ಅಧಿಕಾರಿ

ಗಳನ್ನು ಕೂಡಿಕೊಂಡು ಪ್ರೇತವನ್ನು ಸ್ಮಶಾನಕ್ಕೆ ವಂಬಟ್ಟಿಸಿದನು. ಉತ್ತರ ಕ್ರಿಯಾದಿಗಳು ದರಾಯುಸನ ಧರ್ಮಾನುಸಾರವಾಗಿ ಒಳ್ಳೇ ವಿಧಾನಪೂರ್ವಕ ವಾಗಿ ನಡೆದವು. ಆ ಕಾಲಕ್ಕಾದ ದಾನಧರ್ಮಗಳಿಗೆ ಅಳತೆಯಿಲ್ಲ. ಆ ಸುಸಂಧಿಯಲ್ಲಿ ಶರಣೆಂದು ಬಂದ ದರಾಯುಸನ ಸರದಾರರಿಗೆಲ್ಲ ಕ್ಷಮೆ ದೊರ ಕಿತು. ಅವರವರ ವೃತ್ತಿ-ಸ್ವಾಸ್ತಿಗಳೆಲ್ಲ ಅವರಿಗೆ ನಡೆದವು. ಆಜ್ಞಾನು ವರ್ತಿಗಳಾಗಿರುವೆವೆಂದು ಹೇಳಿಕೊಂಡವರಿಗೆ ಅವರವರ ಅಧಿಕಾರಗಳು ಕೊಡ ಲ್ಪಟ್ಟವು. ಲೋಕವೆಲ್ಲ ಶಿಕಂದರನನ್ನು ಹೊಗಳಿತು. ಕವಿಗಳು ಹಾಡಿದರು.

पराक्रमेणापि जितां समीहते । नयेन जेतुं जगतीं पुनः प्रभुः ॥

ದರಾಯುಸನ ಅಂತ್ಯವಿಧಿಗಳಾದ ಬಳಿಕ ಶಿಕಂದರ ಬಾದಶಹನು ಕ್ಯಾಸ್ಪಿ ಯನ್ ಸಮುದ್ರದ ದಕ್ಷಿಣತೀರದಲ್ಲಿರುವ ಹಿರ್‌ಕ್ಯಾನಿಯಎಂಬ ಪ್ರಾಂತಕ್ಕೆ ಬಂದು ಅಲ್ಲಿಯ ಪ್ರಜಾಜನರನ್ನೊಡಂಬಡಿಸಿ, ಅಫಘಾನಿಸ್ಥಾನದ ಪಶ್ಚಿಮ ಸೀಮೆಯಲ್ಲಿರುವ ಆರ್ಶಕೋವನ (ಈಗಿನ ಹೀರಾತ) ವೆಂಬ ಪಟ್ಟಣಕ್ಕೆ ಬಿಜಯಮಾಡಿದನು. ಅಲ್ಲಿಯೂ ಪ್ರಜಾಜನರ ಸಂಪೂಜನವನ್ನು ಸ್ವೀಕರಿಸಿ ಕೊಂಚ ದಕ್ಷಿಣಕ್ಕೆ ಸಾಗಿಹೋಗಿ ಪ್ರೋಪದಾಸೀಯವೆಂಬ ಪಟ್ಟಣಕ್ಕೆ ಬಂದನು. ಆ ಪಟ್ಟಣದಲ್ಲಿ ಬಾದಶಹನಿರುವಾಗ ಒಂದು ಶೋಚನೀಯವಾದ ಸಂಗತಿಯು ಸಂಭವಿಸಿತು. ಶಿಕಂದರನು ಆಸಿಯಾಖಂಡದ ಸಾರ್ವಭೌಮನಾದದ್ದು ನಿರ್ವಿವಾದವಾದ ಸಂಗತಿಯಷ್ಟೆ ? ಅಲ್ಲಿಯ ಪ್ರಜಾಜನರನ್ನು ಒಡಂಬಡಿಸ ಲೆಂದಾಗಲಿ, ಪೂರ್ವದೇಶೀಯರಾದ ಪರ್ಶಿಯನ್ನರವೇಷಗಳು ಅಂದವಾಗಿಯೂ ಸೌಕರ್ಯವುಳ್ಳಂಥವಾಗಿವೆಂದಾಗಲೀ ಐಶ್ವರ್ಯದ್ಯೋತಕವೆಂದಾಗಲಿ, ಆ ಬಾದಶಹನು ದರಾಯುಸನಂಥ ವೇಷಾಲಂಕಾರಗಳನ್ನು ಧರಿಸುತ್ತಲಿದ್ದನು. ಮಾಸಿಡೋನಿಯದ ಕ್ಷುದ್ರರಾಜನಿಗಿಂತ ಅಧಿಕವಾದ ದರ್ಪವು ಸಾರ್ವಭೌಮ ನಾದ ಶಿಕಂದರನಲ್ಲಿ ವ್ಯಕ್ತವಾದದ್ದು ಆಶ್ಚರ್ಯವಲ್ಲ. ಬಾದಶಹನ ವೇಷಾ ಚರಣಗಳು, ಅವನ ಅನುಯಾಯಿಗಳಾದ ಗ್ರೀಕಜಾತಿಯ (ಮಾಸಿಡೋನಿ ಯಾದ) ಅಧಿಕಾರಿಗಳಿಗೆ ಸರಿಬರಲಿಲ್ಲ. ಅವರು ಬಾದಶಹನ ಜೀವಕ್ಕೆ ಅಪಾಯವನ್ನು ಮಾಡತಕ್ಕದ್ದೆಂದು ಒಳಸಂಚು ನಡಿಸಿದರು. ಶಿಕಂದರನ ಮುಖ್ಯ ಸೇನಾಪತಿಯಾದ ಪಾರ್ಮೆನಿಯೋನ ಮಗನಾದ ಫೀಲೋಟನೆಂಬ ಸರದಾರನೇ ಆ ಸಂಚಿನ ಪ್ರವರ್ತಕನಾಗಿರುವದನ್ನು ಕಂಡು ಬಾದಶಹನು

ಆ ದ್ರೋಹಿಯಾದ ತರುಣನಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ವಿಧಿಸಿದನು. ಫೀಲೋಟನು ಶಿಕಂದರನ ಕೈಕೆಳಗಿನ ನಾಮಾಂಕಿತನಾದ ದಳವಾಯಿ ಯಾಗಿದ್ದನು. ವೀರರೆಲ್ಲರ ಮೇಲೆ ಆ ಬಾದಶಹನ ಪ್ರೇಮವಿರುವಂತೆಯೇ ಫೀಲೋಟನ ಮೇಲಾದರೂ ಇತ್ತು. ವಿಶೇಷವಾದ ಪ್ರೇಮವೂ ಇತ್ತು. “ಅತಿಪರಿಚಯಾದವಜ್ಞಾ” ಎಂಬಂತೆ ಫೀಲೋಟನು ಶಿಕಂದರನೊಡನೆ ಹೆಮ್ಮೆಯಿಂದ ವರ್ತಿಸುತ್ತಿದ್ದನು. “ಅಹಂಕಾರಕ್ಕೆ ಉದಾಸೀನತೆಯೇ ಮಟ್ಟು” ಎಂಬದನ್ನರಿತು ಶಿಕಂದರನು ಫೀಲೋಟನ ಅಪ್ರಾಸಂಗಿಕವಾದ ಅಸಭ್ಯವರ್ತನಗಳನ್ನು ಲಕ್ಷಿಸದಿದ್ದದ್ದಕ್ಕಾಗಿ ಆ ಉನ್ಮತ್ತನಾದ ತರುಣನು ರಾಜನಿಗೆ ದ್ರೋಹವನ್ನು ಕಲ್ಪಿಸಬೇಕೆಂದು ಮಾಡಿದ ಅಪರಾಧಕ್ಕಾಗಿ ಅವನಿಗಾದ ಶಾಸನವು ಉಚಿತವಾದದ್ದೇ ಸರಿ. ಆದರೆ ಇದರಿಂದ ಒಂದು ಅನರ್ಥವುಂಟಾಯಿತು. ಮಗನಿಗೆ ದೇಹಾಂತ ಶಾಸನವಾದ ವರ್ತಮಾನ ವನ್ನು ಕೇಳಿ ತಂದೆಯಾದ ಪಾರ್ಮೆನಿಯೊ ಸೇನಾಪತಿಯು ಸಿಟ್ಟಾಗಿ ಬಂಡು ಮಾಡುವನೆಂಬುದನ್ನು ತರ್ಕಿಸಿ, ಶಿಕಂದರನ ಬಳಿಯಲ್ಲಿರುವ ಅಧಿಕಾರಿ ಗಳೆಲ್ಲರೂ ಕೂಡಿ ಪಾರ್ಮೆನಿಯೋನಿಗಾದರೂ ದೇಹಾಂತ ಶಾಸನವೇ ಆಗ ತಕ್ಕದ್ದೆಂದು ನಿರ್ಣಯಿಸಿದರು. ಆಗಿನ ಪರಿಸ್ಥಿತಿಯಾದರೂ ಚಮತ್ಕಾರ ವಾದದ್ದಾಗಿತ್ತು. ಅದಾಗಲೇ ತಾನು ಗೆದ್ದುಕೊಂಡಿರುವ ಹೊಸ ರಾಜ್ಯದಲ್ಲಿ ತನ್ನ ಸೇನಾಪತಿಯೇ ಬಂಡುಗಾರನಾಗಿ ನಿಂತುಕೊಂಡರೆ ಸೆರಗಿನಲ್ಲಿ ಬೆಂಕಿ ಯನ್ನೇ ಕಟ್ಟಿಕೊಂಡಂತಾಗುವದೆಂದು ನೆನೆದು, ಶಿಕಂದರನಾದರೂ ಅನಿವಾರ್ಹ ಕ್ಕಾಗಿ ಅಧಿಕಾರಿಗಳ ನಿರ್ಣಯಕ್ಕೆ ಅನುಮೋದನವನ್ನಿತ್ತನು. ಆ ಸಮಯ ದಲ್ಲಿ ಪಾರ್ಮೆನಿಯೋ ಸೇನಾಪತಿಯು ರಾಜನ ಪ್ರತಿನಿಧಿಯಾಗಿ ಟೈಗ್ರಿಸ ನದೀತೀರದಲ್ಲಿರುವ ಎಕ್‌ಬಟಾನಾ ಪಟ್ಟಣದಲ್ಲಿದ್ದುಕೊಂಡು ರಾಜ್ಯದ ವ್ಯವಸ್ಥಾ ನಿರೀಕ್ಷಣವನ್ನು ಮಾಡುತ್ತಿದ್ದನು. ಆ ವೃದ್ಧನಾದ ಮಹನೀಯನನ್ನು ಶಿಕಂದರನ ಕಡೆಯಿಂದ ಬಂದ ಅಧಿಕಾರಿಯೊಬ್ಬನು ಕೆಲವೊಂದು ಮಿಷದಿಂದ ತಂಬುವಿನಿಂದ ಹೊರಗೆ ಕರೆದಾಕ್ಷಣವೇ ಕೊಲೆಗಡಕರು ಅಲ್ಲಿಯೇ ಅವನನ್ನು ಕಡಿದುಹಾಕಿದರು ( ಕ್ರಿ. ಪೂ. ೩೩೦ ). ನಿರ್ಘೃಣವಾದ ರಾಜಕಾರಣವೆ, ನಿನಗೆ ತಲೆಯೊಡೆದವರೂ ಒಂದೇ, ಔಷಧೋಪಚಾರಗಳನ್ನು ಮಾಡಿದವರೂ ಒಂದೇ ಅಲ್ಲವೆ ? ಫಿಲ್ಲಿಪರಾಜನನ್ನೂ ಶಿಕಂದರನನ್ನೂ ಏಕನಿಷ್ಠೆಯಿಂದ

ಸೇವಿಸಿದವನಾದ ಆ ಪಾರ್ಮೆನಿಯೋನಿಗೆ ಇಂಥ ಫಲಪ್ರಾಪ್ತಿಯೆ? ಪಾರ್ಮೆನಿಯೋನ ಕೊಲೆಯು ಕಲಂಕವು ಶಿಕಂದರ ಬಾದಶಹನ ಅತ್ಯುಜ್ವಲವಾದ ಕೀರ್ತಿಗೆ ದುರ್ನಿವಾರವಾಗಿ ತಗಲಿಕೊಂಡಿದ್ದು, ಆತನ ಇತಿಹಾಸವನ್ನು ಲೋಕವು ಮರೆಯುವವರೆಗೂ ಆ ಕಲಂಕವು ಜನರ ಕಣ್ಣುಗಳಿಗೆ ಕಟ್ಟಿದಂತಾಗಿ ಉಳಿಯುವದು.

ಅಲ್ಲಿಂದಲಾ ಬಾದಶಹನು ಸಮಗ್ರವಾದ ಅಫಗಾನಿಸ್ಥಾನದಲ್ಲಿ ಸಂಚರಿಸಿ ತಾರ್ತರೀ ದೇಶಕ್ಕೆ ಹೋದನು. ಅಲ್ಲಿಯಾದರೂ ಅವನಿಗೆ ವಿಶೇಷವಾದ ಆತಂಕವಾಗಲಿಲ್ಲ. ಸೋಗ್ಡಿಯಾನಾ ಎಂಬ ಕೋಟೆಯವರು ಮಾತ್ರ ಶಿಕಂದರನಿಗೆ ಬೇಗನೆ ಒಳಗಾಗಲಿಲ್ಲ. ಕೋಟೆಯು ಅಸಾಧ್ಯವಾದ ಪರ್ವತದ ಅತ್ಯುನ್ನತವಾದ ಶಿಖರದ ಮೇಲೆ ಕಟ್ಟಿದ್ದಾಗಿತ್ತು. ಒಳಗೆ ಯಥೇಷ್ಟವಾದ ನೀರಿನ ಸಂಚಯವೂ ವಿಪುಲವಾದ ಅನ್ನಸಾಮುಗ್ರಿಯೂ ತುಂಬಿರುವದರಿಂದ ತಮಗೆ ಶಿಕಂದರನಿಂದ ಭಯವಿಲ್ಲೆಂದು ಆ ಜನರು ದೃಢವಾಗಿ ನಂಬಿದ್ದರು. "ನನಗೆ ಶರಣುಬನ್ನಿರಿ ಇಲ್ಲವಾದರೆ ನಿಮಗೆ ಪ್ರಾಯಶ್ಚಿತ್ತವನ್ನು ವಿಧಿಸದೆ ಬಿಡೆನೆ"ಂದು ಬಾದಶಹನು ಹೇಳಿಕಳಿಸಲಾಗಿ ಅಲ್ಲಿಯ ದುರ್ಗಾಧಿಪತಿಯು ಅಪಹಾಸಗೈದು ನಕ್ಕು "ಶಿಕಂದರನಿಗೆ ಪಕ್ಕಗಳಿದ್ದರೆ ನಮ್ಮ ಕೋಟೆಗೆ ಹಾರಿಬರುವನಷ್ಟೆ?" ಎಂದು ಪ್ರತ್ಯುತ್ತರವನ್ನಿತ್ತನು. ಸುತ್ತಲಿನ ಪ್ರಾಂತವೆಲ್ಲ ತನ್ನದಾಗಿರಲು ಆ ಕೋಟೆಯವರ ಹೆಮ್ಮೆಯೆಷ್ಟರದೆಂದು ಶಿಕಂದರನು ಪಂಬಿದ್ದರೂ ಆ ಅಲ್ಪ ಜನರು ತನಗೆ ಅಣಕಿಸಿದರೆಂಬ ಮುಳ್‌ಬೇನೆಗಾಗಿ ಅವನು ಆ ಕೋಟೆಯನ್ನು ತೆಗೆದುಕೊಂಡೇ ಮುಂದಕ್ಕೆ ಸಾಗತಕ್ಕದ್ದೆಂಬ ಪ್ರತಿಜ್ಞೆಮಾಡಿದನು. ಸಂಗಡಲೇ ಅನೇಕ ಜನ ಸಾಹಸಿಗಳು ರಾತ್ರಿಯ ಕಗ್ಗತ್ತಲೆಯಲ್ಲಿ ಹೊರಟು ಆ ಪರ್ವತವನ್ನು ಸುತ್ತುಹಾಕಿ ಕೋಡುಗಲ್ಲುಗಳ ಸಂದಿನಲ್ಲಿ ಕಬ್ಬಿಣದ ಗೂಟಗಳನ್ನು ಜಡೆದು ಹತ್ತುತ್ತಲೂ ಆಧಾರ ಕಂಡಲ್ಲಿ ನೂಲೇಣಿಗಳನ್ನು ತೊಡಕಿಸುತ್ತಲೂ ಆ ಗಿರಿಯ ಮಸ್ತಕವನ್ನೇರಿ ಕೋಟೆಯ ಗೋಡೆಗೆ ಬಂದುಬಿಟ್ಟರು. ಗಗನಚುಂಬಿತವಾದ ಆ ಗಿರಿಶೃಂಗವನ್ನೇರಿದವರಿಗೆ ಕೋಟೆಯ ಗೋಡೆಗಳ ಪಾಡೇನು? ಆ ವೀರರು ಹಾವುಗಳಂತೆ ಗೋಡೆಗಳನ್ನೇರಿ, ಅಲ್ಲಿ ಶಿಕಂದರಬಾದಶಹನ ಧ್ವಜಾರೋಪಣವನ್ನು ಮಾಡಿ ಹುಯ್ಲಿಟ್ಟು ಕೂಗಿದರು. ಆ ಅಮಾನುಷವಾದ ಕೃತ್ಯವನ್ನು ಕಂಡು ಕೋಟೆಯೊಳಗಿ

ನವರು ಬೆರಗಾಗಿ ಬೆದರಿ ಶಿಕಂದರನಿಗೆ ಶರಣಾಗತರಾದರು. ಈ ಸಮಾಚಾರ ವನ್ನರಿತ ಬಳಿಕಂತೂ ಹೇಡಿಗಳೂ ಶೂರರೂ ಕೂಡಿಯೇ ವಿಸ್ಮಯಗೊಂಡು ಶಿಕಂದರನು ನಿಜವಾಗಿ ದೇವತಾಂಶನೂ ಅಜೇಯನೂ ಆದ ಮಹಾತ್ಮನೆಂದು ಖಂಡಿತವಾಗಿ ನಂಬಿದರು. ಮುಂದೇನು? ಮತ್ತೆ ಸಿಂಗರದ ಮೆರವಣಿಗೆಯೇ. ಹಾಗೆ ಮೆರೆಯುತ್ತೆ ಮೆರೆಯುತ್ತೆ ಬಾದಶಹನು ತಕ್ಷೀಲಾ ( ತಕ್ಷಶಿಲಾ ) ಎಂಬ ಹಿಂದೂ ರಾಜನ ರಾಜಧಾನಿಗೆ ಬಂದನು. ಆ ರಾಜನು (ಅವನ ಹೆಸರು ಕಲ್ಯಾಣನು) ಹಿಂದಸ್ಥಾನದ ಪುರುರಾಜನ (ಪೋರಸನ) ತಮ್ಮನು. ಕಲ್ಯಾಣನು (ಕಲ್ಯಾನಸನು) ಪುರುರಾಜನಿಗೆ ಅಂಜಿ, ದರಾಯುಸನ ಆಶ್ರಯ ದಲ್ಲಿದ್ದು ಶ್ವವೃತ್ತಿಯಿಂದ ಜೀವಿಸುತ್ತಿದ್ದನು. ಶಿಕಂದರನ ಆಗಮನವು ಆ ದ್ರೋಹಿಯಾದ ಕಲ್ಯಾಣನಿಗೆ ಇಷ್ಟವೇ ಆಯಿತು. ಅವನು ಆ ಪರದೇಶಸ್ಥ ನಾದ ಅಭಿಯೋಗಿಯನ್ನು ಆದರದಿಂದ ಸತ್ಕರಿಸಿ ಅವನ ಕೈಯಿಂದ ತನ್ನ ಅಣ್ಣನ ಪರಾಭವವನ್ನು ಮಾಡಿಸುವಂಥ ಕುಮಾರ್ಗವನ್ನವಲಂಬಿಸಿದನು. ಶಿಕಂದರನು ಕಲ್ಯಾಣನ ಸಹಾಯದಿಂದ ಅಟಕ ನದಿಯನ್ನು ದಾಟಿಬಂದು ಪಂಜಾಬದಲ್ಲಿ ಸೇರಿದನು. ವೀರಾಗ್ರೇಸರನಾದ ಪುರುರಾಯನು ಪರಬಲದ ನಿರೋಧವನ್ನು ಮಾಡಲಿಕ್ಕೆ ದೊಡ್ಡದೊಂದು ಸೇನೆಯನ್ನು ಕಟ್ಟಿಕೊಂಡು ಝೇಲಮ ( ಹಿಡ್ಯಾಸ್ಪಿಸ್ ) ನದಿಯ ತೀರಕ್ಕೆ ಬರುವಷ್ಟರಲ್ಲಿ, ಶಿಕಂದರನು ಕಲ್ಯಾಣನ ಸಹಾಯದಿಂದ ಆ ನದಿಯನ್ನು ಕೂಡ ದಾಟಿಬಂದಿದ್ದನು. ಅಲ್ಲಿ ವೀರರಿಬ್ಬರ ನಡುವೆ ತುಮುಲವಾದ ಯುದ್ಧವು ನಡೆಯಿತು. ಹಿಂದೂವೀರರ ಪರಾಕ್ರಮವು ಗ್ರೀಕವೀರರ ಪರಾಕ್ರಮಕ್ಕೆ ಸರಿಯಾದದ್ದಾಗಿತ್ತು. ಜಯಾಪ ಜಯಗಳು ಹೊಯ್ದಾಡಿ ಸ್ಥಿರತೆಯನ್ನು ಕಾಣದಾದವು. ಶಿಕಂದರನು ಪುರು ರಾಜನ ಪರಾಕ್ರಮವನ್ನು ಕೊಂಡಾಡಿದನು. ಪುರುರಾಜನಾದರೂ ಶಿಕಂದರನ ಸಾಹಸಕ್ಕೆ ತಲೆದೂಗಿದನು. ಹೀಗೆ ಕೆಲಕಾಲ ಸ್ಫೂರ್ತಿದಾಯಕವಾದ ಯುದ್ಧವು ನಡೆದಿರಲು ಪುರುರಾಜನ ಸೇನೆಯಲ್ಲಿದ್ದ ಆನೆಗಳು, ಒಂದರೊಂದರ ಸೊಗಡಿನಿಂದ ಮದೋದ್ರಿಕ್ತವಾಗಿ ಮಾವುತರಿಗೆ ಅಸಗೊಳ್ಳದೆ ರಣಭೂಮಿ ಯಲ್ಲಿ ದಿಕ್ಕೆಟ್ಟು ಓಡಾಡಲಾರಂಭಿಸಿ, ಪುರುರಾಯನಕಾಲಾಳು ರಾವುತರನ್ನೇ ತುಳಿದಾಡಿದ್ದರಿಂದ ಸೇನೆಯೆಲ್ಲ ಬೆದರಿ ಕಂಡಕಂಡ ಕಡೆಗೆ ಓಡಲಾರಂಭಿಸಿತು. ಪ್ರತ್ಯಕ್ಷ ಪುರುರಾಜನ ಆನೆಯೇ ಬೆದರಿಹೋಗಿದ್ದರಿಂದ ಆ ರಾಜನು ತನ್ನ

ಅಂಬಾರಿಯಿಂದ ಕೆಳಕ್ಕೆ ಹಾರಿಕೊಂಡನು. ರಾಜನ ಅಂಬಾರಿಯು ಬರಿದಾಗಿರುವದನ್ನು ಕಂಡಂತೂ ಸೇನೆಯು ಎದೆಯೊಡಕೊಂಡು ರಣಾಂಗಣವನ್ನು ಬಿಟ್ಟು ಓಡಲಾರಂಭಿಸಿತು. ಆಯತ್ತವಾಗಿ ಪ್ರಾಪ್ತವಾಗಿರುವ ಇಂಥ ಸುಸಂಧಿಯನ್ನು ಶಿಕಂದರನು ಕಳಕೊಳ್ಳುವನೆ ? ಅವನ ರಾವುತರು ಪುರುರಾಯನ ಸೇನೆಯ ಮೇಲೆ ಧಾವಿಸಿಬಂದರು; ಚುಚ್ಚುಗೋಲಿನ ಭಟರ ವ್ಯೂಹವೂ ಆರ್ಭಟೆಯಿಂದ ಓಡುತ್ತ ಬಂದಿತು. ಆ ವೀರರ ಆವೇಶದ ಹೊಡೆತಕ್ಕೆ ( ಮೊದಲಿಗೇ ಭಯಭೀತರಾಗಿದ್ದ ) ಪುರುರಾಜನ ಸೈನ್ಯದವರು ನುಚ್ಚುನುಚ್ಚಾಗಿ ಹೋದರು. ಪುರುರಾಜನು ಶಿಕಂದರನ ಕೈಗೆ ಸಿಕ್ಕು ಹೋದನು. ಅಂದಿನವರೆಗೂ ಶಿಕಂದರನು ತನಗೆ ಸಮಾನನಾದ ವೀರನನ್ನು ಕಂಡಿದ್ದಿಲ್ಲ. ಪುರುರಾಜನ ಪರಾಕ್ರಮಕ್ಕೆ ಮೆಚ್ಚಿದವನಾದ ಆ ಸಾರ್ವಭೌಮನು ತನ್ನ ಎದುರಾಳಿಯನ್ನು ಕುರಿತು “ನಿಮ್ಮನ್ನು ಯಾವ ಪ್ರಕಾರದಿಂದ ಸತ್ಕರಿಸಬೇಕೆ”ಂದು ಕೇಳಲಾಗಿ “ಮಹಾರಾಜನಿಗುಚಿತವಾದ ರೀತಿಯಿಂದ” ಎಂದು ಆ ಶೂರನಾದ ನೃಪನು ಗಾಂಭೀರ್ಯದಿಂದ ಹೇಳಿದನು. ಶಿಕಂದರನು ಪುರುರಾಜನ ದರ್ಪವನ್ನೂ ಅವನ ವೀರಶ್ರೀರಂಜಿತವಾದ ಮುಖಕಾಂತಿಯನ್ನೂ ಕಂಡು ಬಹು ಪ್ರೀತನಾಗಿ ಅಕ್ಕರತೆಯಿಂದ ಅವನನ್ನು ಅಪ್ಪಿಕೊಂಡು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡು ಸತ್ಕರಿಸಿದನು. ಪುರುರಾಜನ ರಾಜ್ಯವನ್ನು ಅವನಿಗೆ ಬಿಟ್ಟುಕೊಟ್ಟು ಶಿಕಂದರನು ಅವನೊಡನೆ ಸ್ನೇಹವನ್ನು ಬೆಳಿಸಿಕೊಂಡನು.

---

# ಮಹಾರಾಣಾ ಪ್ರತಾಪಸಿಂಹ.

कदर्थितस्यापि हि धैर्यवृत्तेर्न शक्यते धैर्यगुणः प्रमार्ष्टुम्।
अधःकृतस्यापि तनूनपातो नाधः शिखा याति कदाचिदेव ॥

ಅಗ್ನಿಯ ಜ್ವಾಲೆಯನ್ನು ಬಲಾತ್ಕಾರದಿಂದ ಅಧೋಮುಖವಾಗಿ ಮಾಡಬೇಕೆಂದು ಎಷ್ಟು ಮಾಡಿದರೂ ಅದು ಉದನ್ಮುಖವಾಗಿಯೇ ಪ್ರಜ್ವಲಿಸುವದು; ಅದರಂತೆಯೇ ಧೈರ್ಯಶಾಲಿಯಾದ ಪುರುಷನು ಅನೇಕ ಸಂಕಟಗಳಿಂದ ಜರ್ಜರಿತನಾದರೂ ಅವನು ಅವುಗಳಿಗೆ ಈಡಾಗದೆ, ತನ್ನ ಶೀಲವನ್ನು ಕಾಯ್ದುಕೊಳ್ಳುತ್ತಾನೆಂಬ ಅಭಿಪ್ರಾಯವು ಮೇಲಿನ ಪದ್ಯದಲ್ಲಿ ವ್ಯಕ್ತವಾಗಿದೆ. ಈ ಪದ್ಯಾರ್ಥದ ಸತ್ಯತೆಯನ್ನು ತೋರಿಸುವ ಅತ್ಯಂತ ಉಜ್ವಲಿತವಾದ ಉದಾಹರಣವೆಂದರೆ, ಮೇವಾಡದೇಶದ ರಾಣಾ ಪ್ರತಾಪಸಿಂಹನ ಚರಿತ್ರವು. ಸ್ವದೇಶಾಭಿಮಾನದ ಸಂಚಾರವು ಯಾವ ಬಗೆಯದಾಗಿರುತ್ತದೆ, ಪ್ರಬಲರಾದ ಶತ್ರುಗಳಿಂದಲೂ ದುರ್ದೈವದಿಂದಲೂ ಸುತ್ತುಗಟ್ಟಲ್ಪಟ್ಟರೂ ಅವುಗಳನ್ನು ಗಣನೆಗೆ ತಾರದೆ, ಅವುಗಳ ಪೇಚಿನೊಳಗಿಂದ ನಿಶ್ಚಲವಾದ ಧೈರ್ಯದಿಂದಲೂ ದೃಢನಿಶ್ಚಯದಿಂದಲೂ ಪರಾಕ್ರಮಶಾಲಿಯಾದ ಪುರುಷನು ಹೇಗೆ ಪಾರಾಗುತ್ತಾನೆ, ನಾನಾವಿಧವಾದ ವಿಪತ್ತುಗಳೂ ಸಂಕಟಗಳೂ ಬೆನ್ನಟ್ಟಿದರೂ ಅವುಗಳಿಗೆ ಅಭಿಮುಖವಾಗಿ ನಿಂತು ಧೀರೋದಾತ್ತನಾದ ಪುರುಷನು ತನ್ನ ವ್ರತವನ್ನು ಹೇಗೆ ಪರಿಪಾಲಿಸುತ್ತಾನೆ ಮುಂತಾದ ಅನೇಕ ಸಂಗತಿಗಳನ್ನು ತಿಳಿದುಕೊಳ್ಳಬೇಕಾಗಿದ್ದರೆ ಮೇವಾಡದ ರಾಣಾ ಪ್ರತಾಪಸಿಂಹನ ಚರಿತ್ರವನ್ನು ಅವಲೋಕಿಸಬೇಕು.

ಪ್ರತಾಪಸಿಂಹನು ಇ. ಸ. ೧೫೭೨ ನೇ ಇಸ್ವಿಯಲ್ಲಿ ಮೇವಾಡ ದೇಶದ ಪಟ್ಟದ ಮೇಲೆ ಕುಳಿತನು. ಆದರೆ ‘ಗಡೋಮೆ ಗಡ ಚಿತೋಡಗಡ’ ಎಂದು ರಜಪೂತಸ್ಥಾನದಲ್ಲಿ ಪ್ರಸಿದ್ಧಿಯನ್ನು ಹೊಂದಿದ ಹಾಗೂ ರಜಪೂತರ ಅಭಿಮಾನಕ್ಕೆ ಅನೇಕ ಸಂಗತಿಗಳಿಂದ ಕಾರಣವಾಗಿದ್ದ ಚಿತೋಡಗಡದ ಪಟ್ಟವನ್ನು ಅವನು ಅಲಂಕರಿಸಲಿಲ್ಲ. ಪ್ರತಾಪಸಿಂಹನ ತಂದೆಯಾದ ಉದೇಸಿಂಗನು— ಯಾವನನ್ನು ಸ್ವಾಮಿಭಕ್ತಳಾದ ಪನ್ನಾತಾಯಿಯು ತನ್ನ

ಹೊಟ್ಟೆಯ ಮಗನನ್ನು ಶತ್ರುವಿಗೆ ಬಲಿಕೊಟ್ಟು ಬದುಕಿಸಿದ್ದಳೋ ಅವನು:— ಈ ಚಿತ್ತೋಡಗಡವನ್ನು ೧೫೬೭ ನೇ ಇಸ್ವಿಯಲ್ಲಿ ಶತ್ರುಗಳ ಸ್ವಾಧೀನಮಾಡಿದ್ದನು. ಇವನಂಥ ನಿರ್ಬಲನೂ ಮಂದನೂ ಆದ ರಾಜನು ರಜಪುತಾನದಲ್ಲಿ ದೊರೆಯುವದು ದುರ್ಲಭವೇ ಸರಿ. ಉದೇಸಿಂಗ ಹಾಗೂ ಅಕಬರ ಈ ಉಭಯತರು ಒಂದೇ ಕಾಲದಲ್ಲಿ ಜನ್ಮವನ್ನು ತಾಳಿದರು ; ಮತ್ತು ಉಭಯತರ ಬಾಲ್ಯವೂ ಅತ್ಯಂತ ಕಷ್ಟಮಯವಾದ ಸ್ಥಿತಿಯಲ್ಲಿ ಗತಿಸಿತು. ಆದರೆ, ಅವರಲ್ಲೊಬ್ಬನು ತನ್ನ ಪಿತ್ರಾರ್ಜಿತ ರಾಜ್ಯವನ್ನೂ ಕೀರ್ತಿಯನ್ನೂ ಕಳೆದುಕೊಂಡರೆ, ಮತ್ತೊಬ್ಬನು ಅತ್ಯಂತ ವಿಸ್ತೃತವಾದ ರಾಜ್ಯವನ್ನೂ ಕೀರ್ತಿಯನ್ನೂ ಸಂಪಾದಿಸಿದನು. ಚಿತೋಡಗಡವು ಶತ್ರುಗಳ ಕೈವಶವಾದಂದಿನಿಂದ ಮೇವಾಡದೇಶದ ರಜಪೂತರ ಶೂರತ್ವದ ಕೀರ್ತಿಯಾದರೂ ಅಳಿದು ಹೋಯಿತು. ಆದರೆ, ಅಕಬರನ ಕೈವಶವಾಗಿದ್ದ ಚಿತೋಡಗಡವನ್ನು ಪುನಃ ಸಂಪಾದಿಸಿ ಮೇವಾಡ ದೇಶದೊಳಗಿಂದ ಮೊಗಲರನ್ನು ಹೊರಗೆ ಹಾಕುವ ದೃಢನಿಶ್ಚಯವನ್ನು ಪ್ರತಾಪಸಿಂಹನು ಮಾಡಿದ್ದನು. ಆದರೆ ಪ್ರತಾಪಸಿಂಹನು ರಾಜ್ಯಸೂತ್ರವನ್ನು ಧರಿಸುವ ಪೂರ್ವದಲ್ಲಿಯೇ, ರಾಜಸ್ಥಾನದೊಳಗಿನ ರಾಜಮನೆತನದವರನ್ನು ಅಕಬರನು ತನ್ನ ಪರಾಕ್ರಮದಿಂದ ಬಹುತರವಾಗಿ ಪಾದಾಕ್ರಾಂತ ಮಾಡಿ, ಅವರನ್ನು ತನ್ನ ಉದಾರವಾದ ಸ್ವಭಾವದಿಂದಲೂ ಚಾತುರ್ಯದಿಂದಲೂ ಮೋಹಿಸಿಬಿಟ್ಟಿದ್ದನು. ಬರಬರುತ್ತ ಅಕಬರನ ಮೋಹಜಾಲಕ್ಕೆ ಒಳಗಾದ ಈ ಕ್ಷಾತ್ರನಿಷ್ಠುರರಾದ ರಜಪೂತರು ತಮ್ಮ ಹೆಣ್ಣುಮಕ್ಕಳನ್ನು ಅಕಬರನಿಗೂ ಅವನ ಮಕ್ಕಳಿಗೂ ಕೊಟ್ಟು ಅವನ ಮನೆತನದ ಕೂಡ ಶರೀರಸಂಬಂಧವನ್ನು ಬೆಳಿಸಹತ್ತಿದರು. ಅಕಬರನ ಸಲುವಾಗಿ ಬೇಕಾದ ಪ್ರದೇಶಕ್ಕೆ ಹೋಗಿ ಶತ್ರುಗಳ ಕೂಡ ಕಾದಾಡಿ ಅವರನ್ನು ಅಕಬರನಿಗೆ ಅಂಕಿತರನ್ನಾಗಿ ಮಾಡಹತ್ತಿದರು. ಜಯಪೂರ, ಜೋಧಪೂರ, ಬಿಕಾನೇರ ಮುಂತಾದ ಪ್ರಾಂತಗಳ ರಾಜರು ಅಕಬರನ ಸೇನಾನಾಯಕರೂ, ಸುಭೇದಾರರೂ, ಮನಸಬದಾರರೂ ಆದರು. ಪ್ರಥಮತಃ ಇವೆಲ್ಲ ಸಂಗತಿಗಳು ಪ್ರತಾಪಸಿಂಹನ ಲಕ್ಷ್ಯಕ್ಕೆ ಬರಲಿಲ್ಲ. ಪೂರ್ವದ ಸಾಂಪ್ರದಾಯಿಕ್ಕನುಸಾರವಾಗಿ, ಮೇವಾಡದ ಅರಸನು ತುರ್ಕರ ಮೇಲೆ ಶಸ್ತ್ರವನ್ನೆತ್ತಿದರೆ ರಜಪೂತ ರಾಜರೆಲ್ಲರೂ ರಣಸ್ತಂಭದ

ಸುತ್ತಲೂ ನೆರೆದು ಶತ್ರುಗಳ ಕೂಡ ಯುದ್ಧವನ್ನು ಮಾಡುವರೆಂದು ಪ್ರತಾಪ ಸಿಂಹನು ತಿಳಿದುಕೊಂಡಿದ್ದನು. ಆದರೆ ಈ ತನ್ನ ತಿಳುವಳಿಕೆಯು ತಪ್ಪಿನ ದಾಗಿತ್ತೆಂದು ಮುಂದೆ ಅವನ ನಿದರ್ಶನಕ್ಕೆ ಬಂದಿತು. ಪ್ರತಾಪಸಿಂಹನು ಅಕಬರನೊಡನೆ ಬಹಿರಂಗವಾಗಿ ವೈರವನ್ನು ಆರಂಭಿಸಿದನು. ಆದರೆ ಯಾವ ರಜಪೂತ ಸಂಸ್ಥಾನಿಕನಾದರೂ ಪ್ರತಾಪನ ಪಕ್ಷವನ್ನು ಕಟ್ಟಲಿಲ್ಲ. ಇಷ್ಟೇ ಅಲ್ಲ, ಇದಕ್ಕೆ ಪ್ರತಿಯಾಗಿ, ರಾಜಾ ಮಾನಸಿಂಗ ಮುಂತಾದ ರಜಪೂತ ರಾಜರು ಅಕಬರನ ಸೈನ್ಯವನ್ನು ಸೇರಿ ಪ್ರತಾಪಸಿಂಹನ ಕೂಡ ಯುದ್ಧ ಮಾಡಲು ಸನ್ನದ್ಧರಾದರು. ಪ್ರತಾಪಸಿಂಹನ ಪ್ರತ್ಯಕ್ಷ ತಮ್ಮನಾದ ಸಾಗರಜೀ ಎಂಬವನೂ ಕೂಡ ಅಕಬರನಿಗೆ ಸಹಾಯ್ಯಕನಾಗಿ, ಅವನಿಂದ 'ಚಿತೋಡದ ರಾಣಾ' ಎಂಬ ಬಿರುದನ್ನು ಸಂಪಾದಿಸಿದನು. ಅವನ ಮತ್ತೊಬ್ಬ ತಮ್ಮನಾದ ಸೂಕ್ತನೆಂಬವನು ಅಕಬರನ 'ಮನಸಬದಾರ' ನಾದನು. ಈ ರೀತಿಯಾಗಿ ಮೊಗಲರಂಥ ಪ್ರಚಂಡವಾದ ಬಾದಶಾಹೀ ಸತ್ತೆಯ ಕೂಡ ಹೂಡಿದ ಕದನದಲ್ಲಿ ಪ್ರತಾಪಸಿಂಹನಿಗೆ ತನ್ನ ಸ್ವಂತ ಪರಾಕ್ರಮದ ಹೊರತು ಅನ್ಯ ರಜಪೂತ ರಾಜರ ಸಹಾಯ್ಯವು ಯಾವ ಬಗೆಯಿಂದಲೂ ದೊರೆಯಲಿಲ್ಲ. ತುರ್ಕರ ಮುಂದೆ ನಿಂತು, ನಮ್ರವಾಗಿ ತಲೆಯನ್ನು ಬಾಗಿಸಿ ತನ್ನ ದೇಶದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವದಕ್ಕಿಂತ ಸ್ವಾತಂತ್ರ್ಯದ ಸಲುವಾಗಿ ಹೋರಾಡಿ ಧಾರಾತೀರ್ಥದಲ್ಲಿ ಮರಣಹೊಂದುವದು ಲೇಸೆಂದು ಅವನ ಮನಸ್ಸಿನ ನಿಶ್ಚಯವಾಗಿತ್ತು. ಪ್ರತಾಪಸಿಂಹನು ಮೊಗಲರಿಗೆ ಎದುರಾಗಿ ನಿಲ್ಲುವದಕ್ಕೆ ತನ್ನ ಕೈಲಾದ ಮಟ್ಟಿಗೆ ಸೈನ್ಯದ ಸಿದ್ಧತೆಯನ್ನು ಮಾಡತೊಡಗಿದನು. ಮೊಟ್ಟಮೊದಲು ತನ್ನ ಪ್ರಜರನ್ನು ಅರವಲೀ ಪರ್ವತದ ಸುಸಂರಕ್ಷಿತವಾದ ಪ್ರದೇಶದಲ್ಲಿ ಒಯ್ದು, ಆ ಬಳಿಕ ಬಯಲು ಭೂಮಿಯೊಳಗಿನ ಪ್ರಾಂತವನ್ನೆಲ್ಲ ನಾಶಪಡಿಸಿ, ಸಮುದ್ರದ ತೆರೆಗಳಂತೆ ಏರಿ ಬರುವ ಮೊಗಲರ ಸೈನ್ಯವನ್ನು ವಿರೋಧಿಸುವದಕ್ಕಾಗಿ 'ಹಳದೀ ಘಾಟ' ದ ಗುಡ್ಡಗಾಡು ಪ್ರದೇಶದಲ್ಲಿ ಯುದ್ಧಾನುಕೂಲವಾದ ಸ್ಥಳಗಳನ್ನು ನೋಡಿ, ಪ್ರತಾಪಸಿಂಹನು ಅಲ್ಲಿ ತನ್ನ ಮೇವಾಡೀ ರಜಪೂತರನ್ನೂ ಭಿಲ್ಲರನ್ನೂ ನಿಲ್ಲಿಸಿದನು.

ಅಕಬರನು ತನ್ನ ಮಗನಾದ ಸಲೀಮನಿಗೆ ಮೊಗಲ ಸೈನ್ಯದ ಅಧಿ

ಪತ್ರವನ್ನು ಕೊಟ್ಟು ಯುದ್ಧಕ್ಕೆ ಕಳಿಸಿದ್ದನು. ಅಕಬರನ ಪ್ರಸಿದ್ಧ ಸೇನಾ ನಾಯಕನಾದ ರಾಜಾ ಮಾನಸಿಂಗನೂ ತನ್ನ ಹೆಣ್ಣುಮಕ್ಕಳನ್ನು ತುರ್ಕರಿಗೆ ಕೊಟ್ಟು ಅವರ ಕೂಡ ಸಂಬಂಧವನ್ನು ಮಾಡಿದ್ದಕ್ಕಾಗಿ ಪ್ರತಾಪನು ಅವನ ನಿರ್ಭತ್ಸನೆಯನ್ನು ಮಾಡಿದ್ದನು. ಇದರಿಂದ ಅವಮಾನಿತನಾದಂತಾದ ರಾಜಾ ಮಾನಸಿಂಗನು "ಪ್ರತಾಪನ ಗರ್ವವನ್ನು ಖಂಡಿಸದಿದ್ದರೆ ನಾನು ಮಾನಸಿಂಗನಲ್ಲ" ಎಂದು ಪ್ರತಿಜ್ಞೆ ಮಾಡಿದ್ದನು ಮೊಗಲರ ಸೈನ್ಯವು ಮೇವಾಡದ ಬಯಲು ಪ್ರದೇಶಕ್ಕೆ ಬರುವದರೊಳಗಾಗಿಯೇ ಆ ಪ್ರದೇಶವೆಲ್ಲ ನಿರ್ಜನವಾಗಿಹೋಗಿತ್ತು.

ಸಲೀಮನು ಪ್ರತಾಪಸಿಂಹನ ರಾಜಧಾನಿಯಾದ ಕಮಳಮೇರದ ಮೇಲೆ ಹಳದೀಘಟ್ಟದ ಇಕ್ಕಟ್ಟಿನ ಮಾರ್ಗವಾಗಿ ಸಾಗಿನಡೆದನು. ಈ ಘಟ್ಟದ ಬಾಯಿಗೆ ಪ್ರತಾಪನು ತನ್ನ ಸೈನ್ಯಸಮೇತವಾಗಿ ನಿಂತಿದ್ದನು. ಪ್ರತಾಪಸಿಂಹನ ತಲೆಯಮೇಲೆ ಛತ್ರವಿದ್ದು, ಹತ್ತರದಲ್ಲಿಯೇ ಅವನ ಸುವರ್ಣಾದಿತ್ಯಾಂಕಿತವಾದ ರಕ್ತವರ್ಣದ ಧ್ವಜಪಟವು ಅಂತರಿಕ್ಷದಲ್ಲಿ ಸುಳಿದಾಡುತ್ತಿತ್ತು. ಘಟ್ಟದಲ್ಲಿ ಮೊಗಲರ ಪ್ರವೇಶವಾಗಲು, ರಜಪೂತರು ಅವರನ್ನು ಸುತ್ತುಗಟ್ಟಿ ಯುದ್ಧವನ್ನು ಪ್ರಾರಂಭಿಸಿದರು. ಮಾನಸಿಂಗನನ್ನು ಬೆನ್ನಟ್ಟಿ ಅವನಿಗೆ ತನ್ನ ಶಸ್ತ್ರದ ಪ್ರತಾಪವನ್ನು ತೋರಿಸಿ ನಾಚಿಸಬೇಕೆಂದು ಪ್ರತಾಪಸಿಂಹನು ಅವನನ್ನು ಶೋಧಿಸಹತ್ತಿದನು. ಆದರೆ ಅವನು ಎಲ್ಲಿಯೋ ತಪ್ಪಿಸಿಕೊಂಡು ಶತ್ರುವಿಗೆ ಮೋರೆಯನ್ನೇ ತೋರಿಸಲಿಲ್ಲ. ಬಳಿಕ ಪ್ರತಾಪನು ಯಾವ ಸ್ಥಳದಲ್ಲಿ ಸಲೀಮನು ಆನೆಯನ್ನೇರಿಕೊಂಡು ತನ್ನ ಸೈನ್ಯದವರನ್ನು ಉತ್ತೇಜಿಸುತ್ತಿದ್ದನೋ ಆ ಸ್ಥಳಕ್ಕೆ ಹೋಗಬೇಕೆಂದು ಯೋಚಿಸಿ, ಶತ್ರುಸೈನ್ಯದವರ ಸಾಲುಗಳನ್ನು ಮುರಿಯುತ್ತ ಮುರಿಯುತ್ತ ಸಲೀಮನ ಮುಂದೆ ಬಂದು ನಿಂತನು. ಸಲೀಮನ ಜೀವಕ್ಕೆ ಜೀವ ಕೊಡುವ ಸೈನಿಕರ ಶೂರತ್ವವು ಪ್ರತಾಪನ ಪರಾಕ್ರಮವನ್ನು ತಟ್ಟಲು ಸಮರ್ಥವಾಗಲಿಲ್ಲ. ಪ್ರತಾಪನ ಕುದುರೆಯು ಸಲೀಮನ ಆನೆಯ ಕಾಲ ಮೇಲೆ ತನ್ನ ಮುಂಗಾಲುಗಳನ್ನಿಟ್ಟುಕೊಂಡು ನಿಂತಿತು. ಕೂಡಲೆ ಪ್ರತಾಪನು ತನ್ನ ಭಾಲೆಯಿಂದ ಸಲೀಮನನ್ನು ಬಲವಾಗಿ ಇರಿದನು. ಈ ಇರಿತದಿಂದ ಸಲೀಮನು ಮೃತನಾಗತಕ್ಕವನೇ! ಆದರೆ ಅವನ ಅಂಬಾರಿಯು ಉಕ್ಕಿನ ದಪ್ಪಾದ ತಗಡುಗಳಿಂದ ಆಚ್ಛಾದಿತ

ವಾದ್ದರಿಂದ ಭಾಲೆಯು ಅಲಗು ಮೊಂಡಾಗಿ, ಆ ಇರಿತವು ನಿಷ್ಫಲವಾಯಿತು. ಅಷ್ಟರಲ್ಲಿ ಆನೆಯ ಮಾವುತನು ಕೊಲ್ಲಲ್ಪಟ್ಟನು. ಆನೆಯು ಅನಾವರವಾಗಿ ಓಡಹತ್ತಿತು. ಆಗ್ಗೆ ಆ ಸ್ಥಳದಲ್ಲಿ ಒಳ್ಳೇ ತುಮುಲವಾದ ಯುದ್ಧವಾಯಿತು. ಸಲೀಮನ ರಕ್ಷಣೆಗಾಗಿ ಮೊಗಲರೂ, ಪ್ರತಾಪಸಿಂಹನ ಸಂರಕ್ಷಣೆಗಾಗಿ ರಜಪೂತರೂ, ಪರಸ್ಪರರ ಮೇಲೆ ಕಡಿದುಬಿದ್ದರು. ಈ ಘನಘೋರವಾದ ಸಂಗ್ರಾಮದಲ್ಲಿ ಪ್ರತಾಪನಿಗೆ ಏಳು ಗಾಯುಗಳು ತಗಲಿದವು; ಆದರೂ ಅವನು ಸಲೀಮನ ಬೆನ್ನು ಬಿಡಲಿಲ್ಲ; ಹಾಗೂ ತನ್ನ ಛತ್ರವನ್ನೂ, ರಕ್ತವರ್ಣದ ಧ್ವಜವನ್ನೂ ದೂರ ಮಾಡಲಿಲ್ಲ. ಅದರಿಂದ ಪ್ರತಾಪನ ಧ್ವಜವು ಕಾಣಬರುತ್ತಿದ್ದ ಸ್ಥಳಕ್ಕೆ ಮೊಗಲರು ರಭಸದಿಂದ ಸಾಗಹತ್ತಿದರು. ಇದನ್ನು ಕಂಡು ಝಾಲಾದ ಠಾಕುರನಾದ ಮಾನಾ ಎಂಬವನು ಪ್ರತಾಪನ ಛತ್ರವನ್ನೂ ಧ್ವಜವನ್ನೂ ತನ್ನ ವಶಕ್ಕೆ ತೆಗೆದುಕೊಂಡು ಒಂದು ಬಿಕ್ಕಟ್ಟಿನ ಸ್ಥಳಕ್ಕೆ ಪ್ರತಾಪನ ಮೇಲಾಗುತ್ತಿದ್ದ ಹಲ್ಲೆಗಳನ್ನು ತನ್ನ ಮೈಮೇಲೆ ತೆಗೆದುಕೊಂಡನು. ಈ ರೀತಿಯಾಗಿ ಆ ಸ್ವಾಮಿಭಕ್ತ ಠಾಕುರನು ತನ್ನ ರಾಜನ ಮುಕ್ತತೆಯನ್ನು ಮಾಡಲು, ಉಳಿದ ರಜಪೂತ ಸರದಾರರು ಪ್ರತಾಪನನ್ನು ರಣಾಂಗಣದಿಂದ ಹೊರಗೆ ಕರೆದೊಯ್ದರು. ಇತ್ತ ಮಾನಾನು ತನ್ನ ಶೂರ ಸೈನಿಕರೊಂದಿಗೆ ಮರಣ ಹೊಂದಿದನು; ಹಾಗೂ ತನ್ನ ಪ್ರಾಣವನ್ನು ಸ್ವಾಮಿಭಕ್ತಿಗಾಗಿ ವೆಚ್ಚ ಮಾಡಿದನು.

ಮೊಗಲರ ಅಸಂಖ್ಯವಾದ ತೋಫುಗಳ, ಸವಾರರ ಹಾಗೂ ಕಾಲಾಳುಗಳ ಮುಂದೆ ರಜಪೂತರು ತೋರಿಸಿದ ಪ್ರರಾಕ್ರಮವು ಎಷ್ಟೊತ್ತು ತಾಳುವದು? ಈ ಹಳದೀಘಟ್ಟದ ಯುದ್ಧದಲ್ಲಿ ಇಪ್ಪತ್ತೆರಡು ಸಾವಿರ ರಜಪೂತರು ಪ್ರತಾಪನ ಧ್ವಜದ ಸುತ್ತಲೂ ನೆರೆದಿದ್ದರು. ಇವರಲ್ಲಿ ಎಂಟು ಸಾವಿರ ಜನರು ಮಾತ್ರ ಜೀವದಿಂದುಳಿದರು. ಜಾಣತನದಿಂದಲೂ ಉತ್ಸಾಹದಿಂದಲೂ ತನ್ನ ಯಜಮಾನನ ಸೇವೆಯನ್ನು ಮಾಡಿದ 'ಚೇತಕ' ಎಂಬ ಹೆಸರಿನ ಕೃಷ್ಣವರ್ಣದ ವಾಜಿಯು ಪ್ರತಾಪನ ರಕ್ಷಣಾರ್ಥವಾಗಿ ಹರಿಹಳ್ಳಗಳನ್ನು ಹಾರುತ್ತ ಹಾರುತ್ತ ತನ್ನ ಯಜಮಾನನ ರಕ್ಷಣೆಯನ್ನು ಮಾಡುತ್ತಲೇ ಇತ್ತು. ಆದರೆ ಇಷ್ಟರಲ್ಲಿ ಶತ್ರುಗಳು ತೀರ ಸಮೀಪಕ್ಕೆ ಬಂದರು. ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿ ಚೇತಕವು ಒಂದು ಅಗಲವಾದ ಹರಿಯನ್ನು ಹಾರಿ

ತನ್ನ ಯಜಮಾನನನ್ನು ಆಚೆಯ ದಂಡೆಗೆ ಒಯ್ದು ಬಿಟ್ಟಿತು. ಆದರೆ ಪ್ರತಾಪ ನಂಶಿ ಚೇತಕವಾದರೂ ಯುದ್ಧದಲ್ಲಿ ಗಾಯಪಟ್ಟಿತ್ತು. ಪ್ರತಾಪನನ್ನು ಬೆನ್ನಟ್ಟಿದ ಶತ್ರುಗಳು ತೀರ ಸಮೀಪಕ್ಕೆ ಬರಲು, ಅಷ್ಟರಲ್ಲಿ "ಎಲೈ ಕರಿಗುದುರೆಯ ಮೇಲಿನ ಸವಾರನೇ, ನಿಲ್ಲು" ಎಂದು ಸ್ವಭಾಷೆಯಲ್ಲಿ ಪ್ರತಾಪನನ್ನುದ್ದೇಶಿಸಿ ಯಾರೋ ಕೂಗಿದಂತಾಯಿತು; ಹಿಂದಿರುಗಿ ನೋಡುತ್ತಾನೆ, ತನ್ನ ತಮ್ಮನಾದ ಸೂಕ್ತನು ಓಡಿಬರುತ್ತಲಿದ್ದಾನೆ. ಸೂಕ್ತನು 'ಫಿತೂರ'ನಾಗಿ ಅಕಬರನನ್ನು ಕೂಡಿದ್ದರೂ ಈಗ್ಗೆ ತನ್ನ ಅಣ್ಣನಾದ ಮೇವಾಡದ ಅರಸನು ಏಕಾಂಗಿಯಾಗಿ ಓಡುತ್ತಿರುವದನ್ನೂ ಇಬ್ಬರು ಪಠಾಣರು ಅವನ ಬೆನ್ನು ಹತ್ತಿರುವದನ್ನೂ ನೋಡಿ, ಅವನ ಮನಸ್ಸು ಪಶ್ಚಾತ್ತಾಪದಿಂದಲೂ, ಬಂಧುಪ್ರೇಮದಿಂದಲೂ ಕರಗಿತು. ಸೂಕ್ತನು ಆ ಇಬ್ಬರೂ ಪಠಾಣರನ್ನು ಛೇದಿಸಿ ತನ್ನ ಅಣ್ಣನನ್ನು ಉಳಿಸಿದನು. ಇಂಥ ಗಂಡಾಂತರದ ಸಮಯದಲ್ಲಿ ತನ್ನ ತಮ್ಮನು ತನ್ನ ರಕ್ಷಣೆಗಾಗಿ ಬಂದದ್ದನ್ನು ನೋಡಿ ಪ್ರತಾಪನು ಸದ್ಗದಿತನಾದನು. ಬಂಧುಪ್ರೇಮದಿಂದ ಪರಸ್ಪರರು ಪರಸ್ಪರರನ್ನು ಆಲಿಂಗಿಸಿದರು. ಅಷ್ಟರಲ್ಲಿ ಪ್ರತಾಪನ ಚೇತಕಕ್ಕೆ ಗಾಯಗಳ ವೇದನೆಯಿಂದ ಬವಳಿಬಂದಂತಾಗಿ ಅದು ನೆಲಕ್ಕೆ ಬಿದ್ದು ಪ್ರಾಣವನ್ನು ಬಿಟ್ಟಿತು. ಚೇತಕವು ಜೀವವನ್ನು ಬಿಟ್ಟ ಸ್ಥಳದಲ್ಲಿ ಪ್ರತಾಪನು ಅದರ ಸ್ಮರಣಾರ್ಥವಾಗಿ ಒಂದು ಛತ್ರವನ್ನು ಕಟ್ಟಿಸಿದ್ದಾನೆ. ಅದು 'ಚೇತಕ-ಚಬುತ್ರಾ' ಎಂಬ ಹೆಸರಿನಿಂದ ಮೇವಾಡದಲ್ಲಿ ಪ್ರಸಿದ್ಧವಿದೆ.

ಈ ಪ್ರಕಾರವಾಗಿ ಹಳದೀ ಘಟ್ಟದ ಯುದ್ಧವು ಮುಗಿಯಿತು. ಥರ್ಮಾಪಲಿಯ ಗಿರಿಕಂದರದ ಬಿಕ್ಕಟ್ಟಿನ ಮಾರ್ಗದಲ್ಲಿ ಸತ್ಯಪ್ರತಿಜ್ಞನಾಗಿದ್ದ 'ಲಿಯೊನಿಡಾಸ'ನ ಸ್ಪಾರ್ಟನ್ ಜನರು ಯಾವ ಅಭಿಮಾನವನ್ನೂ ಕಾರ್ಯವನ್ನೂ ತೋರಿಸಿದರೋ ಅಥವಾ ಘೋಡಖಿಂಡಿಯಲ್ಲಿ ಬಾಜಿಪ್ರಭುವಿನ ಮಾವಳೀ ಜನರು ಯಾವ ಸ್ವಾಮಿನಿಷ್ಠೆಯನ್ನೂ ಶೌರ್ಯವನ್ನೂ ತೋರಿಸಿದರೋ ಅದೇ ಪ್ರಕಾರದ ದೇಶಾಭಿಮಾನವನ್ನೂ ಶೌರ್ಯವನ್ನೂ ಸ್ವಾಮಿನಿಷ್ಠೆಯನ್ನೂ ಮೇವಾಡದ ರಜಪೂತರು 'ಹಳದೀಘಾಟ'ದಲ್ಲಿ ಜಗತ್ತಿನ ನಿದರ್ಶನಕ್ಕೆ ತಂದುಕೊಟ್ಟರು. ಈ ಯುದ್ಧದಲ್ಲಿ ಪ್ರತಾಪನ ಐನೂರು ಜನ ಆಪ್ತರೂ ಝಾಲಾದ ಠಾಕುರನೂ ಅವನ ಇನ್ನೂರೈವತ್ತು ಜನರೂ ಪತನಹೊಂದಿದರು. ಸಲೀಮನಿಗೆ ಜಯಪ್ರಾಪ್ತಿಯಾದರೂ ಮುಂದೆ ಯುದ್ಧವನ್ನು ನಡೆ

ಸುವದು ಅಸಾಧ್ಯವಾಗಿ, ಪ್ರಾಪ್ತವಾದ ಜಯದ ಪ್ರೌಢಿಯನ್ನು ಮೆರೆಸುತ್ತ ಅವನು ಸ್ವದೇಶಕ್ಕೆ ತೆರಳಿದನು. ಇದರಿಂದ ಪ್ರತಾಪನಿಗೂ ಅವನ ಅನುಯಾಯಿಗಳಿಗೂ ಅವಕಾಶ ದೊರೆಯಿತು. ಪ್ರತಾಪನು ಕಮಳಮೇರದ ರಕ್ಷಣೆಯ ವ್ಯವಸ್ಥೆಯನ್ನು ಮಾಡಿ ಶತ್ರುಗಳು ಮರಳಿ ಬಂದರೆ ಯುದ್ಧ ಮಾಡಲು ಸಿದ್ಧತೆ ನಡೆಸಿದನು.

ಮಳೆಗಾಲವು ತೀರಲು ಮೊಗಲ ಸೈನ್ಯವು ಮತ್ತೆ ಸಾಗಿಬಂದು ಕಮಳಮೇರಕ್ಕೆ ಅನೇಕ ದಿವಸಗಳವರೆಗೆ ಮುತ್ತಿಗೆಯನ್ನು ಹಾಕಿಕೊಂಡು ಕುಳಿತಿತು. ಕಮಳಮೇರದಲ್ಲಿದ್ದ ಭಾವಿಗಳಲ್ಲಿಯ ನೀರು ಕೆಟ್ಟು ಅವುಗಳಲ್ಲಿ ಕ್ರಿಮಿಗಳಾಗಹತ್ತಿದ್ದರಿಂದ ಪ್ರತಾಪನಿಗೆ ತನ್ನ ರಾಜಧಾನಿಯನ್ನು ಬಿಟ್ಟುಕೊಡಬೇಕಾಯಿತು. ಇದರಿಂದ ಕಮಳಮೇರವು ಅನಾಯಾಸವಾಗಿಯೇ ಶತ್ರುಗಳ ಕೈವಶವಾಯಿತು. ಶತ್ರುಗಳು ಪ್ರತಾಪನ ಬೆನ್ನುಹತ್ತಿದರು. ಪ್ರತಾಪನು ಅರವಲಿ ಪರ್ವತದೊಳಗಿನ ವನಪ್ರದೇಶವನ್ನು ಆಶ್ರಯಿಸಿಕೊಂಡನು. ಆದರೆ ಅಲ್ಲಿಯೂ ಶತ್ರುಗಳು ಅವನಿಗೆ ಗಂಟುಬಿದ್ದರು. ಈ ರೀತಿಯಾಗಿ ಪ್ರತಾಪನು ಈ ದಿವಸ ಒಂದು ವನದಲ್ಲಿದ್ದರೆ ಮಾರನೇ ದಿವಸ ಬೇರೊಂದು ಕಾಡಿನಲ್ಲಿ, ಈ ಕ್ಷಣದಲ್ಲಿ ಒಂದು ಗಿರಿಗಹ್ವರದಲ್ಲಿದ್ದರೆ ಮತ್ತೊಂದು ಕ್ಷಣದಲ್ಲಿ ಬೇರೊಂದು ಗುಡ್ಡದಲ್ಲಿ, ಹೀಗೆ ಸ್ಥಳಾಂತರವನ್ನು ಮಾಡುತ್ತ ಮಾಡುತ್ತ ತನ್ನ ಹಾಗು ತನ್ನ ಕುಟುಂಬದವರ ರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದನು. ವನ್ಯಪದಾರ್ಥ, ಅಥವಾ ತೃಣಧಾನ್ಯಗಳ ಮೇಲೆ ಅವನು ಕಾಲಕಳೆಯುತ್ತಿದ್ದನು. ಮಳೆಗಾಲದಲ್ಲಿ ಅವನಿಗೆ ಸ್ವಲ್ಪ ವಿಶ್ರಾಂತಿಯು ದೊರೆಯುತ್ತಿತ್ತು. ಆದರೆ ಆ ಕಾಲವು ಗತಿಸಲು ಪುನಃ ಮೊಗಲರು ಬೇರೆ ಬೇರೆ ಮಾರ್ಗಗಳಿಂದ ಬಂದು ಪ್ರತಾಪನಿಗೆ ತೊಂದರೆಯನ್ನುಂಟು ಮಾಡುತ್ತಿದ್ದರು. ಕಷ್ಟಾಪೇಷ್ಟೆಗಳನ್ನೂ ಸಂಕಟಗಳನ್ನೂ ಗಣನೆಗೆ ತಾರದೆ ಪ್ರತಾಪನು ಮೇಲಿಂದ ಮೇಲೆ ಶತ್ರುಗಳ ಮೇಲೆ ಹಲ್ಲೆಯನ್ನು ಮಾಡಿ ತನ್ನ ರಕ್ಷಣೆಯನ್ನು ಮಾಡಿಕೊಳ್ಳುತ್ತಿದ್ದನು. ಇದೇ ಕ್ರಮವು ವರ್ಷಾನುವರ್ಷ ನಡೆಯುತ್ತಿತ್ತು. 'ಪ್ರತಾಪನು ತನಗೆ ಶರಣಾಗತನಾಗಿ ತನ್ನ ನಿಷ್ಕಂಟಕವಾದ ರಾಜ್ಯವನ್ನು ತಾನೇ ಆಳಲಿ' ಎಂಬದಾಗಿ ಅಕಬರನ ಆಗ್ರಹವಿತ್ತು. ಆದರೆ ಪ್ರತಾಪನು ಎಂಥ ಸತ್ಯನಿಷ್ಠನಾದ ಸ್ವದೇಶಭಕ್ತನು ಹಾಗೂ ಅಭಿ

ಮಾನಿಯಾದ ಪುರುಷನು! 'ನಾನು ಬಾಪ್ಪಾ ರಾವಳನ ವಂಶಜನಿದ್ದು ನನ್ನ ದೇಶವನ್ನು ಶತ್ರುಗಳ ಕೈಯಲ್ಲಿ ಕೊಟ್ಟು ಅವರ ಮುಂದೆ ನನ್ನ ಶಿರ ವನ್ನು ಬಾಗಿಸಬೇಕೆ? ಎಂದೂ ಆಗದು.' ಇಂಥ ಸ್ವಾಭಿಮಾನ ಪೂರ್ಣ ನಾದ ರಾಜನು ವ್ಯಾಘ್ರಾದಿ ಹಿಂಸ್ರ ಪಶುಗಳಿಂದ ಆಶ್ರಿತವಾದ ಅರಣ್ಯಗಳಲ್ಲಿ ಅನೇಕ ವರ್ಷಗಳನ್ನು ಕಳೆದನೇ ಹೊರತು ಅಕಬರನಿಗೆ ಶರಣಾಗತನಾಗ ಲಿಲ್ಲ. ಶತ್ರುಗಳ ಅಂಕಿತವಾದ ಸ್ವದೇಶದ ಮುಕ್ತತೆಯನ್ನು ಮಾಡದ ಹೊರತು, ಬೆಳ್ಳಿ-ಬಂಗಾರದ ಪಾತ್ರೆಗಳಲ್ಲಿ ಭೋಜನವನ್ನು ಮಾಡದೆ ಪತ್ರಾ ವಲಿಯಲ್ಲಿ ಭುಂಜಿಸುವ, ರಾಜಮಂದಿರಗಳಲ್ಲಿ ವಾಸಿಸದೆ ಪರ್ಣಕುಟೀರದಲ್ಲಿ ಕಾಲಹರಣ ಮಾಡುವ, 'ಗಾದಿ ರುಜಾಮು'ಗಳ ಮೇಲೆ ಶಯನವನ್ನು ಮಾಡದೆ ಹುಲ್ಲು ಚಾಪೆಯ ಮೇಲೆ ದೇಹವನ್ನು ಅವಶ್ಯವಾದ ವಿಶ್ರಾಂತಿಗಾಗಿ ಚಲ್ಲುವ ಪ್ರತಿಜ್ಞೆಯನ್ನು ಪ್ರತಾಪನು ಮಾಡಿದ್ದನು. ಈ ಪ್ರತಿಜ್ಞೆಯನ್ನು ಅವನು ಯಾವಜ್ಜೀವ ಪರಿಪಾಲಿಸಿದನು. ಅವನ ರಾಣಿಯೂ ಸೊಸೆಯೂ ವನ್ಯ ತೃಣಧಾನ್ಯಗಳ ಹಿಟ್ಟಿನ ಭಕ್ಕರಿಗಳನ್ನು ತಿಂದು ಜೀವಿಸುತ್ತಿದ್ದರು. ಆದರೆ ಅವು ಕೂಡ ಒಮ್ಮೊಮ್ಮೆ ದೊರೆಯದೆ ಎರಡೆರಡು ದಿವಸಗಳ ವರೆಗೆ ಉಪ ವಾಸದಲ್ಲಿಯೇ ಅವರು ಕಾಲಕಳೆಯುತ್ತಿದ್ದರು.

ಈ ರೀತಿಯಾಗಿ ಕಾಲಕ್ರಮಣ ಮಾಡುತ್ತಿರಲು ಒಂದಾನೊಂದು ದಿವಸ ಚಿಕ್ಕ ಮಗಳು ಒಂದು ಭಕ್ಕರಿಯೊಳಗಿನ ಅರ್ಧ ಭಾಗವನ್ನು ಮಧ್ಯಾಹ್ನದಲ್ಲಿ ತಿಂದು ಉಳಿದರ್ಧವನ್ನು ಸಂಜೆಗಾಗಿ ಮುಚ್ಚಿಡಲು, ಅಷ್ಟರಲ್ಲಿ ಜಪ್ಪಿಸಿ ಕೊಂಡು ಕುಳಿತಿದ್ದ ಒಂದು ಅಡವಿಯ ಬೆಕ್ಕು ಟಣ್ಣನೇ ಹಾರಿ ಆ ಬಕ್ಕರಿಯ ಚೂರನ್ನು ಕಚ್ಚಿಕೊಂಡು ಹೋಯಿತು. ಹುಡುಗಿಯು ಚಿಟ್ಟನೆ ಚೀರಿದಳು. ರಾಜನು ಶತ್ರುವಿನ ಮೇಲೆ ಹೇಗೆ ಕಡಿದು ಬೀಳಬೇಕೆಂಬ ವಿಚಾರದಲ್ಲಿ ಮಗ್ನನಾಗಿರಲು, ಮಗಳ ಆರ್ತಧ್ವನಿಯನ್ನು ಕೇಳಿ ಅವನ ಹೃದಯವು ಕಲ್ಲಿನಂತೆ ಕಠೋರವಾಗಿದ್ದರೂ ಆ ಪ್ರಸಂಗದಲ್ಲಿ ಕಳವಳ ಗೊಂಡಿತು. 'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ' ಹೀಗೆ ಲೋಕೋತ್ತರ ಪುರುಷರ ಚಿತ್ತಗಳಿರುತ್ತವೆಂದು ಒಬ್ಬ ಕವಿಯು ವರ್ಣಿಸಿದ್ದು ತೀರ ಸತ್ಯವಿದೆ. ಪ್ರಾಣದ ಮೇಲೆ ಬಂದೊದಗಿದ ಅಸಂಖ್ಯಾತ ಸಂಕಟಗಳನ್ನೂ, ಕಾಡುಜನರಿಗೂ ಕೂಡ ಸಹಿಸಲು ಅಸಾಧ್ಯವಾದ

ಕಷ್ಟಗಳನ್ನೂ ಲೆಕ್ಕಿಸದ ಧೈರ್ಯಶಾಲಿಯಾದ ರಾಜನ ಚಿತ್ತವು ಪ್ರೀತಿಯ ಮಗಳ ದುಃಖಾಕ್ರೋಶದಿಂದ ವೇಧಿಸಲ್ಪಟ್ಟು ಕ್ಷಣಹೊತ್ತು ಅವನು ಮೋಹಿತನಾದನು. 'ಈ ನಿರರ್ಥಕವಾದ ರಾಜ್ಯಪದದಲ್ಲಿ ಯಾವ ತಥ್ಯವಿದೆ? ನನ್ನ ಜೀವಿತದಕಿಂತ ವನವಾಸಿಗಳಾದ ಕಾಡುಜನರ ಜೀವಿತವೇ ಸುಖಕರವಾದದ್ದು.' ಹೀಗೆ ವಿಚಾರಿಸಿ ದುಃಖಾವೇಶದಿಂದ ಅವನು 'ನನಗೆ ಸ್ವಲ್ಪ ಅವಕಾಶವನ್ನು ಕೊಡಬೇಕು' ಎಂಬ ಆಶಯದ ಪತ್ರವನ್ನು ಅಕಬರ ಬಾದಶಹನಿಗೆ ಬರೆದನು.

ಈ ಪತ್ರವು ಅಕಬರನ ಕೈಸೇರಲು ಅವನಿಗೆ ಅತ್ಯಂತ ಹರ್ಷವಾಗಿ, 'ಸ್ವಲ್ಪ ದಿವಸಗಳಲ್ಲಿಯೇ ಪ್ರತಾಪನು ದಿಲ್ಲಿಯ ಸಿಂಹಾಸನಕ್ಕೆ ಶರಣು ಬರುವನೆಂಬ ಅಭಿಪ್ರಾಯವನ್ನು ಈ ಪತ್ರವು ಸೂಚಿಸುವದೆಂ'ದು ಅವನು ತನ್ನ ಸರದಾರರಿಗೆ ಒಳ್ಳೇ ಉಬ್ಬಿನಿಂದ ಹೇಳಿದನು. ಅಕಬರನ ಈ ಅಭಿಪ್ರಾಯವು ದರಬಾರದ ಮೊಗಲ ಹಾಗೂ ರಜಪೂತ ಸರದಾರರಿಗೆಲ್ಲ ಸರಿ ತೋರಿತು. ಆದರೆ ಇದರಿಂದ ಬಿಕಾನೇರದ ಪೃಥ್ವೀರಾಜ ರಾಠೋಡನಿಗೆ ಮಾತ್ರ ಅತ್ಯಂತ ಖೇದವಾಯಿತು. ಅವನು ಅಕಬರನಿಗೆ ಪ್ರಾರ್ಥಿಸಿದ್ದೇನಂದರೆ : "ಗರೀಬ ನವಾಜ, ಕ್ಷಮೆಯಿರಲಿ. ನನಗೆ ಈ ಪತ್ರದ ಸಂಬಂಧವಾಗಿ ಸಂದೇಹವಿದೆ. ಈ ತರದ ಪತ್ರವನ್ನು ಪ್ರತಾಪನು ಕಳಿಸುವನೆಂಬ ನಂಬಿಗೆಯು ನನಗಾಗದು. ಈ ಪತ್ರವು ಕೃತ್ರಿಮವಾಗಿದ್ದು ಪ್ರತಾಪನ ಹೆಸರಿಗೆ ಕಲಂಕವನ್ನು ತರುವ ಉದ್ದೇಶದಿಂದ ಅವನ ವೈರಿಗಳಲ್ಲೊಬ್ಬನು ಈ ಪತ್ರವನ್ನು ಬರೆದಿರಬಹುದು. ಆದಕ್ಕಾಗಿ ದಿಲ್ಲೀಶ್ವರರು ನನಗೆ ಅಪ್ಪಣೆಯನ್ನು ಕೊಟ್ಟರೆ ನಿಜವಾದ ಸಂಗತಿಯನ್ನು ಶೋಧಿಸಿ ಪ್ರಭುಗಳ ಚರಣಕ್ಕೆ ಅರಿಕೆ ಮಾಡುವೆನು.'' ಅಕಬರನು ಈ ಅವನ ವಿನಂತಿಯನ್ನು ಮಾನ್ಯ ಮಾಡಿದನು. ಪೃಥ್ವೀರಾಜನು ಪ್ರತಾಪಸಿಂಹನಿಗೆ ಪದ್ಯರೂಪದಿಂದ ಒಂದು ಪತ್ರವನ್ನು ಬರೆದನು. ಅದರ ಭಾವಾರ್ಥವೆಂದರೆ: 'ಎಲ್ಲ ಭಾರತಪುತ್ರರು ಆಶಾಪೂರ್ಣವಾದ ದೃಷ್ಟಿಯಿಂದ ಪ್ರತಾಪಸಿಂಹನನ್ನೇ ನೋಡುತ್ತಿದ್ದಾರೆ. ಉಳಿದ ರಜಪೂತರೆಲ್ಲ ತಮ್ಮ ಪರಾಕ್ರಮವನ್ನೂ ತಮ್ಮ ಸ್ತ್ರೀಯರ ಮರ್ಯಾದೆಯನ್ನೂ ಅಕಬರನಿಗೆ ಎಂದೋ ಮಾರಿಕೊಂಡಿದ್ದಾರೆ. ಸಂಪೂರ್ಣ ಪೃಥ್ವಿಯಲ್ಲಿ ತನ್ನ ದೇಶಾಭಿಮಾನವನ್ನು ಬಿಡದೆ ಧೈರ್ಯದಿಂದಲೂ ಪರಾಕ್ರಮದಿಂದಲೂ ಕ್ಷಾತ್ರತೇಜ

ವನ್ನು ಪ್ರಕಟಿಸಿದ ಪುರುಷನೆಂದರೆ ಪ್ರತಾಪಸಿಂಹನೊಬ್ಬನೇ. ಅವನೊಬ್ಬನು ತನ್ನ ಶಿರವನ್ನು ನಮ್ರ ಮಾಡಿದನೆಂದರೆ ಹಿಂದೂ ಮಾತ್ರರ, ವಿಶೇಷತಃ ರಜಪೂತರ ಉಳಿದಿರುವ ಅಲ್ಪಸ್ವಲ್ಪ ಪ್ರತಿಷ್ಠೆಯೂ ಕೂಡ ಸಂಪೂರ್ಣವಾಗಿ ಇಲ್ಲದಂತಾಗುವದು. ಸಕಲ ಹಿಂದೂ ಜನರ ಉತ್ಸಾಹವು ಪ್ರತಾಪಸಿಂಹನನ್ನು ಅವಲಂಬಿಸಿರಲು ಅವನೇ ನಮ್ಮನ್ನು ಬಿಡುವನೆಂದು ಕೇಳುತ್ತೇವೆ. ಹೀಗೆ ತಾನು ವರ್ತಿಸುವದು ಚಿತ್ತೋಡದ ರಾಣಾನಿಗೆ ಸರಿಯಾದದ್ದೆಂದು ತೋರುತ್ತದೆಯೋ ?' ಈ ಆಶಯದ ಅತ್ಯಂತ ಉತ್ತೇಜನಜನಕವಾದ ಪತ್ರವನ್ನು ಅವನು ಪ್ರತಾಪನಿಗೆ ಕಳಿಸಿದನು. ಪತ್ರವು ಪ್ರತಾಪನಿಗೆ ಮುಟ್ಟಲು ಅವನಿಗೆ ಹತ್ತು ಸಾವಿರ ಜನರ ಸಹಾಯದಿಂದ ಬರುವಂಥ ಬಲವು ಕೂಡಲೆ ಬಂದಿತು. ಇದೇ ಕಾಲಕ್ಕೆ ಮೇವಾಡದ ಆಶೆಯನ್ನು ಬಿಟ್ಟು ಸಿಂಧಪ್ರಾಂತದಲ್ಲಿ ಹೊಸದಾಗಿ ಸ್ವತಂತ್ರವಾದದ್ದೊಂದು ರಾಜ್ಯವನ್ನು ಸ್ಥಾಪಿಸಿ ತುರ್ಕರ ಕೈಯೊಳಗಿಂದ ಪಾರಾಗಬೇಕೆಂದು ಪ್ರತಾಪಸಿಂಹನು ಯೋಚಿಸಿದ್ದನು. ಆದರೆ ಈ ಪತ್ರವನ್ನೋದಿ ತತ್‌ಕ್ಷಣವೇ ಅವನು ಆ ಆಲೋಚನೆಯನ್ನು ಬಿಟ್ಟುಕೊಟ್ಟನು. ಇದೇ ಕಾಲಕ್ಕೆ ರಾಣಾನ ವಂಶಪರಂಪರಾಗತ ದಿವಾಣನಾದ ಭಾಮಾಶಹಾ ಎಂಬವನು ಇಪ್ಪತ್ತೈದು ಸಹಸ್ರ ಸೈನಿಕರಿಗೆ ಹನ್ನೆರಡು ವರ್ಷಗಳ ವರೆಗೆ ಸಾಕಾಗುವಷ್ಟು ತನ್ನ ಪಿತ್ರಾರ್ಜಿತ ದ್ರವ್ಯವನ್ನೆಲ್ಲ ಪ್ರತಾಪಸಿಂಹನ ಚರಣಕ್ಕೆ ಅರ್ಪಿಸಿದನು. ಇದರಿಂದ ಪ್ರತಾಪನ ವಿಮನಸ್ಕತೆಯು ಅಸ್ತವಾಗಿ ಅವನಿಗೆ ಧೈರ್ಯವು ಇಮ್ಮಡಿಯಾಗಿ ಬಂದಿತು. ಕೂಡಲೆ ಪ್ರತಾಪನು ದೇವೇರದ ಮೊಗಲರನ್ನು ಪೂರ್ಣವಾಗಿ ಪರಾಜಯಗೊಳಿಸಿ ಅಮೇಟದ ಠಾಣ್ಯವನ್ನು ತನ್ನ ಕೈವಶ ಮಾಡಿಕೊಂಡನು. ಆ ಬಳಿಕ ಕಮಳಮೇರಕ್ಕೆ ಸಾಗಿಹೋಗಿ ಅಲ್ಲಿಯ ಸರದಾರನಾಗಿದ್ದ ಅಬದುಲ್ಲಾ ಹಾಗು ಅವನ ಕೈಕೆಳಗಿನ ಸೈನಿಕರನ್ನೆಲ್ಲ ಕೊಂದು ಅದನ್ನೂ ತನ್ನ ಹಸ್ತಗತ ಮಾಡಿಕೊಂಡನು. ಈ ಪ್ರಕಾರವಾಗಿ ಒಂದರ ಹಿಂದೆ ಒಂದು, ಹೀಗೆ ಮೂವತ್ತೆರಡು ಕೋಟಿಕೊತ್ತಳಗಳನ್ನು ಸಂಪಾದಿಸಿದನು. ಚಿತೋಡಗಡ, ಅಜಮೇರ ಹಾಗು ಮಂಗಳಗಡ ಈ ಮೂರು ಸ್ಥಳಗಳನ್ನುಳಿದು ಮೇವಾಡ ಪ್ರಾಂತವೆಲ್ಲ ಪ್ರತಾಪನ ಸ್ವಾಧೀನವಾಯಿತು.

ಪ್ರತಾಪಸಿಂಹನ ಈ ಮುಂದಿನ ಕಾಲವು ಸುಖಸಮಾಧಾನದಲ್ಲಿ ಸಾಗ

ಹತ್ತಿತು. ಆದರೆ ಅವನಂಥ ದೇಶಾಭಿಮಾನಿಯಾದ ನೈಷ್ಠಿಕ ಕ್ಷತ್ರಿಯನಿಗೆ ಸುಖವು ಹೇಗೆ ಸೇರುವದು ? ಚಿತೋಡಗಡವು ಇನ್ನೂ ಅವನ ಸ್ವಾಧೀನ ವಾಗಿದ್ದಿಲ್ಲ. ಪ್ರತಾಪಸಿಂಹನು ಉದೇಪುರದ ಎತ್ತರವಾದ ಪ್ರದೇಶದಲ್ಲಿ ನಿಂತು ಚಿದೋಡಗಡದ ಕೋಟಿಯ ಕಡೆಗೆ ನೋಡಲು ಆ ಕೋಟಿಯ ಗೋಡೆಗಳು ಅವನ ಕಣ್ಣುಗಳಲ್ಲಿ ಚುಚ್ಚಿದಂತಾಗುತ್ತಿದ್ದವು. ಯಾವ ಗಡದ ಸಂರಕ್ಷಣೆಗಾಗಿ ತನ್ನ ಪೂರ್ವಜರು ತಮ್ಮ ಮೈಯೊಳಗಿನ ರಕ್ತದ ಕಾಲಿವೆ ಗಳನ್ನು ಹರಿಸಿ ಪ್ರಾಣಗಳ ಆಹುತಿಗಳನ್ನು ಕೊಟ್ಟರೋ ಆ ಚಿತೋಡಗಡವು ಯಾವಾಗ್ಗೆ ತನ್ನ ಕೈವಶವಾಗುವದೆಂಬ ನಿದಿಧ್ಯಾಸವೇ ಅವನಿಗೆ ಅಹರ್ನಿಶ ವಾಗಿತ್ತು. ಕ್ಷಾತ್ರವ್ರತವನ್ನು ಕಾಯ್ದುಕೊಳ್ಳುವದಕ್ಕಾಗಿ ಈ ಸ್ವಾಭಿಮಾನಿ ಯಾದ ಪುರುಷನು ಎಷ್ಟೋ ಶ್ರಮಗಳನ್ನೂ ಸಾಹಸಗಳನ್ನೂ ಕಷ್ಟಗಳನ್ನೂ ಸಹಿಸಿ ತನ್ನ ಆಯುಷ್ಯದ ದಿವಸಗಳನ್ನು ಕಳೆದಿದ್ದನು. ಇದೆಲ್ಲದರ ಪರಿಣಾಮವು ಅವನ ಉಕ್ಕಿನಂಥ ಶರೀರದ ಮೇಲಾಗಿ ಅದು ದಿನೇ ದಿನೇ ಕ್ಷೀಣವಾಗ ಹತ್ತಿತು. ಅವನ ಪರಾಕ್ರಮಕ್ಕೆ ಮೆಚ್ಚಿ ರಾಜಸ್ಥಾನದ ವಿಜಯಲಕ್ಷ್ಮಿಯು ಅವನ ಕೊರಳಲ್ಲಿ ಮಾಲೆಯನ್ನು ಹಾಕಬೇಕೆನ್ನುವಷ್ಟರಲ್ಲಿಯೇ ಅವನು ಬೇನೆಬಿದ್ದು ನರಳಹತ್ತಿದನು. ಅಂತಕಾಲವು ಸಮೀಪಿಸಿತು. ಪ್ರಾಣೋತ್ಕ್ರ ಮಣವಾಗಲೊಲ್ಲದು. ಅವನಿಗೆ ಚಿತೋಡದ ನಿದಿಧ್ಯಾಸವೇ. ಅವನ ಸುತ್ತಲೂ ನೆರೆದಿದ್ದ ಅವನ ಸ್ನೇಹಿತ ಸರದಾರರೂ ಅತ್ಯಂತ ಅಸ್ವಸ್ಥರಾದರು. ರಾಣಾನ ಈ ದುಃಸ್ಥಿತಿಯನ್ನು ನೋಡಿ ಸಾಳುಂಬ್ರಾದ ಠಾಕುರನು "ಯಾವ ಕಾರಣದ ಸಲುವಾಗಿ ನಿಮಗೆ ಇಂಥ ಕ್ಲೇಶಗಳಾಗಹತ್ತಿವೆ ? ತಾವು ಸುಖ ದಿಂದಲೂ ಶಾಂತತೆಯಿಂದಲೂ ಯಾಕೆ ಪ್ರಯಾಣಮಾಡಲೊಲ್ಲರಿ ?" ಎಂಬ ದಾಗಿ ಕೇಳಿದನು. ಪ್ರತಾಪನು ತನ್ನ ಶಕ್ತಿಯನ್ನೆಲ್ಲ ಏಕೀಕರಿಸಿ "ಚಿತೋಡದ ಕಡೆಗೆ ನೋಡಿರಿ. ನಾನಂತೂ ಈಗ ಹೋಗುತ್ತಲೇ ಇದ್ದೇನೆ. ನನ್ನ ಚಿರಂಜೀವನು ಹಾಗು ನೀವೆಲ್ಲ ಸರದಾರರು ಈ ಗುಡಿಸಿಲುಗಳಿದ್ದ ಸ್ಥಳದಲ್ಲಿ ವಿಶಾಲವಾದ ರಾಜಮಂದಿರಗಳನ್ನು ಕಟ್ಟಿಸಿ ಅವುಗಳಲ್ಲಿ ವಿಲಾಸದಿಂದ ಕಾಲವನ್ನು ಕಳೆಯುವಿರಿ. ಆದರೆ ಯಾವ ದೇಶದ ಸ್ವತಂತ್ರತೆಗಾಗಿ ನಾವೆಲ್ಲರೂ ಇಷ್ಟು ವರ್ಷಗಳ ವರೆಗೆ ಪ್ರಾಣಾಂತ್ಯ ಸಂಕಟಗಳನ್ನು ಸಹಿಸಿ ದೆವೋ ಹಾಗು ಪ್ರಸಂಗವಶಾತ್ ಪ್ರಾಣಗಳನ್ನಾದರೂ ಅರ್ಪಿಸಿದೆವೋ ಆ

ಸ್ವದೇಶವನ್ನು ನೀವು ತುರ್ಕರ ಪಾಲು ಮಾಡುವಿರೆಂಬ ಸಂಗತಿಯು ನನ್ನನ್ನು ಅನೇಕಪರಿಯಿಂದ ಕ್ಲೇಶಪಡಿಸುತ್ತಲಿದೆ. ಆದರೆ ನಮ್ಮ ದೇಶವನ್ನು ತುರ್ಕರ ಸ್ವಾಧೀನ ಮಾಡಗೊಡಲಿಕ್ಕಿಲ್ಲೆಂದು ಯಾರಾದರೂ ನನಗೆ ಆಶ್ವಾಸನವನ್ನು ಕೊಟ್ಟರೆ ನಾನು ಸುಖಸಮಾಧಾನಗಳಿಂದ ನನ್ನ ಪ್ರಾಣವನ್ನು ಬಿಡುವೆನು.'' ಈ ಮಾತು ಕೇಳಿ ದುಃಖೋದ್ವೇಗದಿಂದ ಎಲ್ಲರ ಕುತ್ತಿಗೆಯ ಶಿರಗಳು ಉಬ್ಬಿದವು. ಅವರು ಶಪಥಪೂರ್ವಕವಾಗಿ "ನಾವು ನಮ್ಮ ದೇಶದ ಸ್ವಾತಂತ್ರ್ಯವನ್ನು ಮರಳಿ ಸಂಪಾದಿಸುವವರೆಗೆ ಇಲ್ಲಿ ರಾಜಮಂದಿರಗಳನ್ನು ಕಟ್ಟಿ ವಿಲಾಸದಲ್ಲಿ ಕಾಲವನ್ನು ಕಳೆಯಲಿಕ್ಕಿಲ್ಲ. ಯುವರಾಜ ಅಮರಸಿಂಹರಾದರೂ ಇದೇ ವ್ರತವನ್ನು ಪಾಲಿಸುವರು. ಈ ವಿಷಯವಾಗಿ ತಾವು ಯತ್ಕಿಂಚಿತವಾದರೂ ಚಿಂತಿಸಕೂಡದು'' ಎಂದು ಆಶ್ವಾಸನವನ್ನು ಕೊಟ್ಟರು. ಈ ಶಬ್ದಶ್ರವಣ ಮಾತ್ರದಿಂದಲೇ ಪ್ರತಾಪನಿಗೆ ಸಮಾಧಾನವಾಗಿ ಅವನು ಸುಖದಿಂದ ಪ್ರಾಣವನ್ನು ಬಿಟ್ಟನು.



# ಕೊಡೆಯಾಳು ಭೂಪಾಲ

क्रियासिद्धिः सत्वे भवति महतां नोपकरणे ॥

ಹೊಳೆಯುವದೆಲ್ಲ ಒಳಿತಾದದ್ದೆಂದು ಹೇಳಲಾಗದಷ್ಟೆ? ಕೀಳವಾಗಿ ಕಾಣುವದಾದರೂ ಕೆಟ್ಟದ್ದೆಂದು ನಿಶ್ಚಯವಾಗಿ ಹೇಳಲಾಗದು. ಕಣ್ಣಿಗೆ ನುಣ್ಣಗಾಗಿ ಕಾಣುವ ಕೆಲವೊಂದು ಫಲವು, ತಿಂದವರ ಪ್ರಾಣಹರಣವನ್ನೇ ಮಾಡುವದು; ಕರಿಮಾವು ಕಣ್ಣಿಗೆ ಕೆಟ್ಟದ್ದಾಗಿ ಕಂಡರೂ ಅದರ ರಸವು ಅಮೃತೋಪಮವಾಗಿರುವದು. ಅದರಂತೆಯೇ ಮನುಷ್ಯರ ಗುಣಾವಗುಣಗಳ ನಿರ್ಣಯವನ್ನು ಅವರವರ ಸ್ಥಾನಮಾನಗಳ ಮೇಲಿಂದಾಗಲಿ, ಬಣ್ಣರೂಪಗಳಿಂದಾಗಲಿ, ವಿದ್ಯಾವಿಭವಗಳಿಂದಾಗಲಿ ಮಾಡಲಾಗದು.

ಕನಕದ ಸಿಂಹಾಸನದೊಳ್ ।
ಶುನಕನ ತಂದಿರಿಸಿ ಪಟ್ಟಗಟ್ಟಲು ಮತ್ತಂ ॥
ಮನದಣಿಯೆ ಬೊಗಳ್ವುದಲ್ಲದೆ ।
ಘನತೆಯನರಿದಪುದೆ ಮುಕ್ತಿರಾಮೇಶ್ವರನೆ ॥

ಸಿಂಹಾಸನವನ್ನು ದೂಷಿಸುವವರ ರಾಜಪದಕ್ಕಿಂತಲೂ ಉದಾರ ಬುದ್ಧಿಯವನಾದ ಸತ್ವಶಾಲಿಯ ನೀಚಸ್ಥಿತಿಯು ಎಷ್ಟಾದರೂ ಪ್ರಶಂಸನೀಯವಾದದ್ದು. ಈ ಬಗ್ಗೆ ಒಂದು ಕಥೆ ಹೇಳುತ್ತೇವೆ, ಕೇಳಿರಿ.

ಹಿಂದಕ್ಕೆ ಕೇರಳ ದೇಶಾಧಿಪತಿಯ ಸೇವೆಯಲ್ಲಿ ಆ ರಾಜೇಶ್ವರನ ಕುದುರೆಯ ಆರೈಕೆ ಮಾಡುವ ಒಬ್ಬ ಸೇವಕನಿದ್ದನು. ಸ್ವಾಮಿಭಕ್ತನಾದ ಆ ಸೇವಕನಿಗೆ ರಾಜನ ಸೇವೆಯ ಹೊರತಾಗಿ ಬೇರೊಂದು ವಿಷಯದಲ್ಲಿ ಧ್ಯಾನವೇ ಇಲ್ಲ. ರಾಜನು ರಾವುತನಾಗಿ ಕುದುರೆಯನ್ನೇರಿ ಹೊರಟರೆ, ಸೇವಕನು ರಾಜನ ತಲೆಯ ಮೇಲೆ ದೊಡ್ಡದೊಂದು ಕೊಡೆ ಹಿಡಿದು ಆ ಕುದುರೆಯ ಆರ್ಭಟೆಯ ವೇಗಕ್ಕೆ ಸರಿಯಾಗಿ ಓಡುತ್ತಿದ್ದನು. ಬಡವರಾದ ಆಳುಗಳಿಂದ ಇಂಥ ಸೇವೆಯನ್ನು ತೆಗೆದುಕೊಳ್ಳುವದು ನಿರ್ದಯದ ಕೆಲಸವೆಂದು ಪಾದ್ರಿಗಳು ನಮಗೆ ಬೋಧಿಸುತ್ತಿರುವರು. ಮೃಗಯಾಸಕ್ತರಾದ ಸಾಹೇಬರು ಅನೇಕ ಜನ ಬೇಟೆಗಾರ ಬಂಟರ ದೇಹಗಳನ್ನು ಹುಲಿ ಕರಡಿಗಳ

ಪಾಲು ಮಾಡಿದ್ದು ನಾವು ಕೇಳಿದ ಮಾತು. ಕ್ರಿಸ್ತದಯಾನಿಧಿಯ ಅನುಯಾಯಿಗಳಾದ ಜರ್ಮನ್, ಆಸ್ಟ್ರಿಯನರು ಯುದ್ಧದ ನೆವದಿಂದ ಅಪರಿಮಿತ ಜನ ಬಡ ಪ್ರಾಣಿಗಳ ಜೀವಹಿಂಸೆ ಮಾಡಿದ್ದು ಕೇಳಿದರೆ ನಮ್ಮ ಜೀವ ಝುಲ್ಲೆನ್ನುತ್ತಲಿದೆ. ನಮ್ಮಲ್ಲಿಯು ಭಟನೋರ್ವನು ಸ್ವಸಂತೋಷದಿಂದಲೂ, ಉತ್ಸಾಹದಿಂದಲೂ ಓರಿಗೆಯವರಲ್ಲಿ ಅಹುದೆನ್ನಿಸಿಕೊಳ್ಳುವ ಉಬ್ಬಿನಿಂದಲೂ ಸ್ವಾಮಿಸೇವೆಯನ್ನು ಮಾಡುತ್ತಿರಲು, ಅವನನ್ನು ಯಜಮಾನನು ನಿರ್ದಯವಾಗಿ ನಡಿಸಿಕೊಳ್ಳುವನೆಂಬುವದು ತಪ್ಪಾದ ಮಾತೇ ಸರಿ. ಇಂಥ ಸೇವಾರತನನ್ನು ಒಡೆಯನು ತನ್ನ ಹೊಟ್ಟೆಯ ಮಗನಂತೆ ಪ್ರೀತಿಸಿ ಅವನ ಇಚ್ಛೆಯನ್ನು ಪೂರೈಸುವನು. ದೊರೆಯ ಕುದುರೆಯ ಮುಂದೆ ಹುಲಿಯ ಹಾಗೆ ಹಾರುತ್ತ ನನ್ನ ಮಗನು ಬಂದನೆಂದು ಆ ಸತ್ವಶಾಲಿಯ ಮಾತೆಯು ಗರ್ವದಿಂದ ನಗುತ್ತ ಅನ್ಯ ಸ್ತ್ರೀಯರ ಮುಂದೆ ಅವನ ಪ್ರಶಂಸೆ ಮಾಡುವಳು. ಅಳಿಯನಿದ್ದರೆ ಇಂಥವನೇ ಇರಬೇಕೆಂದು ಆ ಜಾತಿಯವರಾದ ಸ್ತ್ರೀಯರು ( ಕನ್ನೆಯರ ತಾಯಂದಿರು ) ಹೇಳುವರು. ಹುಡುಗನೆನ್ನಬೇಕು ಅವನಿಗೇ ಎಂದು ಅವನ ಓರಿಗೆಯ ಬಂಟರು ಕೊಂಡಾಡುವರು. ಹೀಗೆ ಜನರ ಸ್ತುತಿಗೆ ಪಾತ್ರನಾಗಿ ಆಸ್ಥೆಯಿಂದ ಕೆಲಸ ಮಾಡುತ್ತಿರುವವನು ಆ ಕೆಲಸವನ್ನು ಒತ್ತಾಯಕ್ಕೆ ಒಳಗಾಗಿ ಮಾಡುತ್ತಾನೆಂದು ಹೇಳುವವರು ನಮ್ಮ ನಾಡನಡಾವಳಿಗಳನ್ನು ಅರಿಯದೆ ಹೇಳುವರು ಇರಲಿ.

ಕೇರಳಾಧೀಶ್ವರನು ತನ್ನ ರಾಜ್ಯದಲ್ಲಿಯ ವ್ಯವಸ್ಥೆಯನ್ನು ಕಂಡುಕೊಂಡು ಬರಬೇಕೆಂದು ರಾಜಧಾನಿಯಿಂದ ಹೊರಟು ಬೇರೂರಿಗೆ ಹೋಗಿದ್ದನು. ಪುಂಡನಾದ ತನ್ನ ಕೊಡೆಯಾಳು ಓರ್ವನೆ ಮೈಗಾವಲಿಗೆ ಸಾಕೆಂದು ತಿಳಿದು ರಾಜನು ಅವನನ್ನೊಬ್ಬನನ್ನೇ ತನ್ನ ಸಂಗಡ ಕರಕೊಂಡು ತನ್ನ ಹಿರಿಯ ಕುದುರೆಯನ್ನೇರಿಕೊಂಡು ಹೋಗಿದ್ದನು. ಕುದುರೆಗೆ ಆ ಕೊಡೆಯಾಳು ಸಂಗಡಲ್ಲಿದ್ದರೆಯೇ ಓಡಲಿಕ್ಕೆ ಹುರುಪು. -ನನ್ನ ಎರಡು ಕಾಲುಗಳಲ್ಲಿದ್ದ ಚಾಪಲ್ಯವು ನಿನ್ನ ನಾಲ್ಕೂ ಕಾಲುಗಳಲ್ಲಿಲ್ಲ ಬಲ್ಲೆಯಾ ಕಡವನೆ, ನೀನೆಷ್ಟು ಓಡಿದರೂ ನನ್ನ ಹಿಂದೆಯೇ ಇರುವಿ ಎಂದು ಆ ಕೊಡೆಯಾಳು ಜಿದ್ದು ಕಟ್ಟಿ ಕುದುರೆಯ ಮುಂದೆ ಓಡುವಂತೆ ಕಾಣುತ್ತಿದ್ದನು. ಆ ಕುದುರೆ, ಆ ಕೊಡೆಯಾಳು, ಇಲ್ಲದಿದ್ದರೆ ರಾಜನಿಗೆ ಕುದುರೆಯ ಹತ್ತಾಟ

ದಲ್ಲಿ ಸೊಗಸಿರಲಿಲ್ಲ. ಮೂವರದೂ ಜೀವ ಒಂದಾಗಿತ್ತು.

ಈ ಸಡಗರದಿಂದ ಹತ್ತು ಹರದಾರಿ ಹೋಗಿ ರಾಜನು ತನ್ನ ಕೆಲಸ ತೀರಿಸಿಕೊಂಡು ಮರಳಿ ಹತ್ತು ಹರದಾರಿ ಬರಬೇಕೆಂದು ಯೋಚಿಸಿ "ಹೇಗೆ ಬಂಟನೆ, ಇಂದೆಯೇ ನಾವು ರಾಜಧಾನಿಗೆ ಹೋಗಬಹುದಷ್ಟೆ ?" ಎಂದು ತನ್ನ ಕೊಡೆಯಾಳನ್ನು ಕೇಳಿದನು. "ದೇವರೂ, ಕುದುರೆಯು ದಣಿಯದೆ ಇದ್ದರೆ ನಾನೇಕೆ ಬೇಡೆನ್ನಲಿ ? ನಡೆಯಿರಿ" ಎಂದು ನುಡಿದು ಆ ಭಟನು ಮತ್ತೆ ಟೊಂಕಕಟ್ಟಿ ಸಿದ್ಧನಾಗಿ ನಿಂತನು. ಕುದುರೆಯಾದರೂ ಕಟ್ಟದಲ್ಲಿ ನಿಂದಿರಲಾರದೆ, ಪ್ರಯಾಣದ ಸಿದ್ಧತೆಯನ್ನು ಕಂಡು ಉಭಸದಿಂದ ಹೇಂಕರಿಸಿತು. ಊರ ಕಡೆಗೆ ಹೊರಟ ಕುದುರೆಯ ವೇಗವು ಇಮ್ಮಡಿಯಾಗುವದೆಂದು ಕುದುರೆಗಳನ್ನು ಕಟ್ಟದವರು ಮನಗಂಡ ಮಾತು.

ಕೇರಳಾಧೀಶ್ವರನ ಕುದುರೆಯು ವಾಯುವೇಗದಿಂದ ಧಾವಿಸುತ್ತಿತ್ತು. "ನನ್ನ ಮುಂದೆ ನೀನೆಷ್ಟು ಓಡುವಿ ಕುದುರೆಯ ಮರಿಯೇ," ಎಂದೆನ್ನುತ್ತ ಕಡುವೇಗದ ಹುಡುಗನಾದ ಆ ಕೊಡೆಯಾಳು ಕೇರಳಾಧೀಶ್ವರನ ಮೋರೆಗೆ ಬಿಸಿಲು ತಗಲದಂತೆ ಕೊಡೆಹಿಡಿದು ಹುಯ್ಯೆಂದು ಹಾರಿಕೆಗಾಲಿಕ್ಕುತ್ತ ಓಡುತ್ತಿದ್ದನು. ಜೂಜುಕಟ್ಟಿ ಓಡುತ್ತಿರುವ ಕುದುರೆ ಕೊಡೆಯಾಳುಗಳೀರ್ವರೂ ತಮ್ಮ ಚಾಪಲ್ಯದ ಇಯತ್ತೆಯನ್ನು ಮೀರಿದರು. ಕೊಡೆಯಾಳಿನ ಜಡೆಯಿಂದೆ ಬೆವರನಿಗಳು ಗಿರಿಶಿಖರದಿಂದ ಬೀಳುವ ಗಂಗಾತುಷಾರಗಳಂತೆ ಸುರಿಯುತ್ತಿದ್ದವು. ಸಮುದ್ರದೊಳಗಿಂದ ಈಗಲೆದ್ದು ಬಂದಿರುವ ಉಚ್ಚೈಶ್ರವಸ್ಸನು ಫೇನಾವೃತನಾಗಿ ಕಾಣುವಂತೆ ಆ ಅರಸುಗುದುರೆಯು ಬೆವರಿನ ಬುರಗನ್ನು ತೆಪ್ಪತೆಪ್ಪವಾಗಿ ಸುರಿಸುತ್ತ ನಡೆದಿತ್ತು. ಕುದುರೆ ಕಾಲಾಳುಗಳೀರ್ವರೂ ಓಡಿ ದಣಿದಿದ್ದರೂ ಗತಿಯನ್ನು ಶಿಥಿಲಿಸಿದರೆ ತಮ್ಮ ಕಲಿತನವು ಕಲುಷಿತವಾಗುವದೆಂಬ ಅಭಿಮಾನಕ್ಕೆ ಈಡಾಗಿ, ಆ ಜೊತೆಗಾರರು ರಾಜಧಾನಿಯ ಮಹಾದ್ವಾರದ ವರೆಗೆ ಓಡಿಯೇ ಓಡಿದರು. ಕೋಟೆಯು ಸಮೀಪಕ್ಕೆ ಬಂದಕೂಡಲೆ ಕುದುರೆಯು ಫಕ್ಕನೆ ಮುಗ್ಗಿತು. ಕೊಡೆಯಾಳುವೂ ಗಕ್ಕನೆ ನಿಂತನು. ಕುದುರೆಯು ಲಗಬಗೆಯಿಂದ ಕಾಲೂರಿ ನಿಂತು ರಾಜನನ್ನು ಕರಕೊಂಡು ಅರಮನೆ ಮುಂದೆ ನಿಂತಿತು. ಕೊಡೆಯಾಳು ಮಾತ್ರ ಹಿಂದುಳಿದನು.

ಶ್ರಮನಿರ್ವಿಣ್ಣನಾದ ರಾಜನನ್ನು ಕಂಡು ರಾಜವೈದ್ಯರು ಅವನಿಗೆ

ಉಚಿತನಾದ ಲೇಹ್ಯಪೇಯಗಳನ್ನು ಕೊಟ್ಟು ಸಮಾಧಾನಗೊಳಿಸಿ ಹೀಗೆ ನಿಷ್ಕಾರಣವಾಗಿ ಸಾಹಸವನ್ನು ಮಾಡಿದ್ದಕ್ಕಾಗಿ ಅವನಿಗೆ ಸಿಟ್ಟು ಮಾಡಿದರು. ಅಷ್ಟರಲ್ಲಿ ರಾಯನ ಕುದುರೆಯು ನಿಂತನಿಂತಲ್ಲಿಯೇ ಪ್ರಾಣಬಿಟ್ಟಿತೆಂದು ಓರ್ವ ಸೇವಕನು ನಿವೇದಿಸಿದ್ದನ್ನು ಕೇಳಿ ಅರಸನು ವಿಸ್ಮಯಾಕುಲನಾಗಿ, ತನ್ನ ಕೊಡೆಯಾಳಿನ ಗತಿಯೇನಾಯಿತೋ ನೋಡಿರಿ ಎಂದು ವ್ಯಾಕುಲಚಿತ್ತನಾಗಿ ರಾಜವೈದ್ಯರಿಗೆ ಹೇಳಿದನು.

"ಉಪಾಯವಿಲ್ಲ, ರಾಜಾಧಿರಾಜರೆ, ಕುದುರೆಗಾದ ಗತಿಯೇ ಕೊಡೆಯಾಳಿಗೆ ಆಗಿರುವದು !" ಎಂದು ರಾಜವೈದ್ಯರು ವಿಷಾದದಿಂದ ಹೇಳಿದರು.

"ಏನೂ ಉಪಾಯವಿಲ್ಲವೆ ? ನೋಡಿರಿ, ಹೇಗಾದರೂ ಮಾಡಿ ಆ ನನ್ನ ಪ್ರಿಯ ಭೃತ್ಯನನ್ನು ಬದುಕಿಸಿಕೊಳ್ಳಿರಿ."

"ಮಹಾರಾಜರ ಕೃಪಾಪಾತ್ರನಾದ ಆ ಭೃತ್ಯನು ಓಡುವದನ್ನು ಬಿಟ್ಟು ನಿಂತಾಕ್ಷಣವೇ, ಅವನ ಹಣೆಯೊಡೆದು ರಕ್ತ ತೆಗೆದು ಅವನಿಗೆ ನೆನೆಗಡಲೆ ತಿನ್ನಲಿಕ್ಕೆ ಕೊಟ್ಟು, ಅವನನ್ನು ಕಾಲುಮೇಲಾಗಿ ಮಾಡಿ ಮಲಗಿಸಿದ್ದರೆ ಬದುಕಬಹುದಾಗಿತ್ತು. ಇಷ್ಟು ಹೊತ್ತಾದ ಬಳಿಕ ಯಾವ ಉಪಾಯಗಳಿಂದಲೂ ಪ್ರಯೋಜನವಿಲ್ಲ."

"ಅವನಿದ್ದೆಡೆಗೆ ಹೋಗಿ ನೋಡಿಯಾದರೂ ಬರೋಣ ಬನ್ನಿರಿ," ಎಂದು ಆ ಮಹಾರಾಯನು ರಾಜವೈದ್ಯನನ್ನು ಕರಕೊಂಡು ಕೊಡೆಯಾಳು ಇದ್ದ ಸ್ಥಳಕ್ಕೆ ಬಂದನು.

ಅಲ್ಲಿ ಒಂದು ಚಮತ್ಕಾರವೇ ಆಗಿತ್ತು. "**धर्मो रक्षति रक्षितः**" ಎಂಬಂತೆ, ರಾಜವೈದ್ಯರು ಹೇಳಿದ ಉಪಚಾರಗಳೆಲ್ಲ ಆ ಕೊಡೆಯಾಳಿಗೆ ದೈವಯೋಗದಿಂದೆ ಸಲ್ಲಿದ್ದವು. ಆ ಸಾಹಸಿಯಾದ ಸೇವಕನು ತನಿ ನೆಳಲಿನ ಆಸಗಾಗಿ ಬಳಿಯಲ್ಲಿಯೇ ಇರುವ ದುರ್ಗಾದೇವಿಯ ಗುಡಿಹೊಕ್ಕನು. ದೇವಾಲಯದ ಬಾಗಿಲದ ಹಣೆಪಟ್ಟಿಯು ಅವನ ಹಣೆಗೆ ಫಟ್ಟನೆ ಬಡಿದದ್ದರಿಂದ ಬಳಬಳನೆ ರಕ್ತ ಸುರಿದಿತ್ತು. ಭಕ್ತಜನರು ದೇವಿಗೆ ಉಡಿತುಂಬಿದ ನೆನೆಗಡಲೆಯ ಕಾಳುಗಳನ್ನು ಅವನು ಸಂಕಟಗರೆದು ತಿಂದಿದ್ದನು. ಮೂರು ಜೊಳ ಅಗಲವಾಗಿದ್ದ ಆ ಚಿಕ್ಕ ಗುಡಿಯಲ್ಲಿ ಅವನು ಮಲಗುವದು ಹೇಗೆ ? ಅರ್ಥಾತ್ ಕಾಲು ಮೇಲೆಮಾಡಿ ಗೋಡೆಗೆ ಆನಿಸಿ ಇಟ್ಟುಕೊಂಡು ಅವನು

ಹೇಗೋ ಮಲಗಿದ್ದನು.

ತನ್ನ ಭೃತ್ಯನು ಸುಖರೂಪನಾಗಿರುವದನ್ನು ಕಂಡು ಕೇರಳಾಧೀಶ್ವರನಿಗೆ ಪರಮ ಸಂತೋಷವಾಯಿತು. ರಾಜನು ತನ್ನ ಆಳುಮಗನ ಬೆನ್ನು ಮೇಲೆ ಕೈಯಿಟ್ಟು "ಬಂಟನೆ, ನಾನೀ ಸಮಯದಲ್ಲಿ ಬಹು ಸಂತುಷ್ಟನಾಗಿರುವೆನು. ಈ ಸಮಯದಲ್ಲಿ ನಿನ್ನ ಅಪೇಕ್ಷೆ ಏನಿರುವದು ಹೇಳು ; ನಿಶ್ಚಯವಾಗಿ ಪೂರೈಸುತ್ತೇನೆ" ಎಂದು ಆಶ್ವಾಸನವನ್ನಿತ್ತನು. ಆ ಧೀರನು ಮಹಾರಾಜರ ಕಾಲುಗಳ ಮೇಲೆ ತನ್ನ ಹಣೆಯನ್ನಿಕ್ಕಿ "ಪ್ರಭುಗಳು ವಚನವನ್ನಿತ್ತ ಮಾತ್ರದಿಂದಲೇ ನನ್ನ ಮನೋರಥವು ಸಿದ್ಧವಾಯಿತೆಂಬದರಲ್ಲಿ ಸಂದೇಹವಿಲ್ಲ. ವಚನ ಪರಿಪಾಲನದಲ್ಲಿ ಮಹಾರಾಜರು ಶಿಬಿಚಕ್ರವರ್ತಿಗೆ ಸಮಾನರಾದವರು. ಕೋರಿಕೆಯನ್ನು ನಿವೇದಿಸಲು ಆಜ್ಞೆ ಇರಲಿ" ಎಂದು ವಿಜ್ಞಾಪಿಸಿದನು.

"ಬೇಡು! ಬೇಡು! ನಿಃಶಂಕನಾಗಿ ಬೇಡು!" ಎಂದು ಮಹಾರಾಜರು ಮನಬಿಚ್ಚಿ ಹೇಳಿದರು.

"ಮಹಾರಾಜರ ಸಿಂಹಾಸನದ ಮೇಲೆ ಮೂರು ಮುಕ್ಕಾಲು ಗಳಿಗೆ ಕುಳಿತು ರಾಜ್ಯ ಮಾಡಬೇಕೆನ್ನುತ್ತೇನೆ" ಎಂದು ಆ ಸ್ವಾಮಿಭಕ್ತನು ಅಂಜುತ್ತೆ ಅಂಜುತ್ತೆ ನುಡಿದನು.

ಮಹಾರಾಜರು ಗಹಗಹಿಸಿ ನಕ್ಕು ಅಂದದ್ದು: "ಹುಚ್ಚನಿರುವಿ ನೀನು! ಮೂರು ಮುಕ್ಕಾಲು ಗಳಿಗೆ ಸಿಂಹಾಸನದ ಮೇಲೆ ಕುಳಿತರೆ ನಿನಗಾಗುವ ಲಾಭವೇನು? ಈ ಸಿಂಹಾಸನದ ಮೇಲೆ ಹತ್ತುವರುಷ ಕುಳಿತವನಾದ ನನಗೆ ಇದರಿಂದ ಸುಖದೋರಲಿಲ್ಲ. ಈ ಸಮಯದಲ್ಲಿ ನೀನು ವಿಸ್ತಾರವಾದ ಭೂಸ್ವಾಸ್ಥ್ಯಯನ್ನು ಬೇಡು. ನಿನ್ನಿಚ್ಛೆ ಇದ್ದರೆ ಅರ್ಧ ರಾಜ್ಯವನ್ನು ಬೇಡಿದರೂ ಚಿಂತೆಯಿಲ್ಲ."

"ದೇವರೂ, ಮಾತು ಆಡಿ ಹೋಯಿತು, ಮುತ್ತು ಒಡೆದು ಹೋಯಿತು. ಬೇಡಿದ್ದರಲ್ಲಿ ಹೆಚ್ಚುಕಡಿಮೆ ಮಾಡಲಾರೆನು" ಎಂದು ಏಕಮಾರ್ಗಿಯಾದ ಆ ಧೀರನು ಹೇಳಿದನು.

ಆ ಸಮಯದಲ್ಲಿ ಆ ಕೊಡೆಯಾಳಿನ ಮುಖದಲ್ಲಿ ತೋರಿದ ನಿಶ್ಚಯವನ್ನೂ, ಗ್ರಾಮ್ಯವಾದರೂ ಗಂಭೀರವಾಗಿರುವ ಅವನ ನಿಶ್ಚಯದ ನುಡಿಯನ್ನೂ ಕೇಳಿ ಕೇರಳಾಧೀಶ್ವರನಿಗೆ ಅತಿಶಯವಾದ ಆಶ್ಚರ್ಯವಾಯಿತು.

" ನಿನ್ನಿಚ್ಛೆ. ಮಗನೆ, ನೀನೆಂದು ಸಿಂಹಾಸನವನ್ನೇರಬೇಕೆನ್ನುವಿ ? " ಎಂದು ಆ ಸ್ವಾಮಿಶ್ರೇಷ್ಠನು ಕೇಳಿದನು.

" ನಾನೊಂದು ಒಳ್ಳೇ ದಿವಸವನ್ನು ಹುಡುಕಿ ಮಹಾರಾಜರ ಪಾದಕ್ಕೆ ಅರಿಕೆ ಮಾಡಿಕೊಳ್ಳುವೆನು. "

ಮುಂದಾಗುವ ಈ ಅರ್ಧಪ್ರಹರದ ರಾಜನು ತನ್ನ ಪಟ್ಟಾಭಿಷೇಕಕ್ಕೆ ಮುಂಚಿತವಾಗಿ ಕೇರಳ ದೇಶದ ತುಂಬ ಸಂಚಾರ ಮಾಡಿದನು. ಗುಡಿ ಗುಂಡಾರಗಳನ್ನೂ, ಮಠಪಾಠಶಾಲೆಗಳನ್ನೂ ಅವನು ಪ್ರತ್ಯಕ್ಷವಾಗಿ ನೋಡಿದನು. ಗ್ರಾಮಗ್ರಾಮಗಳಲ್ಲಿರುವ ಸಾಧುಸಂತರನ್ನೂ, ವಿದ್ವಜ್ಜನರನ್ನೂ ಕಂಡು ಮಾತಾಡಿಸಿ ಅವರ ಸಮಾಚಾರಗಳನ್ನು ಅರಿತುಕೊಂಡನು. ಅವರೆಲ್ಲರಿಗೂ ಇಂತಿಷ್ಟು ಭೂಸ್ವಾಸ್ಥ್ಯವನ್ನು ಕೇರಳ ದೇಶಾಧಿಪತಿಗಳು ಕೊಡುವರೆಂದೂ ಆ ಜನರೆಲ್ಲರೂ ತಮ್ಮ ಇಚ್ಛೆಗೆ ಬಂದಲ್ಲಿ ಭೂಮಿಗಳನ್ನು ಕಂಡುಕೊಂಡು, ಆ ಬಗ್ಗೆ ತಮಗೆ ಸಿಕ್ಕತಕ್ಕ ಸನದುಗಳನ್ನು ತಾವು ಬರೆದಿಟ್ಟುಕೊಂಡಿರಬೇಕೆಂತಲೂ, ಇಂಥದೊಂದು ಮುಹೂರ್ತದಲ್ಲಿ ಆ ಸನದುಗಳಿಗೆ ರಾಜಮುದ್ರೆಯಾಗುವದೆಂದೂ ಹೇಳುತ್ತ ನಡೆದಿದ್ದನು.

ಶುಭಮುಹೂರ್ತದಲ್ಲಿ ಕೊಡೆಯಾಳು ಭೂಪಾಲನು ಪಟ್ಟವೇರಿದನು ಭಾಗ್ಯಶಾಲಿಯಾದ ನೃಪನು ಪಟ್ಟವೇರಿದ ಕಾಲಕ್ಕೆ ಕೇರಳ ದೇಶವಾಸಿಗಳಾದ ಪಂಡಿತರೂ, ದಶಗ್ರಂಥಿಗಳಾದ ವಿಪ್ರೋತ್ತಮರೂ, ತಪಸ್ವಿಗಳಾದ ಸಾಧುಸಂತರೂ ಪವಿತ್ರವಾದ ದೇವಾಲಯಗಳ ಅರ್ಚಕರೂ ದಯಮಾಡಿದ್ದರು. ರಾಜಧಾನಿಯಲ್ಲಿ ಎತ್ತ ನೋಡಿದತ್ತ ಜರದ ಶಾಲಿನವರೂ, ಕಾಷಾಯವಸನದವರೂ, ಜಡೆಲಂಗಟದವರೂ ಸಂತೆಗೆ ನೆರೆದಂತೆ ನೆರೆದಿದ್ದರು.

ಕೊಡೆಯಾಳು ಭೂಪಾಲನು ಪಟ್ಟವೇರುವಾಗ ವೇಷದ ಸೊಬಗಿನಲ್ಲಿಯಾಗಲಿ, ವಾದ್ಯವೈಭಗಳ ಮೆರವಣಿಗೆಯಲ್ಲಾಗಲಿ ಕಾಲಹಾನಿಯನ್ನು ಮಾಡದೆ ತಾನು ಧರಿಸಿರುವ ಕೇಳುತರದ ಉಡುಪಿನಿಂದಲೇ ಪಟ್ಟವೇರಿ, ಒಮ್ಮೆಲೆ ಜನರು ತಂದಿರುವ ಸನದುಗಳಿಗೆ ರಾಜಮುದ್ರೆಯನ್ನು ಎಡೆಬಿಡದೆ ಜಡೆಯಲಾರಂಭಿಸಿದನು. ಕ್ಷಣಹೊತ್ತು ಕಳೆದರೆ ಯಾವ ಬ್ರಾಹ್ಮಣನ ಸನದಿಗೆ ಮುದ್ರೆ ಇಲ್ಲದಂತಾಗುವದೋ ಎಂಬ ಯೋಚನೆಗಾಗಿ ಆ ಮಹಾತ್ಮನು ಮೈತುಂಬ ಕಣ್ಣುಳ್ಳವನಾಗಿ ತನ್ನ ಕೆಲಸವನ್ನು ನಡೆಸಿದ್ದನು. ತನಗಿದ

ಅಧಿಕಾರದ ಅಲ್ಪಾವಧಿಯ ಕಾಲದಲ್ಲಿ ಧರ್ಮಮೂರ್ತಿಯಾದ ಮಹಾತ್ಮನು ತುಸು ಕಡಿಮೆ ಎಲ್ಲ ಸನದುಗಳಿಗೆ ಮುದ್ರೆ ಬಡಿದುಬಿಟ್ಟನು.

“ ಇನ್ನೂ ಕೆಲವು ಸನದುಗಳು ಮುದ್ರೆಯಾಗದೆ ಉಳಿಯುವವು; ಅವಕ್ಕೇನು ಮಾಡುವೆ ? ” ಎಂದು ಕೇರಳಾಧೀಶ್ವರನು ಆ ಮೂರುಮುಕ್ಕಾಲು ಗಳಿಗೆಯ ರಾಜನನ್ನು ಕೇಳಿ ನಕ್ಕನು.

ಕೊಡೆಯಾಳು ಆ ಮಾತಿಗೆ ನಕ್ಕು “ ಸದ್ಯಕ್ಕೆ ನಾನು ಸರ್ವಶಕ್ತನಾದ ರಾಜನಷ್ಟೆ ? ನನ್ನ ತರುವಾಯದಲ್ಲಿ ಈ ಪಟ್ಟವನ್ನೇರುವ ರಾಜನಿಗೆ ಉಳಿದ ಸನದುಗಳಿಗೆ ಮುದ್ರೆ ಮಾಡಿ ಕೊಡಲು ಆಜ್ಞಾಪಿಸುತ್ತೇನೆ ” ಎಂದು ನುಡಿದವನೇ ನಾಲ್ಕನೆಯ ಗಳಿಗೆಬಟ್ಟಲು ಮುಕ್ಕಾಲು ಪಾಲು ನೀರಲ್ಲಿ ಮುಳುಗಿದ್ದು ಕಂಡು ಸಿಂಹಾಸನದಿಂದಿಳಿದನು.

ಪಟ್ಟದಿಂದಿಳಿದ ತನ್ನ ಪರಮೋದಾರನಾದ ಭೃತ್ಯನನ್ನು ಕಂಡು ಕೇರಳಾಧೀಶ್ವರನು ಪರಮ ಸಂತುಷ್ಟನಾಗಿ ಅವನನ್ನು ಗಟ್ಟಿಯಾಗಿ ಆಲಿಂಗಿಸಿದನು. ಕಣ್ಣುಗಳಲ್ಲಿ ಆನಂದಾಶ್ರುಗಳನ್ನು ಸುರಿಸುತ್ತಿ ಆ ರಾಜಾಧಿರಾಜನು ತನ್ನ ಭೃತ್ಯರಾಜನನ್ನು ಕುರಿತು ನುಡಿದದ್ದು : “ ಮಗನೆ, ನೀನು ಇಮ್ಮಡಿ ಕರ್ಣನು. ಮೂರುಮುಕ್ಕಾಲು ಗಳಿಗೆ ಈ ಸಿಂಹಾಸನವನ್ನೇರಿ ಅಜರಾಮರವಾದ ಕೀರ್ತಿಯನ್ನು ಪಡೆದಿ. ಹತ್ತು ವರ್ಷ ನಾನು ಇದೇ ಸಿಂಹಾಸನದ ಮೇಲೆ ವ್ಯರ್ಥವಾಗಿ ಕುಳಿತೆನು. ನಿನ್ನ ಸಂಬಂಧದಿಂದ ‘ಇಂಥ ಮಹಾತ್ಮನ ಯಜಮಾನನು’ ಎಂಬ ಮಧ್ಯಮಪ್ರತಿಯ ಕೀರ್ತಿಯಾದರೂ ನನ್ನ ಪಾಲಿಗೆ ಬಂದಿತು. ಅಷ್ಟೇ ನನಗೆ ಸಾಕು. ನಾನಿನ್ನು ನಿನ್ನ ಹೇಳಿಕೆಯ ಮೇರೆಗೆ ಸನದುಗಳಿಗೆ ಮುದ್ರೆ ಮಾಡುತ್ತೇನೆ. ಇನ್ನೇನಾದರೂ ನಿನ್ನ ಇಚ್ಛೆ ಇರುವದೋ ? ”

ಕೊಡೆಯಾಳು ಭೂಪಾಲನು ತನ್ನ ಒಡೆಯನ ಚರಣಗಳನ್ನು ಗಟ್ಟಿಯಾಗಿ ಹಿಡಿದು ಅವುಗಳನ್ನು ಕೃತಜ್ಞತಾಪೂರ್ವಕವಾಗಿ ಆನಂದಾಶ್ರುಗಳಿಂದ ಅಭಿಷೇಕಿಸಿ, ಪೂಜೆಗೈದು ನಮಸ್ಕರಿಸಿ “ಮಹಾಪ್ರಭೋ, ನಾನೆಷ್ಟರವನು ! ನನ್ನ ಯೋಗ್ಯತೆ ಯಾತರದು ! ಪ್ರಭುಗಳು ಸೇವಕನನ್ನು ಸಂಭಾವಿಸಿದ ಪುಣ್ಯ ಕಥೆಯೋ ಇದು. ದಾತೃಶಿರೋಮಣಿಗಳಾದ ಮಹಾರಾಜರ ಬಳಿಯಲ್ಲಿ ನಾನಿನ್ನೇನು ಕೇಳಿಕೊಳ್ಳಲಿ ? ಪುಣ್ಯಮಯವಾದ ಈ ಪಾದಗಳ

ಸೇವೆಯು ನನಗೆ ಯಾವಜ್ಜೀವವೂ ತಪ್ಪಲಾಗದೆಂದೂ, ಮಹಾರಾಜರ ಮೇಲೆ ನಾನು ಹಿಡಿಯುತ್ತಿರುವ ಕೊಡೆಯು ಇನ್ನೊಬ್ಬರ ಕೈಸೇರಬಾರದೆಂದೂ ನಾನು ಬೇಡಿಕೊಳ್ಳುತ್ತೇನೆ'' ಎಂದು ಕೇಳಿಕೊಂಡನು.

ಕೇರಳಾಧೀಶ್ವರನೂ, ಅವನ ಮಂತ್ರಿಗಳೂ, ನಾಗರಿಕರೂ, ವಿಪ್ರಮುನಿವರರೂ ಆ ಕೊಡೆಯಾಳ ಭೂಪಾಲನ ಮೇಲೆ ಪುಷ್ಪಾಕ್ಷತೆಗಳ ಮಳೆಗರೆದರು. ಈ ಪುಣ್ಯತಮವಾದ ಕಥೆಗೆ ಮಹಾತ್ಮರಾರೂ ಫಲಶ್ರುತಿಯನ್ನು ಬರೆಯಲಿಲ್ಲ. ಆದರೆ ಇದರ ಶ್ರುತಿಫಲವಿಲ್ಲವೆಂದು ಮಾತ್ರ ಯಾರೂ ನಂಬಲಾಗದು.

ಇದು ಕಟ್ಟುಕಥೆಯಲ್ಲ. ನಿಜವಾದ ಇತಿಹಾಸವಿದು. ಕೊಡೆಯಾಳು ಭೂಪಾಲನು ಹಾಕಿಕೊಟ್ಟ ಭೂಮಿಗಳ ಸೀಮೆಯ ಕಲ್ಲುಗಳ ಮೇಲೆ ಅಶ್ವಾರೂಢನಾದ ರಾಜನ ತಲೆಯ ಮೇಲೆ ಕೊಡೆ ಹಿಡಿದ ಬಂಟನ ಮೂರ್ತಿಗಳು ಇಂದಿಗಾದರೂ ಕಾಣುವವೆಂದು ಕೆಲಜನ ಪ್ರವಾಸಿಗಳು ಹೇಳುವದುಂಟು.

---

# ರಾಸಪುಟಿನ

"ವಿಷಮಪ್ಯಮೃತಂ ಕ್ವಚಿದ್ಭವೇದಮೃತಂ ವಾ ವಿಷಮೀಶ್ವರೇಚ್ಛಯಾ"— ಈಶ್ವರೇಚ್ಛೆಯಿಂದ ವಿಷವು ಒಮ್ಮೊಮ್ಮೆ ಅಮೃತವಾಗಿಯೂ ಅಮೃತವು ವಿಷವಾಗಿಯೂ ಪರಿಣಮಿಸುತ್ತದೆಂಬ ಭಾವಾರ್ಥದ ವಾಕ್ಯವನ್ನು ಕವಿಕುಲಶ್ರೇಷ್ಠನಾದ ಕಾಲಿದಾಸನು ಹೇಳಿ ಎರಡು ಸಾವಿರ ವರ್ಷಗಳಾಗಿ ಹೋಗಿದ್ದರೂ ಆ ವಾಕ್ಯದ ಸತ್ಯತೆಯು ಈಗಿನ ಮಹಾಯುದ್ಧದ ಕಾಲದಲ್ಲಿ ಜಗತ್ತಿಗೆಲ್ಲ ಸ್ಪಷ್ಟವಾಗಿ ಒಡೆದುತೋರಿದಂತೆ ಈ ಮುಂಚಿತವಾಗಿ ಎಂದೂ ತೋರಲಿಲ್ಲ. ಮೇಲಿನ ಉಕ್ತಿಯು ಕವಿಯ ಕಲ್ಪನೆಯೆಂದೆ ಈವರೆಗೆ ಅನೇಕರು ತಿಳಿದುಕೊಳ್ಳುತ್ತಿದ್ದರು. ಯುರೋಪದಲ್ಲಿ ಮಹಾಯುದ್ಧವು ಪ್ರಾರಂಭವಾದ ಬಳಿಕ ಅನೇಕವಾದ ಆಪತ್ತಿಗಳಿಗೆ ಈ ಜಗತ್ತು ಈಡಾಯಿತು. ಲೆಕ್ಕವಿಲ್ಲದಷ್ಟು ರಕ್ತವು ಸುರಿಯಿತು. ಸಮರಭೂಮಿಗಳಲ್ಲಿ ಹರಡಿಕೊಂಡಿರುವ ಎಲಬುಗಳ ರಾಶಿಯನ್ನು ಒಟ್ಟಿದರೆ, ಅದೊಂದು ಪರ್ವತಪ್ರಾಯವೇ ಆಗುವದು. ಯುದ್ಧಕ್ಕಾಗಿ ಪ್ರತಿನಿತ್ಯದಲ್ಲಿಯೂ ವೆಚ್ಚಾದ ಹಣವನ್ನು ಒಂದು ಸ್ಥಳದಲ್ಲಿ ಕೂಡಿಹಾಕಿದರೆ ಅದೊಂದು ಕನಕಗಿರಿಯೇ ಆಗುವದು. ಶಾಂತತಾಪ್ರಿಯರೂ ನಿರಪರಾಧಿಗಳೂ ಆದ ಅಸಂಖ್ಯಾತ ಜನರು ಧನಭ್ರಷ್ಟರೂ ದೇಶಭ್ರಷ್ಟರೂ ಆದರು. ಯುವತಿಯರ ಸರ್ವಸ್ವವಾದ ಮರ್ಯಾದೆಗೆ ಎಷ್ಟೋ ಎಡೆಗಳಲ್ಲಿ ಭಂಗವುಂಟಾಯಿತು. ಯುದ್ಧದ ಚಿತ್ರವು ಈ ರೀತಿಯಾಗಿ ಭಯಾನಕವಾಗಿದ್ದರೂ ಭವಿಷ್ಯತ್ಕಾಲದಲ್ಲಿ ಜಗತ್ತಿನ ತುಂಬೆಲ್ಲ ಬಂಧುಭಾವವನ್ನು ಹಬ್ಬಿಸಿ ಜಗತ್ತಿಗೆ ಸುಖಶಾಂತಿಗಳನ್ನೀಯುವ ಉದಾತ್ತವಾದದ್ದೊಂದು ತತ್ವವು ಯುದ್ಧಪ್ರಾರಂಭದಿಂದಲೇ ಕ್ರಮೇಣ ಅಡಿಗಳನ್ನಿಕ್ಕುತ್ತ ಮುಂದಕ್ಕೆ ಬರುತ್ತಿತ್ತು. ಅಥವಾ ಈ ತತ್ವದ ವಿಕಾಸಕ್ಕಾಗಿಯೇ ಈ ಯುದ್ಧವು ಪ್ರಾರಂಭವಾಯಿತೆಂದರೂ ಅದು ಅತಿಶಯೋಕ್ತಿಯಾಗಲಿಕ್ಕಿಲ್ಲ. ಮಿತ್ರಸಂಘದವರು ಜರ್ಮನಿಯ ಕ್ಷಾತ್ರಶಕ್ತಿಯ ಅಹಮ್ಮನ್ಯತೆಯ ವಿರುದ್ಧವಾಗಿ ಯುದ್ಧವನ್ನು ಸಾರಿ ರಣಭೇರಿಯನ್ನು ಹೊಡಿಸಿದಾಗ ನಿರ್ಬಲವಾದ ರಾಷ್ಟ್ರಗಳ ಸ್ವಾತಂತ್ರ್ಯ ರಕ್ಷಣವೇ ಅವರ ಉದ್ದೇಶವಾಗಿತ್ತು. ಆದರೆ, ಕಳೆದ ತಿಂಗಳಿನಲ್ಲಿ ಅಮೇರಿ

ಕೆಯು ಮಿತ್ರಸಂಘದವರನ್ನು ಕೂಡಿಕೊಂಡು ಜರ್ಮನಿಯ ವಿರುದ್ಧವಾಗಿ ಯುದ್ಧವನ್ನು ಸಾರುವಾಗ, ಅಲ್ಲಿಯ ಪ್ರೆಸಿಡೆಂಟರಾದ ಮಿ. ಉಡ್ರೋ ವಿಲ್ಸನ್ ಇವರು, ಜಗತ್ತಿನೊಳಗಿನ ಏಕಮುಖಿಯಾದ ರಾಜಸತ್ತೆಯನ್ನು ಮರ್ಯಾದಿತ ಮಾಡಿ ಬಹುಮುಖಿಯಾದ ಲೋಕಸತ್ತೆಯನ್ನು ಪ್ರಸ್ಥಾಪಿತ ಮಾಡುವದಕ್ಕಾಗಿಯೇ ಈ ಯುದ್ಧವು ಪ್ರಾರಂಭವಾಗಿದೆಂದು ಹೇಳಿ, ಸಾಮಾನ್ಯರಾದ ಜನರ ದೃಷ್ಟಿಗೆ ಅಗೋಚರವಾಗಿ ಬೆಳೆಯುತ್ತಿರುವ ಈ ತತ್ವದ ಸ್ವರೂಪವನ್ನು ತಿಳಿಸಿಕೊಟ್ಟರು. ರಶಿಯಾದಲ್ಲಿ ರಾಜ್ಯಕ್ರಾಂತಿಯಾಗಿ ರಶಿಯನ್ ರಾವಣನಾದ ಝಾರನು ಪದಭ್ರಷ್ಟನಾಗಿ ಅಲ್ಲಿ ಲೋಕಸತ್ತಾತ್ಮಕ ರಾಜ್ಯಪದ್ಧತಿಯು ಉದಯವಾದಾಗ ಇಂಗ್ಲಂಡದ ಮುಖ್ಯಪ್ರಧಾನರಾದ ಲಾಯಿಡ್ ಜಾರ್ಜರವರು ರಶಿಯನ್ ಡ್ಯೂಮಾರವರನ್ನು ಅಭಿನಂದಿಸುವ ಕಾಲಕ್ಕೆ ಈ ಮೇಲ್ಕಂಡ ತತ್ವದ ವಿಶ್ವವ್ಯಾಪಕತ್ವವನ್ನು ಜಗತ್ತಿಗೆಲ್ಲ ತೋರಿಸಿದರು.

ಸದ್ಯಕ್ಕೆ ಈ ವಿಚಾರಕ್ಕೆ ಮಹತ್ವ ಬರಲು ಕಾರಣವಾದ ರಶಿಯನ್ ರಾಜ್ಯಕ್ರಾಂತಿಯಲ್ಲಿ ಮೊದಲನೆಯ ಆಹುತಿಯಾಗಿ ಬಿದ್ದ ರಾಸಪುಟಿನನ ಕುಟಿಲನೀತಿ ಆಚಾರ-ವಿಚಾರಗಳ ಇತಿವೃತ್ತವನ್ನೇ ಹೇಳುವದು ನಮ್ಮ ಉದ್ದೇಶವಾಗಿರುವದರಿಂದ, ಏಕಸತ್ತಾತ್ಮಕವಾದ ರಾಜ್ಯಪದ್ಧತಿಗಿಂತಲೂ ಲೋಕನಿಯಂತ್ರಿತವಾದ ರಾಜ್ಯಪದ್ಧತಿಯು ಲೋಕಕ್ಕೆ ಏಕೆ ಹಿತಕರವಾದದ್ದೆಂಬದನ್ನು ಹೇಳುವ ಉದ್ಯೋಗಕ್ಕೆ ನಾವು ಇಲ್ಲಿ ಬೀಳುವದಿಲ್ಲ. ರಶಿಯಾದೊಳಗಿನ ಕ್ರಾಂತಿಕಾರಕ ಪಕ್ಷದವರು ತಮ್ಮ ಉದ್ದೇಶವು ಸಫಲವಾಗಬೇಕೆಂದು ಈಗ್ಗೆ ಎಷ್ಟೋ ವರ್ಷಗಳಿಂದ ಅವ್ಯಾಹತವಾಗಿ ಪ್ರಯತ್ನಪಡುತ್ತಿದ್ದರು. ಹೀಗೆ ಪ್ರಯತ್ನವನ್ನು ಮಾಡುತ್ತಿರುವವರಲ್ಲಿ ಸಾವಿರಾರು ಜನರು ಝಾರನ ಕ್ರೋಧಾಗ್ನಿಯಿಂದ ಸುಡಿದುಹೋದರು. ಲೋಕಹಿತವಾದಿಗಳಾದ ಈ ಜನರ ಹತ್ಯೆಯ ಪಾಪದ ಭಾರದಿಂದ ಝಾರನ ಏಕಮುಖೀ ರಾಜಸತ್ತೆಯ ಮಂದಿರವು ವಿಸ್ಖಲಿತವಾಗಿಹೋಗಿತ್ತು. ಪರರಾಷ್ಟ್ರಗಳ ಯುದ್ಧವನ್ನು ಮಾಡುವದರಲ್ಲಿ ರಾಜಸತ್ತೆಯು ತೊಡಗಿತೆಂದರೆ, ಕ್ರಾಂತಿಕಾರಕ ಜನರಿಗೆ ಅದೊಂದು ಸುಸಂಧಿಯು ಪ್ರಾಪ್ತವಾದಂತಾಗುತ್ತದೆ. ಇಂಥ ಸುಸಂಧಿಯು ರಶಿಯನ್ ಕ್ರಾಂತಿಕಾರರಿಗೆ ರುಸೋಜಪಾನಿ ಯುದ್ಧದಲ್ಲಿ ಮೊದಲನೆಯ ಸಾರೆ ದೊರೆಯಿತು. ಈ ಸುಸಂದಿಯ ಲಾಭವನ್ನು ಕ್ರಾಂತಿಕಾರಕ ಪಕ್ಷದವರು ತೆಗೆದು

ಕೊಂಡಿದ್ದರಿಂದ, ಲೋಕಸತ್ತೆಯು ಜಯದ ಚಿಹ್ನವಾದ ಡ್ಯೂಮಾಸಭೆಯ ಸ್ಥಾಪನೆಯು ಆ ಕಾಲಕ್ಕಾಯಿತು. ಆದರೆ, ಡ್ಯೂಮಾಸಭೆಗೆ ಝಾರನು ಯಾವದೇರೀತಿಯಾಗಿ ಮರ್ಯಾದೆಯನ್ನು ತೋರಿಸದ್ದರಿಂದ ಪ್ರಚಲಿತಮಹಾ ಯುದ್ಧದ ಸಂಧಿಯನ್ನು ಸಾಧಿಸಿ, ಕ್ರಾಂತಿಕಾರಕ ಪಕ್ಷದವರು ಮತ್ತೆ ತಮ್ಮ ಧ್ವಜವನ್ನು ನಿಲ್ಲಿಸಿ, ಈ ಸಾರೆ ತಮಗೆ ಸಂಪೂರ್ಣವಾದ ಜಯವನ್ನು ಪ್ರಾಪ್ತ ಮಾಡಿಕೊಂಡರು. ಕ್ರಾಂತಿಕಾರಕ ಪಕ್ಷದವರಿಗೆ ಒಬ್ಬ ಝಾರನಿಂದಲೇ ಭೀತಿ ಇರದೆ, ಏಕಮುಖಿಯಾದ ಸತ್ತೆಯ ಮೂಲಕವಾಗಿ ಜನ್ಮಹೊಂದಿದ ಝಾರನ ಅನುಷಂಗಿಗಳಾದ ಡ್ಯೂಕರೇ ಮೊದಲಾದ ರಾಜವಂಶಸ್ಥರ ಭೀತಿಯಾದರೂ ಇದ್ದೇ ಇದ್ದಿತು. ಯಾಕೆಂದರೆ, ಇವರೆಲ್ಲರೂ ಏಕತಂತ್ರವಾದ ಸತ್ತೆಯ ಪ್ರತಿಬಿಂಬರಾಗಿದ್ದು, ಬಲಶಾಲಿಗಳೂ ಸತ್ತಾಧಿಕಾರಿಗಳೂ ಆಗಿದ್ದರು. ಆದರೆ ಈ ಜನರೆಲ್ಲ ಯುದ್ಧದಲ್ಲಿ ತೊಡಕಿ, ರಾಜಧಾನಿಯನ್ನು ಬಿಟ್ಟು ಸಾವಿರಾರು ಮೈಲುಗಳ ಅಂತರದ ಮೇಲೆ ಹೋಗಿರುವದನ್ನು ಕಂಡು, ಕ್ರಾಂತಿಕಾರಕ ಪಕ್ಷ ದವರು ಈ ಸಂಧಿಯನ್ನು ಸಾಧಿಸಿದರು. ಝಾರನ ಹತ್ತರದಲ್ಲಿದ್ದ ಸೈನ್ಯವೆಲ್ಲ ಫಿತೂರಿ, ಕ್ರಾಂತಿಕಾರಕ ಪಕ್ಷದವರಿಗೆ ಬಲಾಢ್ಯ ಶತ್ರುವೂ ರಾಜಪಕ್ಷದವರಿಗೆ ದೊಡ್ಡ ಬೆಂಬಲನೂ ಝಾರ ಹಾಗೂ ಅವನ ಪತ್ನಿಯರಾದ ಝರೀನಾ ಇವರನ್ನು ಆರಂಭಮಾಡಿಕೊಂಡು, ಯಃಕಶ್ಚಿತನಾದ ಮನುಷ್ಯನ ವರೆಗೆ ತನ್ನ ಅಧಿಕಾರವನ್ನು ನಡಿಸಿದವನೂ ಆದ ಮಂಕರ ರಾಸಪುಟಿನ ಎಂಬವನ ಕೊಲೆಯನ್ನು ಕ್ರಾಂತಿಕಾರಕ ಪಕ್ಷದವರು ಡಿಸೆಂಬರದ ಕೊನೆಯ ವಾರದಲ್ಲಿ ಮಾಡಿದರು. ರುಧಿರಪ್ರಿಯಳಾದ ಕ್ರಾಂತಿಯ ದೇವತೆಗೆ ಕೊಡಲ್ಪಟ್ಟ ಬಲಿಗಳಲ್ಲಿ ಇವನೇ ಮೊದಲನೆಯವನು. ಈ ವ್ಯಕ್ತಿಯ ಚರಿತ್ರವು ವಿಚಿತ್ರವಾಗಿರು ವದರಿಂದ ಅದನ್ನು ಇಲ್ಲಿ ಅಲ್ಪಶಃ ಕೊಡುತ್ತೇವೆ.

ಸಾಯಬಿರಿಯಾ ಪ್ರಾಂತದಲ್ಲಿ ಟೀಬೋಲಸ್ಕದಲ್ಲಿ ರಾಸಪುಟಿನನ ಜನ್ಮ ವಾಯಿತು. ಆಯುಷ್ಯದ ಮೊದಲನೆಯ ಮೂವತ್ತು ವರ್ಷಗಳನ್ನು ಇವನು ಒಕ್ಕಲತನದ ವ್ಯವಸಾಯದಲ್ಲಿಯೇ ಕಳೆದನು. ರಾಸಪುಟಿನನು ಮಹತ್ವಾ ಕಾಂಕ್ಷಿಯೂ ಧೈರ್ಯಶಾಲಿಯೂ ಬುದ್ಧಿವಂತನೂ ಆಗಿದ್ದಂತೆಯೇ ವಿಷ ಯೋಪಭೋಗಿಯೂ ಲೋಭಿಯೂ ಆಗಿದ್ದನು. ಅಮಿತವಾದ ದ್ರವ್ಯವನ್ನೂ ಅಧಿಕಾರವನ್ನೂ ಸಂಪಾದಿಸುವ ಮಹತ್ವಾಕಾಂಕ್ಷೆಯು ಇವನಲ್ಲಿ

ಅನಿವಾರ್ಯವಾಗಿತ್ತು. ಈ ಗುಣಗಳು ಅವನನ್ನು ಸುಮ್ಮನೆ ಕೂಡ ಗೊಡಲಿಲ್ಲ, ಸಾಧುಸಂತರ ಅಥವಾ ಸನ್ಯಾಸಿಗಳ ವೇಷವನ್ನು ತೊಟ್ಟು ಮೂಢಭಕ್ತರನ್ನು ಮೋಸಗೊಳಿಸುತ್ತ ಧರ್ಮಜಾಗ್ರತಿಯನ್ನು ಮಾಡುವ ಮಿಷದಿಂದ ದೇಶಸಂಚಾರವನ್ನು ಮಾಡುತ್ತಿರುವ ಅನೇಕ ಜನರನ್ನು ನಮ್ಮಲ್ಲಿ ಕಾಣಬಹುದು. ಈ ಜನರಂತೆಯೇ ರಾಸಪುಟಿನನಿಗಾದರೂ ವಿಷಯ ಗಳಲ್ಲಿ ವೈರಾಗ್ಯವುಂಟಾಗಿ ಧರ್ಮಜಾಗ್ರತಿಯನ್ನು ಮಾಡುವ ಬುದ್ಧಿ ಯುಂಟಾಯಿತು. ಮತ-ಮತಾಂತರಗಳಲ್ಲಿ ಸಂಚರಿಸುತ್ತ ಅಲ್ಲಿ ಪ್ರಚಲಿತ ವಾಗಿದ್ದ ಕ್ರಿಸ್ತೀಮತದ ಮೇಲೆ ಟೀಕೆಯನ್ನು ಮಾಡುವದೇ ಅವನ ಪ್ರಾರಂ ಭದ ಕಾರ್ಯವಾಗಿತ್ತು. ಇದೇ ಮಾರ್ಗದಿಂದಲೇ ಅವನು ಸರ್ವತ್ರದಲ್ಲಿ ತನ್ನ ವರ್ಚಸ್ಸನ್ನು ಸ್ಥಾಪಿಸಿದನು. ಬರುಬರುತ್ತ ರಾಸಪುಟಿನನು ಧರ್ಮದ ರಾಜ್ಯದಲ್ಲಿ ಪ್ರಸಿದ್ಧನಾದ ವ್ಯಕ್ತಿಯೇ ಆಗಿ ಕುಳಿತನು.

ಸಾಯಬಿರಿಯಾ ಪ್ರಾಂತದ ಜನರು ಮೊದಲೇ ಸಶಕ್ತರು. ಅದರ ಲ್ಲಿಯೂ ರಾಸಪುಟಿನನು, ಹಗಲಿರುಳು ಹೊಲದಲ್ಲಿ ದುಡಿಯುವ ತಂದೆತಾಯಿ ಗಳ ಹೊಟ್ಟೆಯಲ್ಲಿ ಹುಟ್ಟಿದವನಾದ್ದರಿಂದ ಇವನು ಶರೀರದಿಂದ ಭವ್ಯನೂ ಸಶಕ್ತನೂ ಆಗಿದ್ದನು. ಸುಂದರವೂ ಚಿತ್ತಾಕರ್ಷಕವೂ ಇವನ ಮುಖಮುದ್ರೆ, ಉಚ್ಚವಾದ ಭಾಲಪ್ರದೇಶ, ತೇಜಃಪುಂಜವಾದ ನೇತ್ರಯುಗ್ಮ, ವಿಸ್ತಾರ ವಾದ ಹೃದಯ ಮುಂತಾದವುಗಳ ಪರಿಣಾಮವು ಅವನನ್ನು ನೋಡುವವರ ಮೇಲೆ ವಿಲಕ್ಷಣವಾಗಿ ಆಗುತ್ತಿತ್ತು. ಅವನ ಮಾತುಕಥೆಗಳಲ್ಲಾದರೂ ಒಂದು ಪ್ರಕಾರದ ಮೋಹಕತನವಿತ್ತು. ಇಂಥ ಅನೇಕವಾದ ಗುಣಗಳ ಸಹಾಯವು ಅವನಿಗೆ ಇದ್ದದರಿಂದ ರಾಸಪುಟಿನನ ವರ್ಚಸ್ಸು ದಿನೇದಿನೇ ಬೆಳೆಯಹತ್ತಿತು. ಸ್ತ್ರೀಯರ ಮೇಲಂತೂ ಅವನ ಅಂಗಸೌಂದರ್ಯದ ಹಾಗೂ ಧಾರ್ಮಿಕ ಉಪದೇಶದ ಪರಿಣಾಮವು ಒಳಿತಾಗಿಯೇ ಆಗಹತ್ತಿತು. ಸಾಯಬಿರಿಯಾದಿಂದ ಹೊರಟ ಅವನ ಧಾರ್ಮಿಕ ಮತದ ತೆರೆಗಳು ರಶಿ ಯಾದ ರಾಜಧಾನಿಯಾದ ಸೆಂಟಪಿಟರ್ಸಬರ್ಗದ ಬಾಗಿಲಕ್ಕೆ ಬಂದು ಅಪ್ಪಳಿಸ ಹತ್ತಿದವು. ತನ್ನ ಅಮೋಘವಾದ ವಕ್ತೃತ್ವದ ಬಲದಿಂದ ಸಾಯಬಿರಿಯಾ ದೊಳಗಿನ "ಪುರಾಣಮಿತ್ಯೇವ ಹಿ ಸಾಧು ಸರ್ವಂ" ಎಂದು ಪ್ರತಿಪಾದಿಸುತ ಕ್ರಿಸ್ತಿ ಮತಾಭಿಮಾನಿಗಳ ನಾಲಿಗೆಯನ್ನು ಕಟ್ಟಿದನು. ರಾಸಪುಟಿನನ ಈ

ಧರ್ಮಸುಧಾರಣೆಯ ಪ್ರಯತ್ನಕ್ಕೆ ಅಲೌಕಿಕವಾದ ಬೇರೊಂದು ಶಕ್ತಿಯು ಬೆಂಬಲವಾಗಿತ್ತು. ಆ ಶಕ್ತಿಯೆಂದರೆ, ಹಿಪ್ನಾಟಿಝಮ್ ಅಥವಾ ವಿದ್ಯುನ್ಮಾನಸಶಾಸ್ತ್ರವು. ರಾಸಪುಟಿನನು ತನ್ನ ಕೇವಲವಾದ ಆಶೀರ್ವಾದದಿಂದಲೂ ದೃಷ್ಟಿಕ್ಷೇಪದಿಂದಲೂ ಅಸಾಧ್ಯವಾದ ರೋಗಗಳನ್ನು ವಾಸಿಮಾಡುತ್ತಾನೆಂಬ ವಿಶ್ವಾಸವು ಸರ್ವಸಾಧಾರಣರಾದ ಜನರಲ್ಲಿ ನೆಲೆಗೊಂಡಿತ್ತು. ಇಂಥ ಅನುಭವವಾದರೂ ಅನೇಕರಿಗೆ ಬಂದಿತ್ತು. ಕ್ರಮೇಣ, ರಾಸಪುಟಿನನೆಂದರೆ ದೈವೀಚಮತ್ಕಾರಗಳನ್ನು ಮಾಡುವ ಸಿದ್ಧಪುರುಷನೂ, ಹರಿಕೆಗಳನ್ನು ಹೊತ್ತರೆ ಪ್ರಸನ್ನನಾಗುವವನೂ ಎಂಬ ವಿಶ್ವಾಸವು ಧರ್ಮಸಂಮೂಢರೂ ಜಡಮತಿಗಳೂ ಆದ ಅನಾಥರಿಂದ, ಧನಾಢ್ಯರೂ ಗರ್ಭಶ್ರೀಮಂತರೂ ಆದ ಸರದಾರರ ಕುಟುಂಬಗಳೊಳಗಿನ ಸ್ತ್ರೀಯರ ವರೆಗೆ ದೃಢವಾಗಿದ್ದರಿಂದ ತನ್ನ ಕೈಕಾಲುಗಳನ್ನು ಚಾಚಲು ಅವನಿಗೆ ಅವಕಾಶ ದೊರೆಯಿತು. ಇದರಿಂದ ರಾಸಪುಟಿನನ ಶಿಷ್ಯಸಂಪತ್ತು ಬೆಳೆಯಿತು ; ಹತ್ತರದಲ್ಲಿ ದ್ರವ್ಯಸಂಚಯವಾಯಿತು ; ಅವನ ಧರ್ಮಮತದ ಪ್ರಸಾರವನ್ನು ಮಾಡುವದಕ್ಕಾಗಿ ಸ್ಥಲಸ್ಥಲಾಂತರಗಳಲ್ಲಿ ಧರ್ಮಾಲಯಗಳು ಸ್ಥಾಪಿತವಾದವು ; ರಾಜಧಾನಿಯಾದ ಪೆಟ್ರೊಗ್ರಾಡದಲ್ಲಿ ಕೂಡ ಅವನ ಧರ್ಮಾಲಯದ ಕಾರ್ಯವು ಪ್ರಬಲವಾಗಿ ನಡೆಯಹತ್ತಿತು. ಕೊನೆಯಲ್ಲಿ ಇವನ ಕೀರ್ತಿಯು ಝಾರ ಹಾಗೂ ಝರೀನಾ ಇವರ ಕಿವಿಗಳಿಗೆ ಮುಟ್ಟಿತು.

ರಶಿಯಾದ ರಾಜದಂಪತಿಗಳಿಗೆ ಪುತ್ರಪ್ರಾಪ್ತಿಯಾಗದ್ದರಿಂದ ಅವರ ಅಂತಃಕರಣಗಳು ಬಹಳೇ ಖಿನ್ನವಾಗಿದ್ದವು. ಇಂಥ ಸ್ಥಿತಿಯಲ್ಲಿ ರಾಸಪುಟಿನ ಸಾಧುವಿನ ದೈವೀಚಮತ್ಕಾರದ ವೃತ್ತಾಂತವನ್ನು ಕೇಳಿದವರಾದ ಝರೀನಾ ಇವರ ಮನಸ್ಸಿನಲ್ಲಿ ಆಶಾಂಕುರವು ಹುಟ್ಟಿ, ಈ ಸಾಧುವಿನ ಪ್ರಸಾದದಿಂದಾದರೂ ತಮಗೆ ಪುತ್ರಲಾಭವಾಗಲೆಂದು ಅವರು ರಾಸಪುಟಿನನ ಅನುಯಾಯೀವರ್ಗವನ್ನು ಸೇರಿದರು. ರಾಣಿಯವರು ಭಕ್ತಿಭಾವದಿಂದ ರಾಸಪುಟಿನನ ದರ್ಶನಕ್ಕೆ ಮೇಲಿಂದ ಮೇಲೆ ಹೋಗಹತ್ತಿದರು. ಕರ್ಮಧರ್ಮಸಂಯೋಗದಿಂದ ಮುಂದೆ ಕೆಲವು ದಿವಸಗಳಲ್ಲಿ ರಾಣಿಯವರಿಗೆ ಮಗ ಹುಟ್ಟಿದನು. ರಾಣಿಯವರಿಗೆ ಈ ಮೊದಲು ನಾಲ್ಕುಜನ ಹೆಣ್ಣುಮಕ್ಕಳಾಗಿದ್ದರೂ ವಂಶಾಭಿವೃದ್ಧಿಕರನಾದ ಮಗನು ಹುಟ್ಟಿದ್ದಿಲ್ಲ. ರಾಸಪುಟಿನನ ಆಶೀರ್ವಾದದಿಂದಲೂ ಪ್ರಸಾದ

ದಿಂದಲೂ ತಮಗೆ ಇಂಥ ಮಗನು ಹುಟ್ಟಿದನೆಂಬ ಸಂಪೂರ್ಣವಾದ ಶ್ರದ್ಧೆಯು ರಾಣಿಯವರಲ್ಲಿ ನೆಲೆಗೊಂಡಿದ್ದರಿಂದ ಇದರ ಪರಿಣಾಮವು ಝಾರರ ಮೇಲಾದರೂ ಒಳಿತಾಗಿಯೇ ಆಯಿತು. ಇದರಿಂದ ರಾಸಪುಟಿನನು ದರಬಾರದೊಳಗಿನ ಒಬ್ಬ ಪ್ರಮುಖನಾದ ಗೃಹಸ್ಥನಾಗಿ ಅವನ ವರ್ಚಸ್ಸು ಝಾರರ ಮೇಲೆ ವಿಶೇಷವಾಗಿ ಬೆಳೆಯಿತು. ಝಾರರ ಯುವರಾಜನಾದ ಝಾರವಿಚ್ಚನು ವ್ಯಂಗನಾಗಿಯೇ ಹುಟ್ಟಿದ್ದರಿಂದ ಈ ವ್ಯಂಗವನ್ನು ಕಳೆಯುವದಕ್ಕಾಗಿ ಯುರೋಪದೊಳಗಿನ ಪ್ರಖ್ಯಾತರಾದ ಡಾಕ್ಟರರೆಲ್ಲರೂ ಪ್ರಯತ್ನಪಟ್ಟರೂ ಅವರ ಪ್ರಯತ್ನವು ಸಿದ್ಧಿಗೆ ಹೋಗಲಿಲ್ಲ. ಆಗ್ಗೆ ಝುರೀನಾ ಇವರ ಆಗ್ರಹದ ಮೂಲಕವಾಗಿ ರಾಸಪುಟಿನನನ್ನು ಕರೆತಂದು ರಾಜಮಂದಿರದಲ್ಲಿಯೇ ಅವನಿಗೆ ಇರಹೇಳಿದರು. ಅವನ ಅದ್ಭುತವಾದ ಸಾಮರ್ಥ್ಯದಿಂದಲೇ ಸ್ವಲ್ಪಾವಕಾಶದಲ್ಲಿ ಝಾರವಿಚ್ಚನ ಕಾಲೊಳಗಿನ ವ್ಯಂಗವು ಇಲ್ಲದಂತಾಗಿ ಅವನು ನಡೆಯಹತ್ತಿದನು. ಝಾರವಿಚ್ಚನು ವಾಸಿಯಾದ ಬಳಿಕ ರಾಸಪುಟಿನನಿಂದ ಅವನು ಅಗಲಿಸಲ್ಪಟ್ಟನು. ಆದರೆ, ಚಮತ್ಕಾರದ ಸಂಗತಿಯೆಂದರೆ, ಝಾರವಿಚ್ಚನ ದೇಹವು ಪೂರ್ವವತ್ ನಿರ್ಬಲವಾಯಿತು. ಅದಕ್ಕಾಗಿ ರಾಸಪುಟಿನನನ್ನು ಮತ್ತೆ ಕರತರಬೇಕಾಯಿತು. ಈ ರೀತಿಯಾಗಿ ರಾಸಪುಟಿನನು ಝಾರರ ಮನೆಯೊಳಗೆ ಅವಶ್ಯಕನಾದ ಗೃಹಸ್ಥನೊಬ್ಬನಾದ್ದರಿಂದಲೂ ಅವನ ಸಾಮರ್ಥ್ಯದ ವಿಷಯಕವಾಗಿ ರಾಜದಂಪತಿಯರ ವಿಶ್ವಾಸವಿದ್ದದರಿಂದಲೂ ಕಾಲಾನುಕ್ರಮವಾಗಿ ಝಾರನು ಪ್ರತಿಯೊಂದು ಸಂಗತಿಯಲ್ಲಿ ಅವನನ್ನು ವಿಚಾರಿಸಹತ್ತಿದನು. ಇದನ್ನು ಕಂಡು ಅಧಿಕಾರಲಾಲಸರಾದ ಅಧಿಕಾರೀ ವರ್ಗದವರೆಲ್ಲ ತಮಗೆ ಬೇಕಾದ ಸಂಗತಿಗಳನ್ನು ರಾಸಪುಟಿನನ ಮುಖಾಂತರವಾಗಿ ಮಾಡಿಸಿಕೊಳ್ಳಹತ್ತಿದರು. ಈ ರೀತಿಯಾಗಿ ರಾಸಪುಟಿನನು ಅಧಿಕಾರೀ ವರ್ಗಕ್ಕೆ ಪ್ರಿಯನಾಗಹತ್ತಿದಂತೆ, ಕ್ರಾಂತಿಕಾರಕ ಪಕ್ಷದವರಿಗೆ ಬಲಾಢ್ಯನಾದ ಶತ್ರುವಾಗಿ ಕುಳಿತನು.

"ಸಂಪೂರ್ಣವಾದ ರಶಿಯಾದ ಪವಿತ್ರನಾದ ಝಾರ"ನು ಈ ಗೃಹಸ್ಥನ ವಶನಾಗಿದ್ದದರಿಂದ ಇವನು ತನ್ನ ಮನಸ್ಸಿಗೆ ಬಂದ ಕಾರಭಾರಗಳನ್ನು ಮಾಡಹತ್ತಿದನು. ಜನರ ಕಡೆಯಿಂದ ಅನ್ಯಾಯವಾಗಿ ದ್ರವ್ಯವನ್ನು ಸೆಳೆಯುವದೇ ಇವನ ಕೆಲಸವಾಗಿರದೆ, ತನ್ನ ಸ್ವಭಾವಕ್ಕನುಸರಿಸಿ, ಸುಂದರರು

ಆದರೆ ಅನಾಥರಾದ ಸ್ತ್ರೀಯರ ಮೇಲೆ ಅನನ್ವಿತವಾದ ಜುಲುಮೆಗಳನ್ನು ಮಾಡಲಾರಂಭಿಸಿದನು. ನೂರಾರು ಸ್ತ್ರೀಯರನ್ನು ಅವನು ಭ್ರಷ್ಟಮಾಡಿದನು. ನೃಪಾಂಗಣಗತನಾದ ಈ ಖಲನು ಶಲ್ಯದಂತೆ ಸರ್ವರಿಗೂ ತಾಪದಾಯಕನಾದನು. ಇವನನ್ನು ದೇಶಬಿಡಿಸಿ ಹೊರಗೆಹಾಕಬೇಕೆಂದು ಅನೇಕವಾದ ಪ್ರಯತ್ನಗಳು ಮಾಡಲ್ಪಟ್ಟವು ಪೆಟ್ರೊಗ್ರಾಡದ ಧರ್ಮಾಧಿಕಾರಿಗಳಾದರೂ ಪ್ರಯತ್ನಪಟ್ಟರು. ಆದರೆ, ಝಾರನ ಆರಭ್ಯ ಕನಿಷ್ಠ ಅಧಿಕಾರಿಯ ವರೆಗಿನ ಪ್ರತಿಯೊಬ್ಬ ಅಧಿಕಾರಿಯ ಬೆಂಬಲವು ಇವನಿಗಿದ್ದದರಿಂದ ಜನರ ಪ್ರಯತ್ನಗಳೆಲ್ಲ ವ್ಯರ್ಥವಾದವು. ಪ್ರಮುಖರಾದ ಸೇನಾಪತಿಗಳೂ ಮಧ್ಯಾಹ್ನಕ್ಕೆ ಅಭಾವವಾದ ದರಿದ್ರರೂ ಕೂಡಿಯೇ ಇವನ ಧರ್ಮಾಲಯಕ್ಕೆ ಬರುತ್ತಿದ್ದರು. ರಾಜಧಾನಿಯೊಳಗಿನ ವಿಲಾಸಿನಿಯರು ಕೂಡ ಈ ಧರ್ಮಾಲಯವನ್ನೇ ತಮ್ಮ ವಿಶ್ರಾಂತಿಸ್ಥಾನವನ್ನಾಗ ಕಲ್ಪಿಸಿಕೊಂಡರು ರಾಸಪುಟಿನನ ಧರ್ಮಾಲಯವು, ಶ್ರೀಮಂತರೂ ವಿಷಯಲೋಲುಪರೂ ದುಂದುಗಾರರೂ ಆದ ಜನರ ಕೇಲಿಸ್ಥಾನವಾದಂತೆ, ಅನಾಥ ಸ್ತ್ರೀಯರ ಮಾನಹಾನಿಯ ನರಕವಾಗಿತ್ತು. ಝಾರವಿಚ್ಛನ ವಿಷಯಕವಾಗಿ ಆದರೂ ಜನರ ಪ್ರವಾದಗಳು ಕೇಳಬರಹತ್ತಿದವು. ಇದಕ್ಕಾಗಿ ರಾಸಪುಟಿನನು ಹದ್ದುಪಾರು ಮಾಡಲ್ಪಟ್ಟನು.

ಅಪಮಾನವನ್ನು ಸಹಿಸಿ ಹದ್ದಪಾರನಾಗಿ ಇರುವದು ರಾಸಪುಟಿನನ ಸ್ವಭಾವವಾಗಿದ್ದಿಲ್ಲ. ರಾಜರಾಣಿಯರಿಗೆ ತನ್ನ ದೈವೀಸಾಮರ್ಥ್ಯದ ಹೆದರಿಕೆಯನ್ನು ತೋರಿಸಿ, ಅವರಿಂದ ಕ್ಷಮೆಯನ್ನು ಪಡೆದುಕೊಂಡು ೧೯೧೫ನೆಯ ಇಸ್ವಿಯ ಕೊನೆಯಲ್ಲಿ ಇವನು ಮತ್ತೆ ರಾಜಧಾನಿಗೆ ಬಂದನು ಇದೇ ಸುಮಾರಕ್ಕೆ ಡ್ಯೂಮಾಸಭೆಯೊಳಗಿನ ಸಭಾಸದರು ಇವನನ್ನು ಬಹಿರಂಗವಾಗಿ ನಿಂದಿಸಿ, ರಾಜಧಾನಿಯಲ್ಲಿರಲು ಇವನು ಅಯೋಗ್ಯನಾದ ಪುರುಷನೆಂದು ಗೊತ್ತುಪಡಿಸಿದರೂ ಇವನನ್ನು ಹೊರಗೆಹಾಕುವದು ಅಸಾಧ್ಯವಾಯಿತು. ಆದರೆ, ಪಾಪದ ಪ್ರಾಯಶ್ಚಿತ್ತವು ಒಂದಿಲ್ಲೊಂದು ಮಾರ್ಗದಿಂದ ದೊರೆಯುವದು ನಿಶ್ಚಯವಾದ ಮಾತು ೧೯೧೬ನೆಯ ಇಸ್ವಿಯ ಜುಲೈ ತಿಂಗಳಿನಲ್ಲಿ ಜುಲಿಯಾ ಮ್ಯುಸೇವ್ಹಾ ಎಂಬ ಸ್ತ್ರೀಯೋರ್ವಳು ಇವನನ್ನು ಕೊಲ್ಲುವ ಉದ್ದೇಶದಿಂದ ಇವನ ಮೇಲೆ ಶಸ್ತ್ರಘಾತವನ್ನು ಮಾಡಿದಳು.

ಆದರೆ, ಆ ಕಾಲಕ್ಕೆ ಇವನು ಭಯಂಕರವಾದ ಗಾಯವನ್ನು ಹೊಂದಿದನೇ ಹೊರತಾಗಿ ಮರಣಹೊಂದಲಿಲ್ಲ. ಜುಲಿಯಾ ಇವಳು ಮಾಡಿದ ಸಾಹಸಕ್ಕಾಗಿ ಅವಳನ್ನು ನ್ಯಾಯಾಸನದ ಮುಂದೆ ನಿಲ್ಲಿಸಿದಾಗ ಇವಳು ಹೇಳಿದ್ದೇನಂದರೆ, "ರಾಸಪುಟಿನನು ಅನಾಥರಾದ ಅನೇಕ ಸ್ತ್ರೀಯರ ಪಾತಿವ್ರತ್ಯವನ್ನು ಭಂಗ ಮಾಡಿದ್ದರಿಂದ ಅವನಿಗೆ ದೇಹಾಂತ ಶಿಕ್ಷೆಯನ್ನು ಕೊಡುವದು ಯೋಗ್ಯವಾದದ್ದು. ಆದರೆ ಅನ್ಯಾಯಮಯವಾದ ಈ ರಾಜ್ಯದಲ್ಲಿ ಅದು ಆಗುವದು ಶಕ್ಯವಿಲ್ಲದ್ದರಿಂದ ನಾನು ಅವನ ಕೊಲೆಯನ್ನು ಮಾಡುವ ಪ್ರಯತ್ನವನ್ನು ಮಾಡಿದೆನು. "

ಮೇಲೆ ಹೇಳಿದ ಗಾಯದಿಂದಲೇ ಇವನು ಹಾಸಿಗೆಯನ್ನು ಹಿಡಿದಾಗ ರಶಿಯಾದ ಝಾರನು ಜರ್ಮನಿಯ ವಿರುದ್ಧವಾಗಿ ಯುದ್ಧವನ್ನು ಸಾರಿದನು. ಜರ್ಮನಿಯ ಗುಪ್ತಚಾರರದೂ ಇವನದೂ ಸಂಬಂಧವಿತ್ತೆಂತಲೂ ಯುದ್ಧಾರಂಭದಲ್ಲಿ ಇವನು ದೃಢಾಂಗನಾಗಿದ್ದರೆ ಜರ್ಮನಿಯ ವಿರುದ್ಧವಾಗಿ ಯುದ್ಧ ಮಾಡಲು ಝಾರನನ್ನು ಪ್ರೋತ್ಸಾಹಿಸುತ್ತಿದ್ದಿಲ್ಲೆಂತಲೂ ಜನರು ಅನ್ನುತ್ತಾರೆ. ಮೇಲೆ ವರ್ಣಿತವಾದ ಕೊಲೆಯ ಪ್ರಯತ್ನವು ಯಶಸ್ವಿಯಾಗದ್ದರಿಂದಂತೂ ತನ್ನ ದೈವೀಸಾಮರ್ಥ್ಯದ ಪ್ರೌಢಿಯನ್ನು ಮೆರೆಯಿಸುವ ಅವಕಾಶವು ಇವನಿಗೆ ವಿಶೇಷವಾಗಿ ದೊರೆಯಿತು. ಮನುಷ್ಯನು ಒಮ್ಮೆ ನಾಚಿಕೆಯನ್ನು ಬಿಟ್ಟು ಕೊಟ್ಟನೆಂದರೆ, ಅವನ ಅವನತಿಗೆ ಮರ್ಯಾದೆಯೇ ಉಳಿಯುವದಿಲ್ಲ. ರಾಸಪುಟಿನನು ತನ್ನ ಆತ್ಮಸ್ತುತಿ ಮಾಡಿಕೊಳ್ಳುವಾಗ ಎರಡು ಮೂರು ವರ್ಷಗಳ ಪೂರ್ವದಲ್ಲಿ ತಾನು ಎಷ್ಟು ಸ್ತ್ರೀಯರನ್ನು ಅಂಕಿತಮಾಡಿಕೊಂಡಿದ್ದೆನೆಂಬ ವರ್ಣನೆಯನ್ನು ನಿರ್ಲಜ್ಜತೆಯಿಂದ " ನೋವ್ಹೆ ರ್‍ಹೇಮ್ಯ " ಎಂಬ ಪತ್ರದಲ್ಲಿ ಪ್ರಸಿದ್ಧಮಾಡಿದ್ದಾನೆ.

ಈ ರೀತಿಯಾಗಿ ಪ್ರಬಲನೂ ಸಾಮರ್ಥ್ಯವಾನನೂ ದೈವೀಗುಣದ ಮಿಥ್ಯಾಪ್ರದರ್ಶಕನೂ ಅನಾಥ ಸ್ತ್ರೀಯರ ಮಾನಹಾರಕನೂ ಆದ ಈ ಅಧಮ್ಯನನ್ನು ಜಗತ್ತಿನಲ್ಲಿ ಇಲ್ಲದಂತೆ ಮಾಡುವದು ಕ್ರಾಂತಿಕಾರಕ ಪಕ್ಷದವರ ಆದ್ಯ ಕರ್ತವ್ಯವಾಗಿತ್ತು. ರಶಿಯಾದೊಳಗಿನ ಸರದಾರರ ಮನೆತನಕ್ಕೆ ಹೊಂದಿದ ಆರು ಜನ ಗೃಹಸ್ಥರು ಈ ಕಾರ್ಯವನ್ನು ವಹಿಸಿಕೊಂಡರು. ಇವರಲ್ಲಿ ಪ್ರಿನ್ಸ ಫೆಲಿಕ್ಸಯುಸುಪೋವ್ಹ ಎಂಬ ಸರದಾರನು ಇವನಿಗೆ ತನ್ನ ಮನೆಗೆ

ಭೋಜನಕ್ಕಾಗಿ ಆಮಂತ್ರಣವನ್ನು ಕೊಟ್ಟನು. ಭೋಜನಸಮಾರಂಭವೆಲ್ಲ ಮುಗಿದು ಮದ್ಯಪ್ರಾಶನದ ವಿಧಿಯು ಕೂಡ ಸಾಂಗವಾದ ಬಳಿಕ ಈ ಆರು ಜನರಲ್ಲಿ ಒಬ್ಬನು ರಾಸಪುಟಿನನ ಕೈಯಲ್ಲಿ ರಿವಾಲ್ವರವನ್ನು ಕೊಟ್ಟು ತನ್ನ ಆತ್ಮಹತ್ಯೆಯನ್ನು ಮಾಡಿಕೊಳ್ಳಲು ಅವನಿಗೆ ಹೇಳಿದನು. ಈ ಅಪ್ಪಣೆಯನ್ನು ಕೊಡುವದಕ್ಕೆ ಮುಂಚಿತವಾಗಿ ರಾಸಪುಟಿನನ ಪಾಪಕೃತ್ಯಗಳ ಪ್ರವಚನೆಯಾಯಿತು. ಈ ಪಾಪರಾಶಿಯು ಸುಟ್ಟುಹೋಗಬೇಕಾದರೆ ದೇಹವಿಸರ್ಜನದ ಹೊರತು ಬೇರೆ ಮಾರ್ಗವಿಲ್ಲೆಂತಲೂ, ಪಾಪಮೂರ್ತಿಯಾದ ಅವನನ್ನು ಕೊಂದು ತಮ್ಮ ಕೈಗಳನ್ನು ಅಪವಿತ್ರಮಾಡಿಕೊಳ್ಳಲು ತಮ್ಮಲ್ಲಿ ಯಾರೂ ಸಿದ್ಧರಿಲ್ಲೆಂತಲೂ ಆದಕ್ಕಾಗಿ ರಾಸಪುಟಿನನೇ ತನ್ನ ಆತ್ಮಹತ್ಯವನ್ನು ಮಾಡಿಕೊಳ್ಳತಕ್ಕದ್ದೆಂತಲೂ ಅವನಿಗೆ ಹೇಳಲ್ಪಟ್ಟಿತು.

ರಾಸಪುಟಿನನು ಇದಕ್ಕೆ ಪ್ರತ್ಯುತ್ತರವನ್ನು ಕೊಡದೆ, ರಿವಾಲ್ವರವನ್ನು ಕೈಯಲ್ಲಿ ತೆಗೆದುಕೊಂಡು ಈ ಆರು ಜನ ಗೃಹಸ್ಥರಲ್ಲಿ ಪ್ರಮುಖನಾಗಿದ್ದವನ ಮೇಲೆ ಅದನ್ನು ಹಾರಿಸಿದನು. ಆದರೆ ಆ ಗೃಹಸ್ಥನು ಪೂರ್ಣ ಎಚ್ಚರವುಳ್ಳವನಾದ್ದರಿಂದಲೂ ರಾಸಪುಟಿನನ ಸ್ವಭಾವವನ್ನು ಆಮೂಲಾಗ್ರವಾಗಿ ಬಲ್ಲವನಾದ್ದರಿಂದಲೂ ಆ ಗುರಿಯನ್ನು ತಪ್ಪಿಸಿಕೊಂಡನು. ತನ್ನ ಪ್ರಯತ್ನವು ನಿಷ್ಫಲವಾದದ್ದನ್ನು ಕಂಡು ರಾಸಪುಟಿನನು ಪಲಾಯನಹಿಡಿಸಿದನು. ಆದರೆ ಈ ಗೃಹಸ್ಥರು ಅವನನ್ನು ಬೆನ್ನಟ್ಟಿ ತಮ್ಮ ಕೈಯಲ್ಲಿರುವ ರಿವಾಲವ್ಹರಗಳಿಂದ ಅವನನ್ನು ಕೊಂದು, ಅವನ ಪ್ರೇತವನ್ನು ನದಿಯಲ್ಲಿ ಚಲ್ಲಿದರು. ರಾಸಪುಟಿನನು ಈ ರೀತಿಯಾಗಿ ತಮ್ಮ ಪಾಪಕೃತ್ಯಗಳ ಫಲವನ್ನುಂಡನು.

---

# ಪೂರ್ವಜನ್ಮದ ವಿಧಿಯು ತಾ ಬೆನ್ನು ಬಿಡದು

ಒಂದಾನೊಂದು ಕ್ಷೇತ್ರದಲ್ಲಿಯ ಒಂದು ಶಾಂತವಾದ ಮಠದಲ್ಲಿ ಒಬ್ಬ ಬ್ರಹ್ಮಚಾರಿಯು ಇರುತ್ತಿದ್ದನು. ಬ್ರಾಹ್ಮ ಮುಹೂರ್ತದಲ್ಲಿ ತೀರ್ಥೋದಕದಲ್ಲಿ ಸ್ನಾನ, ಮಧ್ಯಾಹ್ನ ಕಾಲದಲ್ಲಿ ಮಧುಕರ ವೃತ್ತಿ, ಉಳಿದ ಕಾಲದಲ್ಲಿ ವೇದಾಧ್ಯಯನ, ಶಾಸ್ತ್ರಾಧ್ಯಯನ, ಕಾವ್ಯಪರಿಶೀಲನ, ಭಗವಚ್ಚಿಂತನ, ಮುಂತಾದ ಸತ್ಕರ್ಮಗಳಿಂದ ಆ ಬ್ರಹ್ಮಚಾರಿಯು ಸತ್ಕಾಲಕ್ಷೇಪವನ್ನು ಮಾಡುತ್ತಿದ್ದನು. ಅವನ ಮೈಕಟ್ಟು ಸುದೃಢವಾಗಿಯೂ ಶರೀರಯಷ್ಟಿಯು ಉಚ್ಚವಾಗಿಯೂ ವರ್ಣವು ಗೌರವಾಗಿಯೂ ಮೂಗು ಸರಲವಾಗಿಯೂ ಕಣ್ಣುಗಳು ವಿಶಾಲವಾಗಿಯೂ ಇದ್ದು ಅವನ ಮುಖಕಾಂತಿಯು ಒಳ್ಳೇ ತೇಜಃಪುಂಜವಾದದ್ದಾಗಿತ್ತು. ಜನ್ಮದಾರಭ್ಯ ಅವನ ಆಚರಣವು ಶುದ್ಧವಾಗಿದ್ದು, ಮರಣಾಂತಿಕವಾದ ಸಂಕಟಗಳು ಬಂದೊದಗಿದರೂ ತನ್ನ ಆಚರಣಗಳಿಂದ ತಾನು ಭ್ರಷ್ಟನಾಗಕೂಡದೆಂದು ಅವನು ಮನಸಾ ನಿಶ್ಚಯ ಮಾಡಿದ್ದನು. ಅವನ ತಂದೆತಾಯಿಗಳು ಬಡವರಾಗಿದ್ದು ಅವನು ಚಿಕ್ಕವನಿರುವಾಗಲೇ ಮಡಿದುಹೋಗಿದ್ದರು. ಅದರಿಂದ ದಾರಿದ್ರ್ಯವು ಅವನ ನಿಸರ್ಗಸಿದ್ಧವಾದ ಅವಸ್ಥೆಯೇ ಆಗಿತ್ತು. ಆದರೂ ಇದಕ್ಕಾಗಿ ಅವನು ಎಂದೂ ಖೇದಪಡುತ್ತಿದ್ದಿಲ್ಲ. ಅವನು ಯಾವಾಗಲೂ ಸಮಾಧಾನವುಳ್ಳವನಾಗಿದ್ದನು. ಅವನು ಪೂರ್ಣನಾದ ನಿರ್ಲೋಭಿಯು. ದ್ರವ್ಯವೆಂದರೆ, ಅವನಿಗೆ ದ್ವೇಷವು ಹುಟ್ಟುತ್ತಿತ್ತು. ಈ ರೀತಿಯಾಗಿ ಅವನು ತನ್ನ ಆಯುಷ್ಯದ ಪೂರ್ವಭಾಗವನ್ನು ಸುಖದಲ್ಲಿಯೂ, ಸಮಾಧಾನದಲ್ಲಿಯೂ ಕಳೆಯುತ್ತಿರಲು, ಒಂದು ದಿನ ರಾತ್ರಿಯ ಕೊನೆಯ ಯಾಮದಲ್ಲಿ ಅವನಿಗೊಂದು ಸ್ವಪ್ನವು ಬಿದ್ದಿತು. ಸ್ವಪ್ನದಲ್ಲಿ ಯಾವನೋ ಒಬ್ಬ ಪುರುಷನು ಅವನ ಹತ್ತರ ಬಂದು ಅವನನ್ನುದ್ದೇಶಿಸಿ, "ಏಳು, ಮಲಗಿರುವೇನು ? ನಿನ್ನನ್ನು ನಾನು ಈಗ ಧನಿಕನನ್ನಾಗಿ ಮಾಡತಕ್ಕವನಿದ್ದೇನೆ." ಧರ್ಮಪರಾಯಣತೆಯಲ್ಲಿಯೂ, ಮಧುಕರ ವೃತ್ತಿಯಲ್ಲಿಯೂ ಬೆಳೆದ ಆ ಬ್ರಹ್ಮಚಾರಿಗೆ ಧನಿಕನಾಗುವ ಕಲ್ಪನೆಯು ಸ್ವಪ್ನದಲ್ಲಿ ಸಹ ರುಚಿಸಲಿಲ್ಲ. ಅವನು ಒಳ್ಳೇ ಆವೇಶದಿಂದ

ಅಂದದ್ದು: “ ಧನಿಕನಾಗಲು ನಾನು ಇಚ್ಛಿಸುವದಿಲ್ಲ.”

ಪುರುಷನು : ಅದೇಕೆ ?

ಬ್ರಹ್ಮಚಾರಿಯು : ಧನದಲ್ಲಿ ನನಗೆ ಪ್ರೀತಿಯಿಲ್ಲ.

ಪುರುಷನು : ರೂಢಿಯಿಂದ ಎಲ್ಲ ವಸ್ತುಗಳು ಪ್ರಿಯಕರವಾಗುತ್ತವೆ. ಈ ನಿನ್ನ ಮಧುಕರವೃತ್ತಿಯೂ ಬ್ರಹ್ಮಚರ್ಯಾಶ್ರಮವೂ ನಿನಗೆ ಪ್ರಿಯವಾಗಬೇಕಾದರೆ, ರೂಢಿಯಲ್ಲದೆ ಮತ್ಯಾವ ಕಾರಣವು ರೂಢಿಯು ಹೊರತು ಅನ್ಯವಾವದೂ ಅಲ್ಲ. ಬಿಕ್ಕೆಯನ್ನು ಬೇಡುವ ಹಾಗೂ ಸ್ತ್ರೀಸುಖಕ್ಕೆ ಎರವಾಗುವ ಸಂಗತಿಗಳು ಎಲ್ಲರಿಗೂ ದುಃಸಹವಾಗಿದ್ದರೂ ರೂಢಿಯು ನಿನಗೆ ಅವುಗಳಲ್ಲಿ ಇಷ್ಟು ಪ್ರೀತಿಯನ್ನುಂಟುಮಾಡಿದೆಂದ ಮೇಲೆ ವಿಪುಲವಾದ ಸಂಪತ್ತೂ, ಸುಂದರರಾದ ಸ್ತ್ರೀಯರೂ, ನಾನಾಪ್ರಕಾರದ ಸುಖೋಪಭೋಗಗಳೂ ರೂಢಿಯಿಂದ ನಿನಗೆ ಪ್ರಿಯಕರವಾಗಲಿಕ್ಕಿಲ್ಲೆಂಬ ಮಾತು ಎಂದಾದರೂ ಸಂಭವಿಸುವದೇ ?

ಬ್ರಹ್ಮ: ರೂಢಿಯು ಮನುಷ್ಯನಿಂದ ಬೇಕಾದ ಕೆಲಸವನ್ನು ಮಾಡಿಸಬಲ್ಲದೆಂಬ ಸಂಗತಿಯನ್ನು ನಾನಾದರೂ ಒಪ್ಪಿಕೊಳ್ಳುತ್ತೇನೆ. ರೂಢಿಯು ವಿಷವನ್ನು ಮಧುರವಾಗಿಯೂ, ಅಮೃತವನ್ನು ಕಹಿಯಾಗಿಯೂ ಮಾಡಬಹುದು. ಆದರೆ, ವಿಚಾರವಂತನಾದವನು ವಿಷವು ಮಧುರವಾದದ್ದೆಂದು ಮನ್ನಿಸುವ ರೂಢಿಯನ್ನು ಆದರಿಸಬೇಕೋ ಅನಾದರಿಸಬೇಕೋ ಎಂಬದೇ ಮುಖ್ಯವಾದ ಪ್ರಶ್ನವಾಗಿದೆ. ಶಾಂತ ಸಮಾಧಾನಾದಿ ಗುಣಗಳಿಂದ ಪೂರಿತವಾದ ಈ ವೈರಾಗ್ಯಾಮೃತವನ್ನು ಬಿಟ್ಟು ವಿಷಮಯವಾದ ಪ್ರಾಪಂಚಿಕ ಸುಖದ ವ್ಯಸನವನ್ನು ಹಚ್ಚಿಕೊಳ್ಳುವದಕ್ಕೆ ನಾನಂತೂ ಇಚ್ಛಿಸುವದಿಲ್ಲ.

ಪು: ನಾನಂತೂ ಇಚ್ಛಿಸುವದಿಲ್ಲ ! ‘ನಾನು’ ಎಂಬುವದರಲ್ಲಿ ಅಭಿಮಾನವಾದರೂ ಎಷ್ಟು ! ನಿನ್ನ ಇಚ್ಛೆಯನ್ನು ಕೇಳುವವರಾರು ? ನಿನ್ನ ಇಚ್ಛೆಯಿಂದಲೇ ಈ ಜಗತ್ತು ನಡೆದಿರುವದೆಂದು ನೀನು ತಿಳಿದಿರುವಿಯಾ ? ಈ ರೀತಿಯಾಗಿ ಪ್ರತಿಯೊಬ್ಬನ ಇಚ್ಛೆಗನುಸಾರವಾಗಿ ಈ ಜಗತ್ತು ನಡೆಯಹತ್ತಿದರೆ, ಅದು ಕ್ಷಣಮಾತ್ರವಾದರೂ ನಡೆಯಲಾರದು.

ಬ್ರಹ್ಮ: ನಡೆಯದಿದ್ದರೆ ಇಲ್ಲ; ಆದರಿಂದ ನನ್ನದೇನು ಅಡ್ಡಗಾಣಿಸುವದು ? ಬೇಕಾದರೆ ಈ ಜಗತ್ತು ಇಂದಿಗೇ ಲಯಹೊಂದಲಿ. ಇಂಥ

ದುಃಖದಾಯಕವಾದ ಜಗತ್ತು ನಡೆಯುವದಕ್ಕಿಂತ ಅದು ನಿಂತುಹೋಗು ವದೇ ಒಳಿತಾದದ್ದು. ಆದರೆ ಈ ಜಗತ್ತು ನಿಂತುಬಿಡುವದು ಇಲ್ಲವೆ ನಡೆ ಯುವದು ಅದೇನು ನನ್ನ ಕೈಯೊಳಗಿನ ಮಾತಲ್ಲ. ಆದರೆ ನನ್ನ ಇಚ್ಛೆಯು ಮಾತ್ರ ಪೂರ್ಣವಾಗಿ ನನ್ನ ಕೈಯೊಳಗಿನ ಮಾತಾಗಿದೆ.

ಪು: ಇಲ್ಲ! ಅದಾದರೂ ನಿನ್ನ ಕೈಯೊಳಗಿನ ಮಾತಾಗಿಲ್ಲ. ಈಗಿನ ನಿನ್ನ ಇಚ್ಛೆಯು ನಿನ್ನ ಪೂರ್ವಜನ್ಮದ ಅನೇಕ ಇಚ್ಛೆಗಳಿಂದ ನಿಯಂತ್ರಿತ ವಾಗಿದೆ. ಹಾಗೂ ನಿನ್ನ ಭಾವೀ ಸಂಪತ್ತಿನ ಅವಸ್ಥೆಯಾದರೂ ನೀನು ಪೂರ್ವಜನ್ಮದ ಕರ್ಮಗಳಿಂದ ನಿಶ್ಚಿತವಾಗಿದೆ. ಅದನ್ನು ನೀನು ತಪ್ಪಿಸಲರಿಯೆ. ಒಂದು ಜನ್ಮದಲ್ಲಿ ನೀನು ಅಸಂಖ್ಯಾಕವಾದ ದ್ರವ್ಯವನ್ನು ಒಬ್ಬ ಬ್ರಾಹ್ಮಣ ನಿಗೆ ದಾನ ಮಾಡಿರುವಿ. ಆ ಕರ್ಮವು ಈಗ್ಗೆ ಪರಿಪಕ್ವವಾಗಿ ಫಲೋನ್ಮುಖ ವಾಗಿದೆ. ಅದನ್ನು ಸ್ವೀಕರಿಸದ ಹೊರತು ನಿನಗೆ ಗತ್ಯಂತರವಿಲ್ಲ. ನೀನು ಧನಿಕನಾಗಲೇಬೇಕು, ಇಂಥ ಸ್ಥಿತಿಯು ಬಂದೊದಗಿದೆ.

ಬ್ರಹ್ಮ: ಈ ಪ್ರಸಂಗವು ನನ್ನ ಮೇಲೆ ಒದಗದಿದ್ದರೆ, ಬಹಳ ಒಳಿ ತಾಗುವದು. ಮೇಲಾಗಿ ನಾನು ಧನಿಕನಾಗುವದಕ್ಕೆ, ಒಂದು ಮಹತ್ವದ ಕಾರಣದ ಸಲುವಾಗಿ, ತೀರ ಅಯೋಗ್ಯನಿರುತ್ತೇನೆಂದು ನಿಮಗೆ ಅನಿಸುವ ದಿಲ್ಲವೋ ?

ಪು: ಅಂಥ ಕಾರಣವಾದರೂ ಯಾವದು ?

ಬ್ರಹ್ಮ: ಆ ಕಾರಣವೆಂದರೆ ನನ್ನಲ್ಲಿ ವಿದ್ವತ್ತೆಯು ನೆಲೆಗೊಂಡಿದೆ. ವೇದಾಧ್ಯಯನವನ್ನು ನಾನು ಪೂರ್ಣವಾಗಿ ಮುಗಿಸಿದ್ದೇನೆ. ಶಾಸ್ತ್ರದಲ್ಲಂತೂ ನನ್ನ ಗತಿಯು ಅಪ್ರತಿಹತವಾಗಿದ್ದು, ನನ್ನ ಕೈಯನ್ನು ಹಿಡಿಯುವವರು ಈ ಇಡೀ ಕ್ಷೇತ್ರದಲ್ಲಿ ಯಾರೂ ಇಲ್ಲ. ಕಾವ್ಯಾದಿಗಳ ಪರಿಶೀಲನದಿಂದಲೂ ವ್ಯವ ಹಾರದ ಪ್ರತ್ಯಕ್ಷವಾದ ಅನುಭವದಿಂದಲೂ ಅವಶ್ಯವಾದ ಜಾಣತನವು ನನ್ನಲ್ಲಿ ಬಂದಿದೆ. ಅಂದಮೇಲೆ ನಾನು ಧನಿಕನಾಗುವದು ಹೇಗೆ? ಶ್ರೀಮಂತರಿಗೆ ಮುಖ್ಯವಾಗಿ ಬೇಕಾಗಿರುವ ಗುಣಗಳ ಅಭಾವವೇ ನನ್ನಲ್ಲಿದ್ದ ಬಳಿಕ, ನೀವು ನನ್ನನ್ನು ಜುಲುಮೆಯಿಂದ ಶ್ರೀಮಂತನನ್ನಾಗಿ ಮಾಡಿದರೂ ನನ್ನನ್ನು ಶ್ರೀಮಂತನೆಂದು ಕರೆಯುವವರಾರು ? ಈ ವಿದ್ಯೆಯ ತೊಂದರೆಗಳ ಮೂಲಕ ವಾಗಿ, ಶ್ರೀಮಂತರಲ್ಲಿರುವ ಗುಣಗಳ ಒಂದಾದರೂ ಲಕ್ಷಣವನ್ನು ತೋರಿ

ಸಲು ನಾನು ಸಮರ್ಥನಾಗದಿದ್ದರೆ, ನಿಮ್ಮ ಪ್ರಯತ್ನವು ನಿಷ್ಫಲವಾಗುವದು. ಅದಕ್ಕಾಗಿ ನಾನು ಅನ್ನುವದೇನಂದರೆ, ಶ್ರೀಮಂತನನ್ನು ಮಾಡುವದಕ್ಕಾಗಿ ನೀವು ಬೇರೆ ಮತ್ಯಾವನನ್ನಾದರೂ ಶೋಧಿಸಿರಿ. ನಿರಪರಾಧಿಯೂ ಜ್ಞಾನಿಯೂ ಆದ ನನ್ನನ್ನು ನಿಷ್ಕಾರಣವಾಗಿ ಯಾಕೆ ಪೀಡಿಸುವಿರಿ ?

ಪು: ಯಾವನನ್ನು ಶ್ರೀಮಂತನನ್ನಾಗಿ ಮಾಡಬೇಕಾಗಿದೆಯೋ ಅವನು ಸ್ವಭಾವತಃ ಮೂರ್ಖನಾಗಿದ್ದರೆ ಒಳಿತಾದದ್ದೆಂಬ ಮಾತು ನಿಜವು; ಯಾಕೆಂದರೆ, ದೊಡ್ಡವರಾದ ಬಳಿಕ ಅವರಲ್ಲಿ ಪ್ರಸಂಗವು ಬಂದೊದಗಿದಾಗ, ಮೂರ್ಖತನದ ಗುಣಗಳನ್ನು ಹುಟ್ಟಿಸುವದು ಕಠಿಣವಾಗುತ್ತದೆ; ಇದಲ್ಲದೆ, ಮೂರ್ಖತನದಲ್ಲಿ ನಿಷ್ಣಾತರನ್ನಾಗಿ ಮಾಡುವ ಶಾಲೆಗಳನ್ನು ಇನ್ನೂ ಯಾರೂ ವಿಶೇಷವಾಗಿ ಸ್ಥಾಪಿಸಿಲ್ಲ. ಅಂದಮೇಲೆ ತಾರುಣ್ಯ, ವಿಷಯೋಪಭೋಗದ ನಿಃಸೀಮವಾದ ಲಾಲಸೆ, ಕುಸಂಗತಿ ಮುಂತಾದ ಸಂಗತಿಗಳಿಂದ ಮನುಷ್ಯರಲ್ಲಿ ಹುಟ್ಟುವ ಅಲ್ಪಸ್ವಲ್ಪವಾದ ಮೂರ್ಖತನದಿಂದಲೇ ಸಂತೋಷವನ್ನು ಹೊಂದಿ ಸ್ವಸ್ಥವಾಗಿ ಕೂಡಬೇಕಾಗುತ್ತದೆ ಆದರೂ ಈ ಸಂಗತಿಗಳಲ್ಲಿ ಸಂಪತ್ತೊಂದು ಕೂಡಿತೆಂದರೆ, ಧನಿಕರ ಬಡಿವಾರಕ್ಕೆ ಸಾಕಾಗುವಷ್ಟು ಮೂರ್ಖತನವು ಮನುಷ್ಯನಲ್ಲಿ ಹುಟ್ಟೇಹುಟ್ಟುತ್ತದೆ. ಮೇಲಾಗಿ ಶ್ರೀಮಂತನು ವಿದ್ಯಾವಂತನಾಗಿರಲೇಬಾರದೆಂದು ಯಾರೂ ನಿಯಮವನ್ನಾದರೂ ಹಾಕಿಕೊಟ್ಟಿಲ್ಲ. ಇಷ್ಟಾಗಿಯೂ ಎಲ್ಲ ನಿಯಮಗಳಿಗೂ ಅಪವಾದಗಳು ಉಂಟೇಉಂಟು. ಅಪ್ಪಿತಪ್ಪಿ ಒಬ್ಬ ವಿದ್ವಾಂಸನು ಶ್ರೀಮಂತನಾದರೆ, ಅದರಿಂದ ಹಾನಿಯಾದರೂ ಯಾವದು ? ನೀನು ಶ್ರೀಮಂತನಾಗಲು ಒಪ್ಪಿಕೊಳ್ಳು, ಅಂದರೆ ನೀನು ಮೂರ್ಖನಾದಿಯೆಂತಲೇ ತಿಳಿ. ವಿದ್ವತ್ತೆಯನ್ನೆಲ್ಲ ಮುಚ್ಚಿಬಿಡುವ ಲೋಕೋತ್ತರವಾದ ಗುಣವು ಸಂಪತ್ತಿನಲ್ಲಿದೆ, ನೀನು ಒಪ್ಪಿಕೊಂಡರೆ ಸಾಕು.

ಬೃಹ: ಪ್ರಾಣಹೋದರೂ ಶ್ರೀಮಂತನಾಗಲಿಕ್ಕೆ ನಾನು ನನ್ನ ಒಪ್ಪಿಗೆಯನ್ನು ಕೊಡಲಾರೆನು. ನನ್ನನ್ನು ಮೋಸಗೊಳಿಸಿ ಇಲ್ಲವೆ ನನಗೆ ತಿಳಿಯದಂತೆ ನೀವು ನನ್ನನ್ನು ಶ್ರೀಮಂತನನ್ನಾಗಿ ಮಾಡಬಹುದೇ ಹೊರತು, ಶ್ರೀಮಂತನಾಗುವದಕ್ಕೆ ನಾನು ನನ್ನ ಒಪ್ಪಿಗೆಯನ್ನು ಸ್ವಸಂತೋಷದಿಂದ ಎಂದೂ ಕೊಡಲಾರೆನು. ಆದರೆ, ನೀವು ನನ್ನ ಮೇಲೆ ಬಲಾತ್ಕಾರವನ್ನಾದರೂ ಮಾಡುವದೇಕೆ ? ನಿಮಗೆ ನನ್ನ ವಿಷಯಕ್ಕೆ ದಯವು ಹುಟ್ಟುವ

ದಿಲ್ಲವೆ? ಕರುಣಾಸಮುದ್ರನಾದ ದೇವರೇ, ನೀನಾದರೂ ನನ್ನನ್ನು ದಯಾರ್ದ್ರ ದೃಷ್ಟಿಯಿಂದ ನೋಡು. ನಾನು ಅಂಥ ಯಾವ ಅಘೋರವಾದ ಪಾತಕವನ್ನು ಮಾಡಿರುವೆನೆಂದು ನೀನು ನನಗೆ ಶ್ರೀಮಂತನಾಗುವ ಶಿಕ್ಷೆಯನ್ನು ವಿಧಿಸುವಿ? ನನಗೆ ತಿಳಿಯಹತ್ತಿದಂದಿನಿಂದ ನಾನು ಧರ್ಮಾಚರಣವನ್ನೇ ಮಾಡುತ್ತ ಬಂದೆನೆಂದು ನನಗೆ ಈ ಪ್ರಾಯಶ್ಚಿತ್ತವೆ ?

ಹೀಗೆ ಮಾತಾಡುತ್ತ ಮಾತಾಡುತ್ತ ಆ ಬ್ರಹ್ಮಚಾರಿಯು ಸ್ವಪ್ನದಲ್ಲಿ ರೋದನ ಮಾಡಹತ್ತಿದನು. "ನಿಷ್ಕಾರಣವಾಗಿ ನನ್ನ ಮೇಲೆ ಸಂಪತ್ತಿನ ಬೆಟ್ಟವನ್ನು ಉರುಳಿಸುವ ನಿರ್ದಯ ಹಾಗೂ ಕಠೋರನಾದ ಪುರುಷನೆ, ನೀನು ಯಾರು ?" ಹೀಗೆ ಅವನು ಅಳುತ್ತ ಅಳುತ್ತ ಅವನನ್ನು ಕೇಳಹತ್ತಿದನು. ಈ ಪ್ರಶ್ನಕ್ಕೆ, "ನಾನು ಕರ್ಮಾಧಿಕಾರಿಯು" ಎಂಬ ಅಸ್ಪಷ್ಟವಾದ ಉತ್ತರವನ್ನು ಕೊಟ್ಟು, ಆ ಪುರುಷಾಕೃತಿಯು ಮೆಲ್ಲಮೆಲ್ಲನೆ ಅಂತರ್ಧಾನವನ್ನು ಹೊಂದಿದ ಕೂಡಲೆ, ಬ್ರಹ್ಮಚಾರಿಯು ಕಳವಳಿಸಿ ಎಚ್ಚರಗೊಂಡನು ಪೂರ್ವದಿಕ್ಕಿಗೆ ನಕ್ಷತ್ರರಾಜನಾದ ಶುಕ್ರನು ಆಗಲೇ ಉದಯನಾಗಿ ಮೇಲಕ್ಕೇರಹತ್ತಿದ್ದನು. ಅದನ್ನು ಕಂಡು ಅವನು ಪ್ರಸನ್ನಚಿತ್ತವುಳ್ಳವನಾಗಿ, ಸ್ವಪ್ನದೊಳಗಿನ ಸಂಗತಿಯನ್ನು ಮರೆತು ನಿತ್ಯದ ಕರ್ಮವನ್ನು ಸಾಧಿಸಲುದ್ಯುಕ್ತನಾದನು.

* * * *

ಪ್ರಖ್ಯಾತಿಯನ್ನು ಹೊಂದಿದ ಒಂದು ಪಟ್ಟಣದಲ್ಲಿ ಒಬ್ಬ ವೃದ್ಧನಿರುತ್ತಿದ್ದನು. ಸಂತತಿಯ ಅಭಾವದ ಹೊರತು ಅವನ ಯಾವ ಸುಖಕ್ಕೂ ಕೊರತೆಯಿದ್ದಿಲ್ಲ. ಪುತ್ರಪ್ರಾಪ್ತಿಯ ಸಲುವಾಗಿ ಶಕ್ಯವಾಗಿದ್ದ ಎಲ್ಲ ಪ್ರಯತ್ನಗಳನ್ನು ಅವನು ಮಾಡಿದರೂ ದುರ್ದೈವದಿಂದ ಅವನಿಗೆ ಯಶವು ದೊರೆಯಲಿಲ್ಲ. ಮೂವರು ಪತ್ನಿಯರು ನಿಪುತ್ರಿಕರಾಗಿ ಮರಣಹೊಂದಿದ್ದರಿಂದ, ಐದಾರು ವರ್ಷಗಳ ಪೂರ್ವದಲ್ಲಿ ಅವನು ನಾಲ್ಕನೆಯವಳನ್ನು ಮದುವೆಯಾಗಿದ್ದನು. ಆದರೂ ಪುತ್ರಮುಖವನ್ನು ನೋಡುವ ಸುಯೋಗವು ಅವನಿಗೆ ಪ್ರಾಪ್ತವಾಗಲಿಲ್ಲ. ಹೆರವರ ಮಗನನ್ನು ದತ್ತಕ ತೆಗೆದುಕೊಳ್ಳದ ಹೊರತು ಅನ್ಯವಾದ ಮಾರ್ಗವು ಉಳಿಯಲಿಲ್ಲ. ಅವನ ವಂಶಕ್ಕೆ ಹೊಂದಿದವನು ಯಾವನಾದರೂ ಇದ್ದರೆ, ಅವನನ್ನು ಗೊತ್ತುಹಚ್ಚಬೇಕೆಂದು, ಆ ವೃದ್ಧನ ಪುರೋಹಿತನು ಶೋಧ ಮಾಡುತ್ತ ಮಾಡುತ್ತ ಈ ಬ್ರಹ್ಮಚಾರಿಯು ವಾಸಮಾಡಿರುವ

ಕ್ಷೇತ್ರಕ್ಕೆ ಬಂದನು. ವಿಚಾರ ಮಾಡುತ್ತಿರಲು, ಈ ಬ್ರಹ್ಮಚಾರಿಯು ಆ ವೃದ್ಧನ ವಂಶಕ್ಕೆ ಹೊಂದಿದ ದೂರಿನ ಆಪ್ತನಾಗಿದ್ದನು. ಕ್ಷೇತ್ರಪುರೋಹಿತರ ಹತ್ತರದಲ್ಲಿದ್ದ ವಂಶಾವಳಿಯ ಪುಸ್ತಕಗಳನ್ನು ಬ್ರಹ್ಮಚಾರಿಯ ಮುಂದೆ ಬಿಚ್ಚಿಟ್ಟು ಈ ಮಾತಿನ ಸತ್ಯತೆಯನ್ನು ಆ ವೃದ್ಧ ಪುರೋಹಿತನು ಆವನಿಗೆ ಸಿದ್ಧಮಾಡಿ ಕೊಟ್ಟನು. ದತ್ತಕವಿಧಾನಕ್ಕೆ ಆ ಬ್ರಹ್ಮಚಾರಿಯ ಸಮ್ಮತಿಯನ್ನು ದೊರಕಿಸಲು ಪುರೋಹಿತನು ಪ್ರಯತ್ನಿಸಹತ್ತಿದನು ಬ್ರಹ್ಮಚಾರಿಯ ಮನಸ್ಸಿನ ಪ್ರವೃತ್ತಿಯು ಮಧುಕರಿಯ ವೃತ್ತಿಯ ಕಡೆಗೆ ಪೂರ್ಣವಾಗಿದ್ದರೂ ಅವನು ಪುರೋಹಿತನ ಮಾತುಗಳನ್ನು ಲಕ್ಷ್ಯಗೊಟ್ಟು ಕೇಳುತ್ತಿದ್ದನು. ಬರಬರುತ್ತ, ಈ ಮಾತುಗಳ ಪರಿಣಾಮವು ಬ್ರಹ್ಮಚಾರಿಯ ಮನಸ್ಸಿನ ಮೇಲೆ ಆಗಹತ್ತಿದ ಚಿಹ್ನಗಳು ಅವನ ಮೋರೆಯ ಮೇಲೆ ಕಾಣಹತ್ತಿದವು. ಪುರೋಹಿತನು ತನ್ನ ಸಂಭಾಷಣದಲ್ಲಿ ಬ್ರಹ್ಮಚಾರಿಯ ಭಾವೀ ಸುಖಗಳ ಹಾಗೂ ವೈಭವದ ಚಿತ್ರಗಳನ್ನು ಒಳ್ಳೇ ಮೋಹಕವಾಗಿ ತೆಗೆಯುತ್ತಿದ್ದನು. ಒಂದು ಪ್ರಸಂಗದಲ್ಲಿ, ಆವನ ಮನಸ್ಸು ಒಳಿತಾಗಿ ಒಲಿದದ್ದನ್ನು ಕಂಡು, ಪುರೋಹಿತನು ಅವನನ್ನು ಈ ರೀತಿಯಾಗಿ ಸಂಬೋಧಿಸಿದನು: "ನಿಮ್ಮ ದತ್ತವಿಧಾನವಾಯಿತೆಂದರೆ, ನಿಮಗೆ ಯಾತರ ಕೊರತೆ ? ಸ್ವಸ್ಥವಾಗಿ ಕುಳಿತು ಐಶ್ವರ್ಯವನ್ನು ಉಪಭೋಗಿಸುವದೇ ನಿಮ್ಮ ಕೆಲಸ. ದೇವಾಧಿದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಲಕ್ಷ್ಮಿಯು ತಾನಾಗಿ ನಡೆದು ನಿಮ್ಮ ಹತ್ತರ ಬಂದಿರಲು, ಅವಳನ್ನು ಧಿಕ್ಕರಿಸಿ ಮಧುಕರಿಯ ಜೋಳಿಗೆಯನ್ನು ಕೈಯಲ್ಲಿ ಹಾಕಿಕೊಳ್ಳುವದು ಎಲ್ಲಿಯ ನ್ಯಾಯವು ? ಸುಂದರಳೂ, ಚತುರಳೂ ಆದ ಕನ್ನಿಕೆಯ ಕೂಡ ನಾವು ನಿಮ್ಮ ವಿವಾಹವನ್ನು ಮಾಡುವೆವು. ವಿಪುಲವಾದ ಸಂಪತ್ತು ಹಾಗೂ ಮನೋಜ್ಞಳಾದ ಸ್ತ್ರೀಯು ದೊರಕುತ್ತಿದ್ದರೆ, ಉಪವಾಸ ವನವಾಸಪಟ್ಟು ಸ್ವರ್ಗವನ್ನಾದರೂ ಇಚ್ಛಿಸುವದ್ಯಾಕೆ ? ಧರ್ಮವನ್ನೇ ಆಚರಿಸುವದು ನಿಮ್ಮ ಇಚ್ಛೆಯಾಗಿದ್ದರೆ, ಶ್ರೀಮಂತರಾಗಿ ಗೃಹಸ್ಥಾಶ್ರಮದಲ್ಲಿದ್ದು ಧರ್ಮಾಚರಣವನ್ನು ಮಾಡುವದಕ್ಕೆ ನಿಮಗೆ ಯಾವ ಪ್ರತ್ಯವಾಯವು? ಮೇಲಾಗಿ ಈ ಬ್ರಹ್ಮಚರ್ಯವನ್ನು ಕಾಪಾಡುವದರಲ್ಲಿ ಇಲ್ಲವೆ, ಈ ಧರ್ಮಾಚರಣವನ್ನು ಆಚರಿಸುವದರಲ್ಲಿ ಉದ್ದೇಶವಾದರೂ ಯಾವದು ? ಪುಣ್ಯಪ್ರಾಪ್ತಿಯ ಸಲು

ವಾಗಿಯೇ ಹೌದಲ್ಲವೆ? ಅಂದಮೇಲೆ ಪರೋಪಕಾರಕ್ಕೆ ಸರಿಯಾದ ಮತ್ತ್ಯಾವದಾದರೂ ಪುಣ್ಯವುಂಟೇ? ನಿಮ್ಮ ಕುಲದಲ್ಲಿ ಜನ್ಮತಾಳಿದ ಒಬ್ಬ ವೃದ್ಧ ಮನುಷ್ಯನು ಮರಣೋನ್ಮುಖನಾಗಿದ್ದು ಪುತ್ರ ಪುತ್ರ ಎಂದು ಏಕ ಪ್ರಕಾರವಾಗಿ ದುಃಖಬಡುತ್ತಲಿದ್ದಾನೆ. ಔರಸಪುತ್ರನ ಮುಖಾವಲೋಕನ ವನ್ನು ಮಾಡುವ ಸುಖವು ಅವನ ದೈವದಲ್ಲಿಲ್ಲ. ದತ್ತಕಪುತ್ರನಾದರೂ ಲಭಿಸಿ ಅವನು ತನ್ನ ಮನೆತನದ ಹೆಸರು ನಡೆಸಬೇಕಂತಲೂ ತನ್ನ ಮರಣದ ನಂತರ ಅವನಿಂದ ಮಾಡಲ್ಪಡುವ ಪಿಂಡದಾನದಿಂದ ತಾನೂ ತನ್ನ ಪೂರ್ವ ಜರೂ ಉದ್ಧಾರರಾಗಬೇಕೆಂತಲೂ ಅವನ ಇಚ್ಛೆಯುಂಟು. ಇಂಥ ಮನು ಷ್ಯನ ಮೇಲೆ ಉಪಕಾರವನ್ನು ಮಾಡುವ ಸಾಧನವು ನಿಮ್ಮ ಒಬ್ಬರ ಕೈಯ ಲ್ಲಿಯೇ ಇರುತ್ತದೆ. ಉಳಿದ ಉಪಕಾರಗಳು ಇಹಲೋಕದ ಮಟ್ಟಿಗೆ ಮಾತ್ರ ಇರುತ್ತವೆ. ಆದರೆ, ಈ ಉಪಕಾರದಿಂದ ನಿಮ್ಮ ಕೀರ್ತಿಯು ಪರಲೋಕಕ್ಕೆ ಮುಟ್ಟುವದು. ಈ ಎಲ್ಲ ಸಂಗತಿಗಳನ್ನು ನೀವು ನಿಮ್ಮ ಲಕ್ಷ್ಯದಲ್ಲಿ ತರಬೇಕು. ತಮಗೆ ಹಾನಿಯಾದರೂ ಚಿಂತೆಯಿಲ್ಲ, ಪರೋಪಕಾರವನ್ನು ಸಾಧಿಸುವ ಸುಸಂಧಿಯು ತಮಗೆ ಪ್ರಾಪ್ತವಾದರೆ ಸಾಕೆಂಬ ಜನರು ಅಪೇಕ್ಷಿಸುತ್ತಾರೆ; ಆದರೆ, ಹಾನಿಯು ಮಾತಂತೂ ಒತ್ತಟ್ಟಿಗುಳಿದು, ನಿಮಗೆ ಲಾಭವನ್ನು ಮಾಡಿಕೊಡುವ ಈ ಪರೋಪಕಾರದ ಪ್ರಸಂಗವು ತಾನಾಗಿಯೇ ನಿಮ್ಮೆದುರು ಬಂದು ನಿಂತಿದೆ. ನೀವು ಇದರ ಅನಾದರವನ್ನು ಮಾಡಿದರೆ, ಯಾವ ಧರ್ಮಾಚರಣವನ್ನು ಸಾಧಿಸಿದಂತಾಗುವದು? ಇಂಥ ಸುಪ್ರಸಂಗದಲ್ಲಿ ಕೂಡ ಪರೋಪಕಾರವನ್ನು ಮಾಡದವನು ನರಕದ ಭಾಗಿಯಾಗುವನು. ಈ ನಿಮ್ಮ ನಿಷ್ಠುರತೆಯ ಸ್ವಭಾವಕ್ಕಾಗಿ ದೇವರು ನಿಮ್ಮನ್ನು ಕ್ಷಮಿಸುವನೆಂದು ನನಗೇನು ತೋರುವದಿಲ್ಲ. ಪಿತೃಲೋಕದಲ್ಲಿ ವಾಸಿಸುವ ನಿಮ್ಮ ಪೂರ್ವಜರು ನಿಮಗೇನೆನ್ನುವರು? ಹಾಗೂ ಮುಂದೆ ಎಂದಾದರೂ ಎಲ್ಲಿಯಾದರೂ ಅವರು ನಿಮ್ಮನ್ನು ಕಂಡರೆ, ನಿಮ್ಮ ಸ್ವಾಗತವನ್ನು ಯಾವ ಬಗೆಯಿಂದ ಮಾಡುವರೆಂಬ ಕಲ್ಪನೆಗಳನ್ನು ನೀವು ನಿಮ್ಮ ತಲೆಯಲ್ಲಿ ತಂದು ವಿಚಾರ ಮಾಡಿರಿ. ಈಗಾದರೂ ಕದಾಚಿತ್—ಇದೇ ಕಾಲದಲ್ಲಿ—ನಾನು ನಿಮ್ಮ ಸಂಗಡ ಮಾತಾಡುತ್ತ ಕುಳಿತಿರುವ ಕಾಲದಲ್ಲಿ—ನಿಮ್ಮ ಪೂರ್ವಜರು ನೀವು ಏನು ಉತ್ತರವನ್ನು ಕೊಡುವಿರೆಂಬದನ್ನು ಕೇಳುವದಕ್ಕೆ ಉತ್ಕಂಠಿತರಾಗಿ,

ಕದಾಚಿತ್ ಈ ಸ್ಥಳದಲ್ಲಿ—ಕದಾಚಿತ್ ಆ ಸ್ಥಳದಲ್ಲಿ—ಮೇಲೆ—ಕೆಳಗೆ—ಎಲ್ಲಿ ಎಂಬದನ್ನು ಯಾರು ಹೇಳಬೇಕು ?—ಬಂದು ನಿಂತಿರಬಹುದು ! ಅವರನ್ನು ನೀವು ನಿರಾಶರನ್ನಾಗಿ ಮಾಡುವಿರಾ ? ಅವರ ಕೋಪಾಗ್ನಿಗೆ ನೀವು ಗುರಿಯಾಗುವಿರಾ ? ”

ಪುರೋಹಿತನ ಈ ಭಾಷಣವನ್ನು ಕೇಳಿ ಬ್ರಹ್ಮಚಾರಿಯು ತೀರ ಗಾಬರಿಗೊಂಡನು. ದಯೆ, ಭೀತಿ, ಪರೋಪಕಾರ ಮುಂತಾದ ಮನೋವಿಕಾರಗಳ ಜೊಂಜಾಟದಿಂದ ಆವನ ಹೃದಯವು ಕಲ್ಲೋಲವಾಯಿತು. ಪುರೋಹಿತನ ಮಾತಿಗೆ ಒಪ್ಪಿಗೆಯನ್ನು ಕೊಡುವ ಹೊರತು ಅನ್ಯವಾದ ಮಾರ್ಗವು ಆವನಿಗೆ ತೋರದಂತಾಯಿತು. ಆಗ್ಗೆ, ನಿಮ್ಮ ಸಂಗಡ ನಾನು ನಿಮ್ಮ ಯಜಮಾನರ ಊರಿಗೆ ಬರುತ್ತೇನೆಂದು ಅವನು ಒಪ್ಪಿಕೊಂಡನು ; ಹಾಗೂ ಅದೇ ದಿವಸ ಸಾಯಂಕಾಲದಲ್ಲಿ ಆ ಉಭಯತರೂ ಆ ಕ್ಷೇತ್ರವನ್ನು ಬಿಟ್ಟು ತಮ್ಮ ಮುಂದಿನ ಮಾರ್ಗವನ್ನು ಆಕ್ರಮಿಸಹತ್ತಿದರು. ಅಷ್ಟರಲ್ಲಿ, ತಾನು ಸ್ವಪ್ನದಲ್ಲಿ ನೋಡಿದ ಪುರುಷನ ಆಕೃತಿಯೇ ತನಗೆ ಅಸ್ಪಷ್ಟವಾಗಿ ಕಾಣಹತ್ತಿದಂತೆ ಆ ಬ್ರಹ್ಮಚಾರಿಗೆ ಭಾಸವಾಯಿತು. ಆದರೆ ಆವನು ವಿಶೇಷವಾಗಿ ತನ್ನ ಲಕ್ಷ್ಯವನ್ನು ಕೊಡಲಿಲ್ಲ.

* * * *

ಕಮಲಾಪುರಕ್ಕೆ ಹೋಗಿ ಮುಟ್ಟಿದ ಬಳಿಕ, ಕೂಡಲೇ ದತ್ತಕವಿಧಾನದ ಸಮಾರಂಭವಾಯಿತು. ಬ್ರಹ್ಮಚಾರಿಯ ಸ್ವರೂಪವನ್ನೂ, ಜಾಣತನವನ್ನೂ, ಆಚರಣವನ್ನೂ ನೋಡಿ ದತ್ತಕ ಜನಕನಿಗೆ ಒಳಿತಾಗಿ ಸಮಾಧಾನವೆನಿಸಿತು. ಆದರೆ, ಮಗನನ್ನು ನೋಡಿ ನೋಡಿದಾಗ ಅವನು ದುಃಖದಿಂದ ಉಸುರ್ಗರೆಯುತ್ತಿದ್ದನು. ದತ್ತಕ ಮಗನ ಹೆಸರು ' ಭೋಲಾನಾಥ ' ಎಂದು ಇಡಲ್ಪಟ್ಟಿತು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಸುಸ್ವರೂಪಿಯಾದ ಒಬ್ಬ ತರುಣಿಯ ಕೂಡ ಇವನ ವಿವಾಹವಾಯಿತು. ಇವನ ದತ್ತಕ ತಾಯಿಯೆಂದರೆ, ಇವನ ತೀರ್ಥರೂಪರ ನಾಲ್ಕನೆಯ ಲಗ್ನದ ಪತ್ನಿಯಾದರೂ ಒಳ್ಳೇ ಚಲುವೆಯಾಗಿ ತಾರುಣ್ಯದ ಭರದಲ್ಲಿದ್ದಳು. ಭೋಲಾನಾಥನನ್ನು ಅವಳು ನಿಸ್ಸೀಮವಾದ ಪುತ್ರಪ್ರೇಮದಿಂದ ಮನ್ನಿಸುತ್ತಿದ್ದಳು. ಭೋಲಾನಾಥನಾದರೂ ಆಕೆಯಲ್ಲಿ ಹಡೆದ ತಾಯಿಯಂತೆ ಪೂರ್ಣವಾದ ಮಾತೃಭಕ್ತಿಯ

ನ್ನಿಟ್ಟು, ನಿಷ್ಕಪಟವಾದ ಭಾವದಿಂದ ಆಕೆಯು ಕೂಡ ನಡೆದುಕೊಳ್ಳುತ್ತಿದ್ದನು. ಆದರೆ, ಭೋಲಾನಾಥನ ಪತ್ನಿಯು ಬಾಹ್ಯಸ್ವರೂಪದಲ್ಲಿ ಸುಂದರಳಾಗಿದ್ದಂತೆ ಆಕೆಯ ಅಂತರಂಗವು ಚನ್ನಾಗಿದ್ದಿದ್ದಿಲ್ಲ. ಅವಳು ಪ್ರತಿಯೊಂದು ಮಾತಿಗೆ ಸಂಶಯುವನ್ನು ಪಡುವ ಸ್ವಭಾವದವಳಾಗಿದ್ದಳು. ಅತ್ತೆಯು ಸೊಸೆಗಿಂತಲೂ ಎರಡೇ ವರ್ಷಗಳಿಂದ ಹಿರಿಯಳಾಗಿದ್ದಳು. ಇಬ್ಬರೂ ತರುಣಿಯರು ಸಮಾನ ರೂಪವುಳ್ಳವರಾಗಿದ್ದರೂ ಅವರ ಸ್ವಭಾವವು ಭಿನ್ನವಾಗಿತ್ತು. ಈ ಸ್ಥಿತಿಯು ಮೂಲಕವಾಗಿ ಮಾತಾಪುತ್ರರ ಪರಸ್ಪರರ ವರ್ತನದಲ್ಲಿಯ ಸರಲವಾದ ಹಾಗೂ ಸ್ವಾಭಾವಿಕವಾದ ಎಷ್ಟೋ ಸಂಗತಿಗಳ ಸಂಬಂಧವಾಗಿ ಭೋಲಾನಾಥನ ಪತ್ನಿಯ ಮನಸ್ಸಿನಲ್ಲಿ ಉತ್ಪನ್ನವಾದ ಇಲ್ಲದ ಕುತರ್ಕಗಳು ದೃಢವಾಗುತ್ತ ನಡೆದವು. ಭೋಲಾನಾಥನಿಗಾಗಲಿ, ಅವನ ತಾಯಿಗಾಗಲಿ ಇದರ ಕಲ್ಪನೆಯು ಕೂಡ ಇಲ್ಲದ್ದರಿಂದ, ಮಾತಾಪುತ್ರರಲ್ಲಿದ್ದ ಪ್ರೇಮದ ಮೂಲಕವಾಗಿ ಆ ಉಭಯತರು ಪರಸ್ಪರರನ್ನು ಸ್ನೇಹಿತರಂತೆ ಭಾವಿಸುತ್ತಿದ್ದರು. ಆದರೆ ಸಂಶಯದಿಂದ ಗ್ರಸ್ತಳಾದ ಗಿರಿಜಾಬಾಯಿಯ ದೃಷ್ಟಿಗೆ ಈ ಸಂಗತಿಗಳೆಲ್ಲ ವಿಪರೀತವಾಗಿ ತೋರಹತ್ತಿದವು. ಗಿರಿಜಾಬಾಯಿಯ ಹೃದಯದಲ್ಲಿದ್ದ ಮತ್ಸರವೆಂಬ ರಾವುಗನ್ನಡಿಯಲ್ಲಿ ನಿಷ್ಕಪಟವು ಕಪಟವಾಗಿಯೂ ಮಾತೃಪ್ರೇಮವು ವಿಷಯಾಂಧತೆಯಾಗಿಯೂ ಸಹಜವಾದ ವೃತ್ತಿಯು ನಿರ್ಲಜ್ಜತೆಯಾಗಿಯೂ ಕಾಣಹತ್ತಿದವು. ಇರಲಿ.

* * * *

ಭೋಲಾನಾಥನ ದತ್ತಕ ತಂದೆಯ ಹುಚ್ಚು ದಿವಸ ದಿವಸಕ್ಕೆ ಹೆಚ್ಚುತ್ತ ನಡೆಯಿತು. ಇವನಂತೆಯೇ ಇವನ ತಂದೆ, ಅಜ್ಜ ಮುತ್ತಂದಿರು ಹುಚ್ಚರಾಗಿದ್ದರು. ಹಾಗೂ ಆದರಿಂದಲೇ ಅವರು ಮರಣವನ್ನು ಹೊಂದಿದ್ದರೆಂಬ ತನ್ನ ಮನೆತನದ ಈ ಪೂರ್ವೇತಿಹಾಸವು ಭೋಲಾನಾಥನಿಗೆ ಗೊತ್ತಾಗಿತ್ತು. ಅದರಿಂದ ಅವನ ಮನಸ್ಸಿನ ಮೇಲೆ ಈ ಪೂರ್ವಪರಂಪರೆಯ ಪರಿಣಾಮವು ಬಹು ವಿಲಕ್ಷಣವಾಗಿ ಆಗಹತ್ತಿತ್ತು. ಈ ಕುಟುಂಬಕ್ಕೆ ಹೊಂದಿದ್ದರಿಂದ 'ನಾನಾದರೂ ವೃದ್ಧಾಪ್ಯಕಾಲದಲ್ಲಿ ಹುಚ್ಚನಾಗುವೆನೋ ಏನೋ' ಎಂಬ ಭೀತಿಯಿಂದ ಅವನು ತಾರುಣ್ಯದಲ್ಲಿಯೇ ಹುಚ್ಚುಹಿಡಿದವನಂತೆ ಮಾಡಹತ್ತಿದ್ದನು. ಈ ಆನುವಂಶಿಕವಾದ ಹುಚ್ಚಿನ ಬಾಧೆಯು

ಯಾಕೆ ಹಾಗೂ ಹೇಗೆ ಉತ್ಪನ್ನವಾಗುತ್ತದೆಂಬದರ ಬಗ್ಗೆ ಅವನು ಬಹು ಪ್ರಯತ್ನಪೂರ್ವಕವಾಗಿ ಆಲೋಚಿಸಿದನು. ಆದರೆ, ಚತುರ್ಥ ಸಂಬಂಧದ ತಾಯಿಯನ್ನು ಹೊರತುಪಡಿಸಿ, ಮನೆತನದ ಸಂಗತಿಗಳನ್ನು ಬಲ್ಲ ಹಿರಿಯರು ಯಾರೂ ಇಲ್ಲದ್ದರಿಂದ ಅವನಿಗೆ ಈ ಕಾರಣಗಳ ಬಗ್ಗೆ ಏನೂ ಗೊತ್ತಾಗ ಲಿಲ್ಲ. ಆದರಿಂದ ಅವನು ಭ್ರಮಿಷ್ಟನ ಹಾಗೆ ಆಚರಿಸಹತ್ತಿದನು. ಬರಬರುತ್ತ ತಂದೆಯ ಭ್ರಮಿಷ್ಟತನವೂ ಹುಚ್ಚುತನವೂ ವಿಕೋಪಕ್ಕೆ ಹೋದವು. ಇನ್ನು ಮೇಲೆ ತಾನು ಬಹಳ ದಿವಸ ಬಾಳುವದಿಲ್ಲೆಂತಲೂ ತನ್ನ ಅಂತಕಾಲವು ಸಮಿಪಿಸಿರುವದೆಂತಲೂ ಭಾವಿಸಿ ಆ ವೃದ್ಧಗೃಹಸ್ಥನು ಒಂದು ದಿನ ಮಧ್ಯರಾತ್ರಿಯಲ್ಲಿ ಎಲ್ಲರೂ ಗಾಢವಾದ ನಿದ್ರೆಯಲ್ಲಿದ್ದಾಗ ಭೋಲಾನಾಥ ನನ್ನು ಮೆಲ್ಲನೆ ಎಬ್ಬಿಸಿದನು. ಅವನ ಕೈಹಿಡಿದು ಅವನ ಕೂಡ ಮಾತಾಡುತ್ತ ಮಾತಾಡುತ್ತ ತನ್ನ ವಿಸ್ತಾರವಾದ ಮನೆಯ ಹೊರಅಂಗಳದಲ್ಲಿ ಉತ್ತರ ದಿಕ್ಕಿನ ಕೊನೆಯ ಭಾಗದಲ್ಲಿದ್ದ ಒಂದು ಕಟ್ಟಡದ ಮಾರ್ಗವನ್ನು ಹಿಡಿದು ಅವನು ಹೋಗಹತ್ತಿದನು. "ಭೋಲಾನಾಥನೆ, ಇದೇ ಉತ್ತರ ದಿಕ್ಕು. ಎದುರಿನಲ್ಲಿ ಕಾಣುವ ಗಿಡದ ತಲೆಯ ಮೇಲೆ ಧ್ರುವನಕ್ಷತ್ರವಿರಬೇಕು. ಮೊದಲು ಅದು ನನಗೆ ಕಾಣುತ್ತಿತ್ತು; ಆದರೆ, ಇತ್ತಿತ್ತಲಾಗಿ ಅದು ನನಗೆ ಕಾಣದಂತಾಗಿದೆ. ಅದೇಕೆ, ನನ್ನ ಮೂಗಿನ ತುದಿಯಾದರೂ ನನಗೆ ಈಗ ಕಾಣುವದಿಲ್ಲ. ರಾತ್ರಿಯಲ್ಲಿ ನನಗೆ ನಿದ್ದೆಯು ಹತ್ತುವದಿಲ್ಲ. ಹತ್ತಿ ದರೂ ಭಯಂಕರವಾದ ಸ್ವಪ್ನಗಳು ಬಿದ್ದು, ಬೆದರಿ ಎದ್ದು ಕೂಡುತ್ತೇನೆ. ಭಯಂಕರವಾದ ಧ್ವನಿಗಳು ಕೇಳಬರುತ್ತಿವೆ. ಚೀರಾಟದ ಸಪ್ಪಳವನ್ನು ಕೇಳಿ ಕಿವಿಗಳು ಗಡಚುಹಾಕಿವೆ. ಅಕ್ರಾಳವಿಕ್ರಾಳರಾದ ಯಮದೂತರು ನನ್ನ ಸುತ್ತಲೂ ಭಯಾನಕವಾದ ನರ್ತನವನ್ನು ಮಾಡುತ್ತಾರೆ; ಹಾಗೂ ತಮ್ಮ ಪಾಶದಿಂದ ನನ್ನನ್ನು ಬಿಗಿಯಲು ಪ್ರಯತ್ನಿಸುತ್ತಾರೆ. ಇಂಥ ಸ್ಥಿತಿ ಯಲ್ಲಿ ನಾನು ಬಹಳ ದಿವಸಗಳ ವರೆಗೆ ಬದುಕಿರುವೆನೆಂಬದು ಅಸಾಧ್ಯವು. ನನ್ನ ಹಿಂದೆ ನೀನು ಎಲ್ಲ ಸಂಗತಿಗಳನ್ನು ಚನ್ನಾಗಿ ನೋಡುತ್ತ ಹೋಗುವಿ ಎಂದು ನನಗೆ ಪೂರ್ಣವಾದ ನಂಬಿಗೆಯಿದೆ. ಆದರೆ, ನಿನ್ನ ಪ್ರಪಂಚಕ್ಕೆ ಬೇಕಾಗುವ ಹಣವು ನಿನಗೆ ಎಲ್ಲಿ ದೊರೆಯುವದೆಂಬ ಸ್ಥಳವನ್ನು ನಿನಗೆ ತೋರಿಸಬೇಕಾಗಿದೆ; ಹಾಗೂ ಅದಕ್ಕಾಗಿಯೇ ನಿನ್ನನ್ನು ಆ ಕಟ್ಟಡದ ಕಡೆಗೆ

ಕರೆದುಕೊಂಡು ಹೋಗುತ್ತಲಿದ್ದೇನೆ. ನಿನಗೆ ಹಣವು ಬೇಕಾದರೆ ಅದು ಹುಣ್ಣಿವೆ ಅಮಾಸೆಗೆ ಮಾತ್ರ ದೊರೆಯುವದು."

ಹೀಗೆ ಮಾತಾಡುತ್ತ ಆ ವೃದ್ಧನು ಮುಂದೆ ಸಾಗಿದನು ಲಕ್ಷ್ಯಗೊಟ್ಟು ಇದನ್ನೆಲ್ಲ ಕೇಳಿದ ಭೋಲಾನಾಥನು ಆಶ್ಚರ್ಯಚಕಿತನಾಗಿ ಒಂದು ಶಬ್ದ ವನ್ನಾದರೂ ಉಚ್ಚರಿಸದೆ ಆವನ ಬೆನ್ನು ಹತ್ತಿ ನಡೆದನು. ಮುದುಕನು ಆ ಕಟ್ಟಡದ ಹೊರಗಿನ ಬಾಗಿಲವನ್ನು ತೆರೆದನು. ಒಳಗೆ ಹೋದ ಬಳಿಕ ನೆಲ ಮನೆಯು ಹತ್ತಿತು. ನೆಲಮನೆಯ ಕಲ್ಲಿನ ಗೋಡೆಯಲ್ಲಿ ಒಂದು ಗುಪ್ತ ದ್ವಾರವಿತ್ತು. ಮೊದಲೇ ಅಲ್ಲಿ ಸಿದ್ಧಮಾಡಿಡಲ್ಪಟ್ಟ ಯಾವದೋ ಒಂದು ಕೃತ್ರಿಮ ಸಾಧನದಿಂದ ಆ ದ್ವಾರವನ್ನು ಒಂದು ಮಗ್ಗಲಿಗೆ ಸರಿಸಿ ಉಭಯ ತರೂ ಒಳಹೊಕ್ಕರು ಅಲ್ಲಿದ್ದ ಕೆಲವು ಪಾವಟಣಿಗೆಗಳನ್ನು ಇಳಿದುಹೋದ ಬಳಿಕ ಆ ಮುದಕನು ಮಿಣಿಮಿಣಿ ಉರಿಯುವ ಒಂದು ದೀಪವನ್ನು ಹಚ್ಚಿ ದನು. ಆ ದೀಪದ ಬೆಳಕಿನಲ್ಲಿ ಅಲ್ಲಿ ಕಾಣುತ್ತಿದ್ದ ಒಂದು ಕೋಣೆಯ ಬಾಗಿಲವನ್ನು ಆ ಮುದುಕನು ತೆರೆದನು. ಈ ಬಾಗಿಲವನ್ನು ತೆರೆಯುವಾಗ ಮುದುಕನ ಕೈಕಾಲುಗಳು ತೀರ ನಡುಗಹತ್ತಿದವು. ಅವನ ಕೈಯಲ್ಲಿದ್ದ ಕರ ದೀಪವು ನೆಲಕ್ಕೆ ಬೀಳುತ್ತಿತ್ತು; ಆದರೆ ಭೋಲಾನಾಥನು ಅದನ್ನು ಅವಸರ ಮಾಡಿ ತನ್ನ ಕೈಯಲ್ಲಿ ಹಿಡಿದನು. ಮುದುಕನು ತೀರ ಗಾಬರಿಗೆಟ್ಟುಹೋಗಿ ದ್ದರೂ "ಅಂಜಬೇಡ, ಗಾಬರಿಗೊಳ್ಳಬೇಡ! ನಿನ್ನ ಮೈಯಲ್ಲಿ ಬೆವರು ಯಾಕೆ ಬಿಟ್ಟದೆ? ಇಕೋ ಇಲ್ಲಿ ನೋಡು, ನಮ್ಮ ಸಂಪತ್ತೆಲ್ಲ ಈ ಸ್ಥಳದಲ್ಲಿ ಸಂಚಿತವಾಗಿದೆ," ಎಂದು ತನ್ನ ಮಗನಿಗೆ ಹೇಳುತ್ತಿದ್ದನು. ಈ ಶಬ್ದಗ ಳನ್ನು ಕೇಳುತ್ತಿರುವಾಗ ಭೋಲಾನಾಥನ ಲಕ್ಷ್ಯವು ಅಂಧವಾದ ದೀಪದ ಪ್ರಕಾಶದಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ ಆ ಕೋಣೆಯೊಳಗಿನ ಭಯಂಕರ ವಾದ ನೋಟದ ಕಡೆಗೆ ಹೋಯಿತು. ಆ ಕೋಣೆಯಲ್ಲಿ ಬಂಗಾರದ ಮೋಹರಗಳಿಂದ ತುಂಬಿದ ದೊಡ್ಡ ದೊಡ್ಡ ಹರಿವೆಗಳು ಅನೇಕವಿದ್ದವು. ಆದರೆ, ಆ ಹರಿವೆಗಳ ಕಡೆಗೆ ತನ್ನ ದೃಷ್ಟಿಯನ್ನು ಚಲ್ಲಲು ಭೋಲಾನಾಥನು ಅಲ್ಲಿ ಏನು ನೋಡಿದನು? ಪ್ರತಿಯೊಂದು ಹರಿವೆಯ ಮೇಲೆ, ಭಯಾನಕ ವಾದ ಹಾಗೂ ಆಕ್ರಾಳ ವಿಕ್ರಾಳ ಸ್ವರೂಪವನ್ನು ಧಾರಣಮಾಡಿದ ಒಂದೊಂದು ಪಿಶಾಚಿಯನ್ನು ಅವನು ನೋಡಿದನು. ಈ ಪಿಶಾಚಿಗಳ

ಸ್ವರೂಪಗಳಾದರೂ ನಾನಾವಿಧವಾಗಿದ್ದವು. ಎಲುಬಿನ ಹಂದರದಂತೆ ತೋರುವ ವೃದ್ಧ ಪುರುಷರ ರೂಪಗಳನ್ನು ಧಾರಣಮಾಡಿದ ಪಿಶಾಚಿಗಳು ಕೆಲವು ಹರಿವೆಗಳ ಮೇಲೆ ಅಂಟಿಗೊಂಡು ಕುಳಿತಿದ್ದವು. ಅನಾಥರಾದ ವಿಧವೆಯರ ರೂಪಗಳನ್ನು ಧಾರಣ ಮಾಡಿದ ಪಿಶಾಚಿಗಳು ದೀನರಂತೆ ರೋದನ ಮಾಡುತ್ತ ತಮ್ಮ ಎದೆಗಳನ್ನು ಬಡೆದುಕೊಳ್ಳುತ್ತ ಕೆಲವು ಹರಿವೆಗಳ ಮೇಲೆ ಕುಳಿತಿದ್ದವು. ವಿಷಪ್ರಯೋಗದಿಂದ ಕಾಡಿಗೆಯಂತೆ ಕಪ್ಪಾದ ಹಾಗೂ ಚೂರಿಯ ಗಾಯದ ರಕ್ತದಿಂದ ಮಲಿನವಾದ ಅರ್ಭಕರ ರೂಪಗಳನ್ನು ಧಾರಣಮಾಡಿದ ಪಿಶಾಚಿಗಳು ದೊಡ್ಡ ಧ್ವನಿಯಿಂದ ಚೀರುತ್ತ ಕೆಲವು ಹರಿವೆಗಳ ಮೇಲೆ ಕುಳಿತಿದ್ದವು. ಆ ಭವ್ಯವಾದ ಕೋಣೆಯು ಭೂತಪ್ರೇತ ಪಿಶಾಚ್ಯಾದಿಗಳಿಂದ ದಟಿತವಾಗಿತ್ತು. ಮೈಮೇಲೆ ಗೇಣು ಗೇಣು ಉದ್ದ ಕೂದಲು ಬೆಳೆದ, ಕಣ್ಣುಗಳೊಳಗಿಂದ ಕಿಡಿಗಳನ್ನು ಉದುರಿಸುವ ಹಾಗೂ ಆನೆಯ ಸೊಂಡಿಲದಂತೆ ಪುಷ್ಟವಾದ ಮಹಾಭುಜಂಗಗಳು ತಮ್ಮ ಹೆಡೆಗಳನ್ನು ತೆಗೆದು ಫೂತ್ಕಾರಗಳನ್ನಿಕ್ಕುತ್ತ ಕೆಲವು ಹರಿವೆಗಳ ಮೇಲೆ ಸುರಳಿಯನ್ನು ಸುತ್ತಿಕೊಂಡು ಕುಳಿತಿದ್ದವು. ಕೆಲವು ಹರಿವೆಗಳಿಂದ ಅಗ್ನಿಯ ಜ್ವಾಲೆಗಳು ಹೊರಬೀಳುತ್ತಿದ್ದವು. ಕೆಲವು ಹರಿವೆಗಳೊಳಗಿನ ಮೋಹರಗಳು ಒಂದು ಕ್ಷಣಹೊತ್ತು ಭಂಗಾರದವಾಗಿ ತೋರಿದರೆ, ಮತ್ತೊಂದು ಕ್ಷಣದಲ್ಲಿ ಇದ್ದಲೆಯಂತೆ ತೋರುತ್ತಿದ್ದವು ಆ ಕಲ್ಲಿನ ಕೋಣೆಯ ಬಾಗಿಲವು ತೆರದ ಕೂಡಲೆ, ಅಲ್ಲಿದ್ದ ಪಿಶಾಚಿಗಳೆಲ್ಲ ಈ ದುಷ್ಟರು ನಮ್ಮ ದ್ರವ್ಯವನ್ನು ಹರಣ ಮಾಡುವದಕ್ಕಾಗಿ ಬಂದರೆಂದು ಕೆಲವು ಚೀರಾಡಹತ್ತಿದವು; ಕೆಲವು ಭಯಂಕರವಾದ ಧ್ವನಿಯನ್ನು ತೆಗೆದು ಆಕ್ರೋಶಮಾಡಹತ್ತಿದವು; ಹಾಗೂ ಕೆಲವು ಹೊರಗಿನವರು ಒಳಗೆ ಬರಬಾರದೆಂದು ಮೈಮೇಲೆ ಎಚ್ಚರವಿಲ್ಲದಂತೆ ಓಡಿಬಂದು ಬಾಗಿಲವನ್ನು ಅಡ್ಡಗಟ್ಟಿದವು. ಮುದುಕನ ನಾಲಿಗೆಯು ಗಾಬರಿಯಿಂದ ತೊದಲಹತ್ತಿತು. ಅವನು ಅಸ್ಪಷ್ಟವಾದ ಶಬ್ದಗಳಿಂದ ತನ್ನ ಮಗನಿಗೆ ಅಂದದ್ದು : '' ಹೂಂ ಮುಂದೆ ಆಗು; ಯಾವದಾದರೊಂದು ಕೊಪ್ಪರಿಗೆಯಲ್ಲಿ ಕೈಹಾಕಿ ನಿನ್ನ ಬೊಗಸೆ ತುಂಬ ಮೋಹರಗಳನ್ನು ತ್ವರಿತವಾಗಿ ತೆಗೆದುಕೊಂಡು ಬಾ. ಈ ಪಿಶಾಚಿಗಳು ನಿನ್ನ ಮೈಮೇಲೆ ಬಂದರೆ, ನೀನು ಅವುಗಳಿಗೆ ಹೆದರಬೇಡ; ಅವುಗಳ ಕೂಡ ಹೊಡೆದಾಡಿ

ಬಡೆದಾಡಿ ಅವುಗಳನ್ನು ಒಂದು ಮಗ್ಗಲಿಗೆ ನೂಕಿ, ಕೊಪ್ಪರಿಗೆಯಲ್ಲಿಯ ದ್ರವ್ಯವನ್ನು ತೆಗೆದುಕೊಂಡು ಬಾ." ತಂದೆಯು ಹೀಗೆ ಹೇಳಿದರೂ ಮಗನಿಗೆ ಧೈರ್ಯವು ಸಾಲಲೊಲ್ಲದು. ಕಲ್ಲಿನಂತೆ ಸ್ತಬ್ಧವಾಗಿಯೂ ಪ್ರೇತದಂತೆ ತಣ್ಣಗಾಗಿಯೂ ನಿಂತಿದ್ದ ಮಗನನ್ನು . ನೋಡಿ ಕೊನೆಗೆ ಮುದುಕನೇ ಮುಂದಾಗಿ ಒಂದು ಕೊಪ್ಪರಿಗೆಯಲ್ಲಿ ಕೈ ಹಾಕಿದನು. ಕೂಡಲೆ, ಅಲ್ಲಿದ್ದ ಪಿಶಾಚಿಗಳೆಲ್ಲ ಮುದುಕನನ್ನು ಸುತ್ತುಗಟ್ಟಿ ಅವನ ಕೈಕಾಲು ಚಂಡಿಕೆಗಳನ್ನು ಹಿಡಿದು ಅವನನ್ನು ದರದರ ಎಳೆಯಹತ್ತಿದವು. ಇದನ್ನು ನೋಡಿದ ಕೂಡಲೆ ಭೋಲಾನಾಥನು ತೀರ ಮೃತಪ್ರಾಯನಾದನು. ಆದರೆ, ಅವನು ಕೂಡಲೆ, ಎಚ್ಚರವನ್ನು ಹೊಂದಿ ತನ್ನ ತಂದೆಯನ್ನು ತನ್ನ ಕೈವಶ ಮಾಡಿಕೊಳ್ಳಲು ಪ್ರಯತ್ನಿಸಹತ್ತಿದನು. ಮುದುಕನ ಒಂದು ಕೈಯನ್ನು ಹಿಡಿದು ಪಿಶಾಚಿಗಳು ಅವನನ್ನು ಒಳಗೆ ಜಗ್ಗುತ್ತಿದ್ದವು; ಮಗನು ಅವನ ಮತ್ತೊಂದು ಕೈಯನ್ನು ಹಿಡಿದು ಹೊರಗೆ ಜಗ್ಗುತ್ತಿದ್ದನು. ಈ ಜಗಳಾಟದಲ್ಲಿ ಮಗನು ಹಾಗೂ ಹೀಗೂ ಮಾಡಿ ತಂದೆಯನ್ನು ಕೋಣೆಯ ಹೊರಗೆ ಜಗ್ಗಿ ತಂದು, ಕೋಣೆಯ ಬಾಗಿಲವನ್ನು ಗಟ್ಟಿಯಾಗಿ ಮುಚ್ಚಿಕೊಂಡನು. ಕೆಲವು ಹೊತ್ತಿನ ಮೇಲೆ ತಂದೆಯು ಎಚ್ಚರಗೊಂಡು, ತಾನು ಎಷ್ಟು ಮೋಹರಗಳನ್ನು ತಂದಿರುವೆನೆಂಬದನ್ನು ಎಣಿಸಿ, ಅವುಗಳನ್ನು ಸೆರಗಿನಲ್ಲಿ ಕಟ್ಟಿಕೊಂಡು, ಮಗನ ಹೆಗಲಮೇಲೆ ಕುತ್ತಿಗೆಯನ್ನು ಚಲ್ಲಿ ಬಂದ ಹಾದಿಯನ್ನು ಹಿಡಿದು ಹಿಂದಿರುಗಿದನು. ಮಗನು ತಂದೆಯನ್ನು ನಿಸ್ತರಿಸುತ್ತ ನಿಸ್ತರಿಸುತ್ತ ಆ ಕಟ್ಟಡವನ್ನು ಬಿಟ್ಟು ಹೊರಬೀಳಲು, ತಾನು ಪೂರ್ವದಲ್ಲಿ ತನ್ನ ಸ್ವಪ್ನದಲ್ಲಿ ಕಂಡ ಪುರುಷಾಕೃತಿಯು ತನ್ನ ಎದುರಿನಲ್ಲಿ ನಿಂತು ತನ್ನನ್ನು ದಿಟ್ಟಿಸಿ ನೋಡುವದನ್ನು ಅವನು ಕಂಡನು.

* * * *

ತಾಯಿಯು : ಈಗ ಇವರು ಬೇನೆ ಬಿದ್ದಂತೆ ಪ್ರತಿ ಅಮಾಸೆ ಹುಣ್ಣಿವಿಗೆ ಬೇನೆ ಬೀಳುತ್ತಿದ್ದರು. ಪ್ರತಿ ಅಮಾಸೆ ಹುಣ್ಣಿವೆಯ ದಿವಸ ಮಧ್ಯರಾತ್ರಿಯಲ್ಲಿ ಎದ್ದು ಹೊರಗೆ ಹೋಗಿ ಮೋಹರಗಳನ್ನು ತೆಗೆದುಕೊಂಡು ಬರುತ್ತಿದ್ದರು. ಆದರೆ, ಇವರು ಎಲ್ಲಿ ಹೋಗುತ್ತಾರೆಂಬದೂ ಮೋಹರಗಳನ್ನು ಎಲ್ಲಿಂದ ತರುತ್ತಾರೆಂಬದೂ ನನಗೆ ಗೊತ್ತಾಗುತ್ತಿದ್ದಿಲ್ಲ.

ಮೋಹರಗಳನ್ನು ತೆಗೆದುಕೊಂಡು ಬಂದರೆಂದರೆ, ಇವರ ಕೈಕಾಲುಗಳು ನಡುಗುತ್ತಿದ್ದವು, ಮೈಯೆಲ್ಲ ಬೆವರಿನಿಂದ ತಪತಪ ತೊಯ್ಯುತ್ತಿತ್ತು, ಹಾಗೂ ಆ ಬಳಿಕ ಮೈಯಲ್ಲಿ ಚಳಿತುಂಬಿ ಹಾಸಿಗೆಯನ್ನು ಹಿಡಿದು ಮಲಗುತ್ತಿದ್ದರು ಜ್ವರದ ಸಂತಾಪದಿಂದ ಬಡಬಡಿಸಹತ್ತಿದರೆಂದರೆ, ಆದರಲ್ಲಿ ಭೂತ ಪಿಶಾಚಾದಿಗಳ ಸುದ್ದಿಯೇ. ಈಗಿನ ವರೆಗೆ ನನಗೆ ಇದರ ಗೂಢವೇ ತಿಳಿದಿದ್ದಿಲ್ಲ. ಆದರೆ ಭೋಲಾನಾಥನೆ, ನೀನು ಈಗ ಹೇಳುತ್ತಿರುವ ಭಯಂಕರವಾದ ಸುದ್ದಿಯಿಂದ ಎಲ್ಲ ಸಂಗತಿಗಳು ಚನ್ನಾಗಿ ನನ್ನ ಲಕ್ಷದಲ್ಲಿ ಬಂದಿವೆ.

ಭೋಲಾನಾಥ: ತಾಯಿಯೆ ಭಯಂಕರವಾದ ಸುದ್ದಿಯೆಂದು ಏನು ಹೇಳಲಿ! ಪಿಶಾಚಿರೂಪಗಳನ್ನು ಧರಿಸಿದ ಮನುಷ್ಯರು ಸತ್ತುಹೋಗಿದ್ದರೂ ಅವರ ವಾಸನೆಗಳು ಜೀವಂತವಾಗಿವೆ. ಸುಟ್ಟು ಬೂದಿಯಾದ ಶರೀರಗಳು ಭಯಾನಕವಾದ ಬೀಭತ್ಸ ರೂಪಾಂತರಗಳನ್ನು ಹೊಂದಿವೆ. ಇಂಥ ನೋಟವನ್ನು ಯಾರೂ ನೋಡಿರಲಿಕ್ಕಿಲ್ಲೆಂದು ನನಗಂತೂ ತೋರುತ್ತದೆ. ಬೇಡ. ಆದರ ಸ್ಮರಣವಾಗುವದೂ ಕೂಡ ನನಗೆ ಬೇಡ. ಇಡೀ ಜಗತ್ತಿನಲ್ಲಿ ಸಂಚಿತವಾಗಿರುವ ದ್ರವ್ಯವನ್ನು ಕೊಡುವೆನೆಂದು ಯಾವನಾದರೂ ನನಗೆ ಹೇಳಿದರೂ ಕೂಡ ನಾನು ಅಲ್ಲಿಗೆ ಹೋಗಲಿಕ್ಕಿಲ್ಲ. ಇಕೋ, ಎದುರಿನಲ್ಲಿ ಕಾಣುತ್ತಿರುವ ಕಟ್ಟಡದಲ್ಲಿ ಪಿಶಾಚಿಗಳ ರೂಪಗಳನ್ನು ಧಾರಣ ಮಾಡಿಕೊಂಡು ಕ್ಲೇಶಗಳನ್ನು ಪಡುತ್ತಿರುವವರ ದ್ರವ್ಯವನ್ನು, ನಮ್ಮ ಪೂರ್ವಜರಲ್ಲೊಬ್ಬನು ಅವರನ್ನು ಅನ್ಯಾಯದಿಂದ ಘಾತಿಸಿ, ಅವರಿಂದ ಸುಲಿದುಕೊಂಡಿರಲೇಬೇಕು. ದ್ರವ್ಯದ ಹಂಬಲವಾದರೂ ಎಷ್ಟು? ಒಂದು ಕುಟುಂಬದವರ ಸಲುವಾಗಿ—ಯಃಕಶ್ಚಿತನಾದ ಒಬ್ಬ ಮಾನವೀ ಪ್ರಾಣಿಯ ಕ್ಷಣಿಕಸುಖದ ಸಲುವಾಗಿ—ನೂರಾರು ಕುಟುಂಬದವರನ್ನು ದಾರಿದ್ರ್ಯದ ಪಂಕದಲ್ಲಿ ಕೊಳೆಹಾಕಿ, ಬಂಗಾರದ ಮೋಹರಗಳಿಂದ ತುಂಬಿದ ಇಷ್ಟು ಕೊಪ್ಪರಿಗೆಗಳನ್ನು ಒಂದು ಸ್ಥಳದಲ್ಲಿ ಕೂಡಿ ಹಾಕುವದರಿಂದ ಲಾಭವಾದರೂ ಯಾವದು? ತನ್ನ ಗೇಣು ಹೊಟ್ಟೆಗಾಗಿ, ಉಳಿದ ಸಾವಿರಾರು ಜನರನ್ನು ಉಪವಾಸದ ಪಥಕ್ಕೆ ಹಚ್ಚಿ ಅವರ ಪ್ರಾಣಗಳನ್ನು ಹಿಂಡಿ ಹಿಪ್ಪಿ ಮಾಡಿದವನ ವಂಶದಲ್ಲಿ ಮುಂದೆ ಔರಸ ಸಂತತಿಯು ಹುಟ್ಟದಿದ್ದರೆ, ಅದರಲ್ಲಿ ಯಾವ ಆಶ್ಚರ್ಯವು? ಅನೇಕರ ಗೋಣುಗಳನ್ನು ಮುರಿದು ಅವರ ದ್ರವ್ಯವನ್ನೆಲ್ಲ ನಾನೊಬ್ಬನೇ ನನ್ನ ಕೊಪ್ಪರಿಗೆಯು

ಲ್ಲಿಡುವೆನೆಂದು ಯಾವನಾದರೂ ಮಾತಾಡಹತ್ತಿದರೆ, ನ್ಯಾಯದ ತಕ್ಕಡಿ ಯನ್ನು ಕೈಯಲ್ಲಿ ಹಿಡಿದುಕೊಂಡು ಕುಳಿತಿದ್ದ ದೇವನಿಗೆ ಈ ಮಾತು ರುಚಿಸ ಬಲ್ಲದೆ ? ಅನೇಕ ಪ್ರಾಣಿಗಳ ಮುಖಗಳೊಳಗಿಂದ ಹೊರಬೀಳುವ ಶಾಪಗಳು ವಜ್ರಾಘಾತದಂತೆ ಅವ್ಯಾಹತವಾಗಿ ಈ ನಮ್ಮ ವಂಶದವರ ತಲೆಗಳ ಮೇಲೆ ಬೀಳುತ್ತಿರಲು, ಈ ವಂಶದಲ್ಲಿ ಹುಟ್ಟಿದವರಿಗೆ ಸುಖಶಾಂತಿಗಳು ಎತ್ತಿಂದ ? ಈ ವಂಶದಲ್ಲಿ ಹುಟ್ಟಿದವರೆಲ್ಲರೂ ಹುಚ್ಚರಾದರೆ ಅದರಲ್ಲಿ ವಿಪರೀತವಾದದ್ದಾ ದರೂ ಯಾವದು ? ಹಾಗೂ ಈ ವಂಶವು ನಷ್ಟಾಂಶವಾದರೂ ಯಾಕೆ ಆಗಲಿಕ್ಕಿಲ್ಲ ? ಈ ವಂಶಕ್ಕೆ ಮೂಲಾಧಾರರಾದ ಪೂರ್ವಜರ ಕೈಯಿಂದ ಇಂಥ ಭಯಂಕರವಾದ ಪಾತಕಗಳು ಸಂಭವಿಸಿರಲು, ಅವರ ವಂಶಕ್ಕೆ ಹೊಂದಿದ ಸ್ತ್ರೀಯರ ಉದರದಲ್ಲಿದ್ದ ಗರ್ಭಗಳು ಕೂಡ ಪತನವಾಗಲೇಬೇಕು. ಒಂದು ಕಾಲಕ್ಕೆ, ಅವು ಪತನವಾಗದಿದ್ದರೂ ಪಾತಕಗಳ ಕೆಂಡಗಳಿಂದ ಅವು ಗರ್ಭಾಶಯದಲ್ಲಿಯೇ ಸುಟ್ಟು ಭಸ್ಮವಾಗಿಹೋಗಬೇಕು.

ತಾಯಿಯು : ಭೋಲಾನಾಥ, ನಿಲ್ಲು ನಿಲ್ಲು, ಹಾಗೆ ಮಾತಾಡಬೇಡ. ಆವೇಶದ ಭರದಲ್ಲಿ ನಿನ್ನ ಬಾಯಿಯಿಂದ ಹೊರಬೀಳುವ ಶಾಪವಚನಗಳು ಯಾರಿಗೆ ಅಪಾಯವನ್ನುಂಟುಮಾಡುವವೆಂಬ ಕಲ್ಪನೆಯು ನಿನಗೆ ಬಂದಂತೆ ತೋರುವದಿಲ್ಲ ನೀನು ನಿನ್ನ ತಾಯಿಯನ್ನು ಈ ರೀತಿಯಾಗಿ ಶಾಪಿಸಬೇಡ. ನೀನು ನಿನ್ನ ತಮ್ಮನನ್ನು ಕಠೋರವಾದ ಶಾಪದಿಂದ ಸುಟ್ಟು ಬೂದಿ ಮಾಡಬೇಡ. ನಾನು ಇಂದಿನ ವರೆಗೂ ಈ ಸಂಗತಿಯನ್ನು ಗುಪ್ತವಾಗಿಟ್ಟಿ ದ್ದೆನು. ಆದರೆ ಪುತ್ರಪ್ರೇಮವು ಬಹಳ ವಿಲಕ್ಷಣವಾದದ್ದು. ಅದಕ್ಕಾಗಿ ನಾನು ಈಗ್ಗೆ ಮಾತಾಡದೆ ಇರಲಾರೆನು. ಭೋಲಾನಾಥನೇ, ನೀನು ಹೀಗೆ ಬೆದರುವಿಯಾಕೆ ? ಹಾಗೂ ಈ ಸಂಗತಿಯನ್ನು ಕೇಳಿ ನಿನ್ನ ಹಣೆ ಯಾಕೆ ಗಂಟಿಕ್ಕಿರುವದು ? ನನಗೆ ಪುತ್ರೋತ್ಸವವಾದರೆ, ನಿನಗೆ ಈ ಮನೆಬಿಟ್ಟು ಹೊರಬೀಳಬೇಕಾಗುವದೆಂದು, ಇಲ್ಲವೆ, ನಿನ್ನ ಅರ್ಧ ಐಶ್ವರ್ಯಕ್ಕೆ ಅವನು ಪಾಲುಗಾರನಾಗುವನೆಂದು ನಿನಗೆ ಈ ಸಂಗತಿಯನ್ನು ಕೇಳಿ ಇಷ್ಟು ವಿಷಾದ ಎನಿಸಿತೆ ?

ಭೋಲಾನಾಥ : ಛೆ ಛೆ ! ಈ ವಿಚಾರವು ಕೂಡ ನನ್ನನ್ನು ಮುಟ್ಟಿಲ್ಲ ವೆಂದು ನಿನ್ನ ಪಾದಸಾಕ್ಷಿಯಾಗಿ ಹೇಳುತ್ತೇನೆ. ಬಂಗಾರದ ನಾಣ್ಯಗಳಿಂದ

ತುಂಬಿರುವ ನೂರಾರು ಹರಿವಾಣಗಳೊಳಗಿನ, ಇಲ್ಲವೆ, ಈ ಮನೆಯನ್ನು ವ್ಯಾಪಿಸಿಕೊಂಡಿರುವ ಐಶ್ವರ್ಯದೊಳಗಿನ ಒಂದು ಗುಂಜಿ ತೂಕವಾದ ಬಂಗಾರವನ್ನು ಕೂಡ ನಾನು ಅಪೇಕ್ಷಿಸುವದಿಲ್ಲ. ನನ್ನನ್ನು ನಿಮ್ಮ ದತ್ತಕ ಪುತ್ರನನ್ನಾಗಿ ಮಾಡಿದ ಧರ್ಮಬಂಧನಗಳೂ, ಧರ್ಮಸಂಸ್ಕಾರಗಳೂ ಉಲ್ಲಂಘನೀಯುವಾದವೆಂದು ಶಿಷ್ಟಸಮ್ಮತವಾದರೆ, ನಿಮ್ಮ ವಂಶದ ಕೂಡ ಸಂಲಗ್ನವಾಗಿರುವ ನನ್ನ ಸಂಬಂಧವನ್ನು ಕಡಿದುಕೊಳ್ಳುವದಕ್ಕೆ ನಾನು ಈಗಲೇ ಸಿದ್ಧನಿದ್ದೇನೆ. ಭಿಕ್ಷಾವೃತ್ತಿಯನ್ನವಲಂಬಿಸಿ ನಾನು ನನ್ನ ಹೊಟ್ಟೆಯನ್ನು ತುಂಬಿಕೊಳ್ಳುವೆನು. ಈ ಐಶ್ವರ್ಯವನ್ನೆಲ್ಲ ನಿನಗಾಗುವ ಮಗನು ತನ್ನ ಇಚ್ಛಾನುವರ್ತಿಯಾಗಿ ಉಪಭೋಗಿಸಲಿ.

ತಾಯಿಯು : ಬೇಡ, ಬೇಡ ! ನನ್ನ ಕಂದಮ್ಮನ ಮೇಲೆ ನೀನು ಈ ರೀತಿಯಾಗಿ ನಿಷ್ಠುರನಾಗಬೇಡ. ನಿನಗೆ ಕೂಡ ಸಹನಮಾಡಲು ಅಶಕ್ಯವಾಗಿರುವ ಭಾರವನ್ನು ಇನ್ನೂ ಭೂಸ್ಪರ್ಶವನ್ನಾದರೂ ಮಾಡದೇ ಇದ್ದ ಕೋಮಲವಾದ ಅರ್ಭಕನ ಮೇಲೆ ಹೇರಿ, ನೀನು ನಿನ್ನ ಅಂಗವನ್ನು ತೆಗೆದುಕೊಳ್ಳುವದು ಉಚಿತವಾದದ್ದಲ್ಲ. ಐಶ್ವರ್ಯದ ಆಶೆಗಾಗಿ ನೀನು ಪರಪುರುಷನನ್ನು ಕೂಡ ನಿನ್ನ ತಂದೆಯೆಂದು ಒಪ್ಪಿಕೊಂಡಿ; ಆದರೆ ಆ ಐಶ್ವರ್ಯದ ಮೇಲೆ ಭೂತಪಿಶಾಚಾದಿಗಳು ಕುಳಿತಿರುವವೆಂದು ನಿನಗೆ ತಿಳಿದ ಕೂಡಲೆ, ನನ್ನ ಹಸುಗೂಸನ್ನು ಮುಂದೆಮಾಡಲು ನೀನು ಉದ್ಯುಕ್ತನಾಗಿರುವಿ. ಇದು ನಿನ್ನ ಮಾತೃಭಕ್ತಿಯೋ, ಏನು ಬಂಧುಪ್ರೇಮವೋ ?

ಭೋಲಾನಾಥ : ಹಾಗಾದರೆ ನಾನು ಏನು ಮಾಡಬೇಕೆಂದು ನಿನ್ನ ಅಭಿಪ್ರಾಯುವಿರುವದು ?

ತಾಯಿಯು : ನಮ್ಮ ಐಶ್ವರ್ಯದ ಮೇಲೆ ಕುಳಿತುಕೊಂಡಿರುವ ಪಿಶಾಚಾದಿಗಳಿಂದ ಉದ್ಭವಿಸುವ ಭಾವೀ ಸಂಕಟಗಳು ನನ್ನ ಕೂಸಿಗೆ ತಗಲದಂತೆ ಯಾವದಾದರೊಂದು ಉಪಾಯವನ್ನು ಯೋಚಿಸು.

ಭೋಲಾನಾಥ : ಯಾಕಾಗಲೊಲ್ಲದು. ಪಿಶಾಚಾದಿಗಳಿಂದ ಉದ್ಭವಿಸುವ ಯಾತನೆಗಳನ್ನು ನಾನು ಸಹಿಸತಕ್ಕದ್ದೋ ಅಥವಾ ಜನ್ಮವನ್ನು ತಾಳುವ ನನ್ನ ತಮ್ಮನು ಸಹಿಸತಕ್ಕದ್ದೋ ಎಂಬದೇ ಮುಖ್ಯವಾದ ಪ್ರಶ್ನವು. ನನ್ನ ದುಃಖವು ನಿನ್ನ ಅರ್ಭಕನ ಸುಖಕ್ಕೆ ಕಾರಣವಾಗುತ್ತಿದ್ದರೆ, ಪರೋಪ

ಕಾರದ ಸಲುವಾಗಿ ನಾನು ಯಾವದೇ ಸಂಕಟವನ್ನು ಸಹಿಸಲು ಸಿದ್ಧನಿದ್ದೇನೆ.

ತಾಯಿಯು : ನೀನು ಒಳ್ಳೇ ಮಾತುಗಳನ್ನಾಡಿದಿ. ನನಗೆ ಮಗನು ಹುಟ್ಟಿದರೆ, ಅವನಿಗೆ ಈ ಭಯಂಕರವಾದ ಯಾತನೆಗಳನ್ನು ಅನುಭೋಗಿಸುವ ಪ್ರಸಂಗವು ಎಂದೂ ಬರಬಾರದೆಂಬದರ ಸಲುವಾಗಿ, ಈ ಆನುವಂಶಿಕ ದುಃಖದ ಭಾರವನ್ನು ನೀನು ನಿನ್ನ ತಲೆಯ ಮೇಲೆ ಹೊತ್ತು, ಅವನು ಈ ಕುಲಕ್ಕೆ ಹೊಂದಿದವನೆಂದು ಯಾವ ಪಿಶಾಚವೂ ಅರಿಯದಂತೆ ಅವನನ್ನು ಎಲ್ಲಾದರೂ ಒಂದು ಏಕಾಂತಸ್ಥಲದಲ್ಲಿ ಸುರಕ್ಷಿತವಾಗಿ ಇಡು. ನೀನು ಗೋಣು ಹಾಕುವದರಿಂದ ನನ್ನ ಸಮಾಧಾನವಾಗದು. ನನ್ನ ಶಬ್ದವನ್ನು ನಡೆಸುವೆನೆಂದು ನನಗೆ ವಚನವನ್ನು ಕೊಡು.

ಭೋಲಾನಾಥ : ತಾಯಿಯೆ, ಧನಲೋಭದಿಂದ ಪ್ರೇರಿತನಾಗಿ ತಮ್ಮನನ್ನು ಮುಳುಗಿಸುವ ಉದ್ದೇಶದಿಂದ ಅವನನ್ನು ಏಕಾಂತವಾದ ದೊಂದು ಪ್ರದೇಶದಲ್ಲಿಟ್ಟು ತಾನು ತನ್ನ ಮಾರ್ಗವನ್ನು ನಿಷ್ಕಂಟಕವುಳ್ಳದ್ದಾಗಿ ಮಾಡಿದನೆಂದು ಜನರು ನನ್ನನ್ನು ದೂಷಿಸುವರು; ಆದರೂ ನಿನ್ನ ಸಲುವಾಗಿ ಹಾಗೂ ಪರೋಪಕಾರದ ಸಲುವಾಗಿ ನಿನ್ನ ಮುಂದೆ ಮೊಣಕಾಲುಗಳನ್ನೂರಿ ನಿನ್ನ ಪಾದಸಾಕ್ಷಿಯಾಗಿ ಹೇಳುವದೇನಂದರೆ, ನಿನ್ನ ಇಚ್ಛಾನುಸಾರವಾಗಿ ನಾನು ಸುವ್ಯವಸ್ಥೆಯನ್ನು ಮಾಡುವೆನು. ಹುಣ್ಣಿವೆ ಅಮಾಸೆಗಳ ಮಧ್ಯ ರಾತ್ರಿಗಳಲ್ಲಿ ಭೂತಗಳ ಕೂಡ ಯುದ್ಧವನ್ನು ಮಾಡುವ ಹಾಗೂ ಹುಚ್ಚು ಹಿಡಿದು ಬಡಬಡಿಸುವ ಯಾತನೆಗಳಿಂದ ನಿನ್ನ ಮಗನನ್ನು ಮುಕ್ತಮಾಡುವೆನು.

ತಾಯಿಯು : ದೇವರು ನಿನಗೆ ಕಲ್ಯಾಣವನ್ನೀಯಲಿ !

ನನ್ನ ಗಂಡನೂ, ಅತ್ತೆಯೂ ಏಕಾಂತಸ್ಥಳದಲ್ಲಿ ಕುಳಿತುಕೊಂಡು ನಡೆಸಿರುವ ಆಲೋಚನೆಯಾದರೂ ಯಾವದು ? ಇವರಿಗೆ ಮನಲಜ್ಜೆಯಿಲ್ಲ ದಿದ್ದರೂ ಜನಲಜ್ಜೆಯಾದರೂ ಇರಬಾರದೆ ? ಹೀಗೆ ತನ್ನಷ್ಟಕ್ಕೆ ತಾನೇ ಮಾತಾಡುತ್ತ ಮತ್ಸರದಿಂದ ಕಲುಷಿತಳಾದ ಗಿರಿಜಾಬಾಯಿಯು, ತಾಯಿಯೂ ಮಗನೂ ಏಕಾಂತದಲ್ಲಿ ಮಾತಾಡುತ್ತ ಕುಳಿತಿರುವ ಕೋಣೆಯ ಬಾಗಿಲ ಸಂದಿಯಲ್ಲಿ ನಿಂತು ನೋಡಹತ್ತಿದ್ದಳು. ಭೋಲಾನಾಥನು ತನ್ನ ತಾಯಿಯ ಮುಂದೆ ಮೊಣಕಾಲುಗಳನ್ನೂರಿಕೊಂಡು ಅವಳ ಪ್ರಾರ್ಥನೆಯನ್ನು ಮಾಡುವ ಸ್ಥಿತಿಯಲ್ಲಿ ಗಿರಿಜಾಬಾಯಿಯ ದೃಷ್ಟಿಗೆ ಬಿದ್ದನು. ಆಗಂತೂ ಅವಳ

ಮತ್ಸರಾಗ್ನಿಯು ಅಮರ್ಯಾದಿತವಾಗಿ ಪ್ರದೀಪಿಸಿ ಅವಳು ಹೆಚ್ಚಿಗೆ ಸಂಶಯಗ್ರಸ್ತಳಾದಳು. ಇಷ್ಟರಲ್ಲಿ ಭೋಲಾನಾಥನು ಬಾಗಿಲವನ್ನು ತೆರೆದು ಹೊರಗೆ ಬಂದನು. ಬಾಗಿಲದ ಹತ್ತರ ನಿಂತುಕೊಂಡಿದ್ದ ತನ್ನ ಹೆಂಡತಿಯನ್ನು ಕಂಡು ಅವನಿಗೆ ಆಶ್ಚರ್ಯವೆನಿಸಿತು. ಆದರೆ, ಅವಳ ಬೆನ್ನುಹಿಂದೆ ತುಸು ಅಂತರದ ಮೇಲೆ ಅವನಿಗೆ ಸ್ವಪ್ನದಲ್ಲಿ ದೃಗ್ಗೋಚರವಾಗಿದ್ದ ಪುರುಷನ ಅಸ್ಪಷ್ಟವಾದ ಆಕೃತಿಯನ್ನು ಅವನು ನೋಡಿದ ಕೂಡಲೆ, ಅವನಿಗಾದ ವಿಸ್ಮಯದ ಕಲ್ಪನೆಯನ್ನು ಮಾಡುವದು ಯಾರಿಗಾದರೂ ಅಶಕ್ಯವಾದದ್ದು. ಈ ಆಕೃತಿಯು ಆ ಕರ್ಮಾಧಿಕಾರಿಯದು. "ಇವನ್ಯಾರು? ನಾನು ಹೋದಲ್ಲಿ ಬಂದಲ್ಲಿ ಇವನು ನನ್ನ ಬೆನ್ನುಬಿಡುವದಿಲ್ಲ. ಇವನ ಉದ್ದೇಶವಾದರೂ ಏನು? ಸ್ವಪ್ನದಲ್ಲಿ ತಾನು ಕರ್ಮಾಧಿಕಾರಿಯೆಂದು ನನಗೆ ಹೇಳಿದನು; ಇದರ ಅರ್ಥವಾದರೂ ಏನು?" ಹೀಗೆ ಅನೇಕ ಪ್ರಶ್ನೆಗಳು ಅವನ ಮನಸ್ಸಿನಲ್ಲಿ ಉದ್ಭವಿಸಿದವು. ಆದರೆ, ಅವನ ದತ್ತಕ ತಂದೆಯ ಪ್ರಕೃತಿಯು ತೀರ ಅಸ್ವಸ್ಥವಾದ್ದರಿಂದ ಹೆಚ್ಚಿಗೆ ವಿಚಾರಗಳನ್ನು ಮಾಡಲು ಅವನಿಗೆ ಅವಕಾಶವಿದ್ದಿಲ್ಲ

ಭೋಲಾನಾಥನ ತಂದೆಯು ಮರಣಹೊಂದಿದ ಬಳಿಕ ಅವನ ಉತ್ತರ ಕ್ರಿಯಾದಿ ವಿಧಿಗಳು ಯಥಾಶಾಸ್ತ್ರವಾಗಿ ಮಾಡಲ್ಪಟ್ಟವು. ಅವನ ಅಸ್ಥಿಗಳನ್ನು ಯಾವದಾದರೊಂದು ತೀರ್ಥದಲ್ಲಿ ಒಗೆಯುವ ಕೆಲಸವಷ್ಟೇ ಉಳಿಯಿತು. ಇದರ ಹೊರತಾಗಿ ಉಳಿದ ಎಲ್ಲ ಕೆಲಸಗಳು ತೀರಿಹೋಗಿ ಮನೆಯಲ್ಲಿ ಹೇರಳವಾಗಿದ್ದ ದ್ರವ್ಯಕ್ಕೆ ಇವನೇ ಯಜಮಾನನಾದನು. ಆದರೆ, ಆದರ ಕೂಡ ಇವನಿಗೆ ಸುಖಸಮಾಧಾನಗಳು ಮಾತ್ರ ದೊರೆಯಲಿಲ್ಲ. ಮಧ್ಯಾಹ್ನರಾತ್ರಿಯಾಯಿತೆಂದರೆ, ಅವನ ಮೈತುಂಬ ಮುಳ್ಳುಬರುತ್ತಿದ್ದವು. ಗತಿಸಿಹೋದ ಸಂಗತಿಗಳ ಸ್ಮರಣವಾಗಿ ಬೆವರಿನಿಂದ ಮೈಯು ತೊಯ್ಯುತ್ತಿತ್ತು. ತನ್ನ ಸುತ್ತಲಿನ ಜನರೆಲ್ಲ ಗಾಢವಾದ ಸುಖನಿದ್ರೆಯಲ್ಲಿದ್ದದ್ದನ್ನು ನೋಡಿ ಇವನಿಗೆ ಅವರ ವಿಷಯವಾಗಿ ಮತ್ಸರವೆನಿಸುತ್ತಿತ್ತು. 'ಇವರು ಎಂಥ ಭಾಗ್ಯಶಾಲಿಗಳು! ನಾನು ಧನಿಕನಾಗಿದ್ದರೂ ಭಾಗ್ಯಹೀನನೇ.' ಎಂದು ಅವನಿಗೆ ಅನಿಸುತ್ತಿತ್ತು. ಒಂದು ದಿವಸ ಬಿಕ್ಕೆಬೇಡುವವನೊಬ್ಬ ಮಾರ್ಗ ಹಿಡಿದು ಹೋಗುತ್ತಿದ್ದನು. ಇವನು ಭೋಲಾನಾಥನನ್ನು ನೋಡಿ, ಅವನ

ವೈಭವದ ವಿಷಯವಾಗಿ ಅವನನ್ನು ಸ್ತುತಿಸಹತ್ತಿದನು. ಅದನ್ನು ಕೇಳಿ ಭೋಲಾನಾಥನ ಕಣ್ಣುಗಳೊಳಗಿಂದ ಅಶ್ರುಧಾರೆಗಳು ನಡೆದವು. ಅವನು ತನ್ನ ಮನಸಿನಲ್ಲಿ ಅಂದದ್ದು: ಈ ಬಿಕ್ಕೆಬೇಡುವವನ ಭಾಗ್ಯವನ್ನು ಎಷ್ಟೆಂತು ಬಣ್ಣಿಸಲಿ? ಪಾಪ. ಈ ಬಡವನ ಹತ್ತರ ಬಂಗಾರದ ಒಂದಾದರೂ ಮೋಹರ ವಿಲಲಿಕ್ಕಿಲ್ಲೆಂಬ ಮಾತು ನಿಜವಾಗಿದ್ದರೂ ಇವನಿಗೆ ಪಿಶಾಚಿಗಳ ಕೂಡ ಕದನವನ್ನು ಮಾಡುವ ಪ್ರಸಂಗವು ಎಂದೂ ಒದಗುತ್ತಿರಲಿಕ್ಕಿಲ್ಲ. ಇವನ ಭಿಕ್ಷಾಪಾತ್ರೆಯಲ್ಲಿ ತುಂಬಿದ ಸುಖವು ನನ್ನ ಬೆಳ್ಳಿಬಂಗಾರಗಳ ಪಾತ್ರೆಯಲ್ಲಿಲ್ಲ. ಇವನ ಮೈಮೇಲಿರುವ ಹರಕ ಬಟ್ಟೆಗಳಲ್ಲಿ ಸಂಚಿತವಾಗಿದ್ದ ಸಮಾಧಾನವು, ಬೆಲೆಬಾಳುವ ನನ್ನ ವಸ್ತ್ರಗಳಲ್ಲಿಲ್ಲ. ಶ್ರೀಮಂತಿಕೆಯಕಿಂತ ಬಡತನವು ಬಹು ಲೇಸು. ಆದರೆ, ಹತಭಾಗ್ಯನಾದ ನನಗೆ ಅದು ದೊರೆಯುವದಾದರೂ ಹೇಗೆ? ಈ ಸಂಪತ್ತಿನ ಸಂಕಟಗಳಿಂದ ನನ್ನನ್ನು ಯಾರು ಮುಕ್ತನಾಡುವರು ? ಈ ಪ್ರಕಾರದ ವಿಚಾರತರಂಗಗಳು ಅನೇಕಸಾರೆ ಅವನ ಮನಸ್ಸಿನಲ್ಲಿ ಬರುತ್ತಿದ್ದವು.

* * * *

ಗಿರಿಜಾಬಾಯಿಯ ಸಂಶಯವು ದಿನದಿನಕ್ಕೆ ಹೆಚ್ಚಾಗಹತ್ತಿತು. ಭೋಲಾನಾಥನ ತಾಯಿಯು ಗರ್ಭಿಣಿಯಾಗಿರುವದನ್ನು ಆವಳು ತರ್ಕಿಸಿಸಿದಳು. ತನ್ನ ಮಗನಿಗೆ ಕೌಟುಂಬಿಕ-ಕ್ಲೇಶಗಳಾಗಬಾರದೆಂದು ಭೋಲಾನಾಥನ ತಾಯಿಯು ಗರ್ಭದ ಚಿನ್ಹಗಳನ್ನು ತೋರಗೊಡುತ್ತಿದ್ದಿಲ್ಲ. ಈ ಮುಚ್ಚುಮರೆಯನ್ನು ಕಂಡು, ತನ್ನ ಮನೋಗತವಾದ ಸಂಶಯಕ್ಕೆ ಹೆಚ್ಚಿನ ಪ್ರತ್ಯಂತರದ ಅವಶ್ಯಕತೆಯಿಲ್ಲೆಂದು ಗಿರಿಜಾಬಾಯಿಯು ಭಾವಿಸಿದಳು. ಆವಳು ತಾಯಿಮಕ್ಕಳ ಆಚರಣೆಗಳನ್ನು ವಿಶೇಷವಾಗಿ ಲಕ್ಷಗೊಟ್ಟು ನಿರೀಕ್ಷಿಸ ಹತ್ತಿದಳು. ಕೆಲವು ತಿಂಗಳಾದ ಬಳಿಕ ಪತಿನಿಧನದಿಂದ ವ್ಯಾಕುಲಳಾದ ಗಿರಿಜಾಬಾಯಿಯ ಅತ್ತೆಯು ತನ್ನ ತವರಮನೆಗೆ ಹೋದಳು. ಭೋಲಾನಾಥನಾದರೂ ಚಿಂತಾಗ್ರಸ್ತನಾದ್ದರಿಂದ ತಾರುಣ್ಯದಲ್ಲಿ ಕೂಡ ಆವನಿಗೆ ಸ್ತ್ರೀಸೌಖ್ಯವು ಸುಖಕರವಾಗಿ ಪರಿಣಮಿಸಲಿಲ್ಲ. ಭೋಲಾನಾಥನ ಪರಿಸ್ಥಿತಿಯು ಕಲ್ಪನೆಯು ಗಿರಿಜಾಬಾಯಿಗೆ ಇಲ್ಲದ್ದರಿಂದ ಅನ್ಯ ಸ್ತ್ರೀಪ್ರೇಮವೇ ತನ್ನ ವಿಷಯವಾಗಿ ತನ್ನ ಗಂಡನ ಉದಾಸೀನತೆಗೆ ಕಾರಣವೆಂದು ಅವಳು ತಿಳಿಯು

ತ್ತಿದ್ದಳು. ಇಂಥ ಗೃಹಸ್ಥಿತಿಯ ಮೂಲಕವಾಗಿ ಅವನು ಬೇಸತ್ತು ಕೆಲವು ದಿವಸಗಳ ವರೆಗೆ ಏಕಾಂತವಾದ ಸ್ಥಳದಲ್ಲಿ ವಾಸ ಮಾಡಿಕೊಂಡಿರಬೇಕೆಂದು ಯೋಚಿಸಿದನು. ತನ್ನ ತಂದೆಯ ಅಸ್ಥಿಗಳನ್ನು ಯಾವದಾದರೊಂದು ತೀರ್ಥದಲ್ಲಿ ಚೆಲ್ಲುವದರ ಸಲುವಾಗಿ ಅವನಿಗೆ ಒಮ್ಮಿಲ್ಲೊಮ್ಮೆ ಹೋಗಲೇ ಬೇಕಾಗಿತ್ತು. ಅಸ್ಥಿಗಳನ್ನು ತೆಗೆದುಕೊಂಡು ತಾನು ಪೂರ್ವದಲ್ಲಿ ಬ್ರಹ್ಮ ಚರ್ಯಾವಸ್ಥೆಯಲ್ಲಿರುವಾಗ ವಾಸ ಮಾಡಿಕೊಂಡಿದ್ದ ಕ್ಷೇತ್ರಕ್ಕೆ ಹೊರಟನು. ಆ ಕ್ಷೇತ್ರವು ಬಹಳ ಪವಿತ್ರವಾಗಿಯೂ, ಸಮಾಧಾನಕಾರಕವಾಗಿಯೂ ಇದ್ದ ದರಿಂದ, ಅಸ್ಥಿವಿಸರ್ಜನದ ವಿಧಿಯು ಮುಗಿದ ಬಳಿಕ ಮನಸ್ಸಿಗೆ ಸ್ವಲ್ಪ ವಿರಾಮವುಂಟಾಗಬೇಕೆಂದು ಆ ಕ್ಷೇತ್ರದಲ್ಲಿಯೇ ಅವನು ಅನೇಕ ದಿವಸಗಳ ವರೆಗೆ ಉಳಿದನು. ಬ್ರಹ್ಮಚರ್ಯಾಶ್ರಮದಲ್ಲಿ ವಾಸ ಮಾಡಿಕೊಂಡಿರುತ್ತಿದ್ದ ಮಠದಲ್ಲಿಯೇ ಈಗಲೂ ಅವನು ಇರಹತ್ತಿದನು. ಸ್ಥಲವನ್ನು ನೋಡಿ ಅವ ನಿಗೆ ಗತಕಾಲೀನ ಸುಖಸಮಾಧಾನಗಳ ಸ್ಮರಣವಾಗಿ ಅವನ ನೇತ್ರಗಳು ನೀರಿ ನಿಂದ ತುಂಬಿಕೊಂಡವು. ಮಠದಲ್ಲಿಯ ಒಂದು ಬಾಗಿಲಮಾಡದಲ್ಲಿ, ಪುರೋಹಿತನಕೂಡ ಈ ಸ್ಥಳವನ್ನು ಬಿಟ್ಟು ಹೋಗುವಾಗ ಅವನು ಇಟ್ಟಿದ್ದ ಅವನ ಪ್ರಥಮಾಶ್ರಮದ ಮಧುಕರಿಯ ಜೋಳಿಗೆಯೂ, ಕೌಪೀನವೂ ಅವ ನಿಗೆ ದೊರೆದವು. ಅವನ ಪೂರ್ವವೃತ್ತವು ಅವನ ನೆನಪಿಗೆ ಸ್ಪಷ್ಟವಾಗಿ ಬರು ವದಕ್ಕೆ ಇವು ವಿಶೇಷವಾಗಿ ಕಾರಣಗಳಾದವು ನಾನು ಇಲ್ಲಿಯೇ ಇರುತ್ತಿ ದ್ದೆನು, ಇಲ್ಲಿಯೇ ಕುಳಿತುಕೊಳ್ಳುತ್ತಿದ್ದೆನು, ಎದುರಿನಲ್ಲಿ ಹರಿಯುವ ಇದೇ ಪ್ರವಾಹದಲ್ಲಿಯೇ ನಾನು ನಿತ್ಯದಲ್ಲಿಯೂ ಸ್ನಾನವನ್ನು ಮಾಡುತ್ತಿ ದ್ದೆನು, ಇದೇ ವೃಕ್ಷದ ಕೆಳಗೆ ಕುಳಿತುಕೊಂಡು ಸಂಧ್ಯಾವಂದನೆಯನ್ನೂ ವೇದಾಧ್ಯಯನವನ್ನೂ ಮಾಡುತ್ತಿದ್ದೆನು. ಆಗ್ಗೆ ನಾನು ಎಷ್ಟು ಸುಖಿಯಾ ಗಿದ್ದೆನು? ಚಿಕ್ಕಂದಿನಲ್ಲಿಯ ನನ್ನ ಸುಖವನ್ನು ನನಗೆ ಯಾರು ತಂದು ಕೊಡುವರು? ಇಲ್ಲಿ ನಾನು ಸುಖಿಯಾಗಿದ್ದೆನು; ಆದರೆ ನನ್ನ ದುರ್ದೈವವು ಬಂದೊದಗಿದ್ದರಿಂದ, ಆ ಉಪಾಧ್ಯಾಯನ ಮಾತಿಗೆ ಮರುಳಾಗಿ ಅವನ ಬೆನ್ನುಹತ್ತಿ ಹೋದೆನು. ಈ ಶ್ರೀಮಂತಿಕೆಯ ಪ್ರಸಂಗವು ನನ್ನಮೇಲೆ ಬಂದೊದಗುವದೆಂದು ನನಗೆ ಮೊದಲೇ ವಿದಿತವಾಗಿತ್ತು.— ಇದೇ ಆ ಸ್ಥಲವು; ಇಲ್ಲಿಯೇ ನಾನು ಮಲಗಿಕೊಂಡಿದ್ದೆನು. ಇಲ್ಲಿಯೇ ಆ ಕರ್ಮಾಧಿ

ಕಾರಿಯ ಆಕೃತಿಯು ನನ್ನ ಸ್ವಪ್ನದಲ್ಲಿ ಬಂದು ಈ ಶ್ರೀಮಂತಿಕೆಯನ್ನು ಒಪ್ಪಿಕೊಳ್ಳೆಂದು ನನಗೆ ಆಗ್ರಹ ಮಾಡುತ್ತಿತ್ತು. ಈ ವಿಚಾರಗಳು ಅವನ ಮನಸಿನಲ್ಲಿ ನಡೆದಿರುವಷ್ಟರಲ್ಲಿಯೇ ಆ ಕರ್ಮಾಧಿಕಾರಿಯ ಆಕೃತಿಯು ಅವನ ಮುಂದೆ ಮೂರ್ತಿಮಂತವಾಗಿ ನಿಂತಿತು. ಇದನ್ನು ನೋಡಿದಕೂಡಲೆ ಅವನು ಮೊಟ್ಟಮೊದಲು ಭಯಗ್ರಸ್ತನೇ ಆದನು. ಆದರೆ, ಹಿಂದಿನಿಂದ ಅವನ ಮನಸ್ಸಿನಲ್ಲಿ ಒಂದು ಆಶೆಯು ಹುಟ್ಟಿ ಅವನು ಅವನಿಗೆ ಅಂದದ್ದು: "ಎಲೈ, ಕರ್ಮಚಂಡಾಲನಾದ ಕರ್ಮಾಧಿಕಾರಿಯೇ! ನೀನು ಈ ಸ್ಥಳದಲ್ಲಿ ನನಗೆ ಮೊಟ್ಟಮೊದಲು ಶ್ರೀಮಂತಿಕೆಯ ಸ್ವಪ್ನವನ್ನು ತೋರಿಸಿದಿ; ಆ ಶ್ರೀಮಂತಿಕೆಯು ನನಗೆ ಈಗ ಸಾಕಾಗಿದೆ. ಈಗಾದರೂ ನಿನಗೆ ನನ್ನ ವಿಷಯವಾಗಿ ದಯೆ ಹುಟ್ಟಲಿ. ನಾನು ಮೊದಲಿನಂತೆ ಮರಳಿ ಇಲ್ಲೇ ಮಲಗಿಕೊಳ್ಳುವೆನು; ನೀನು ನನ್ನನ್ನು ಮೊದಲಿನಂತೆ ಬಡವನನ್ನಾಗಿಯೂ ಬ್ರಹ್ಮಚಾರಿಯನ್ನಾಗಿಯೂ ಮಾಡು. — ಆದರೆ ನಾನು ಇಲ್ಲಿ ಮಲಗಿದರೂ ಸ್ವಪ್ನ ಬೀಳುವಂಥ ನಿದ್ರೆಯು ನನಗೆ ಎಲ್ಲಿಂದ ಬರುವದು? ಯದಾ ಕದಾಚಿತ್ ನನಗೆ ನಿದ್ರೆಯು ಹತ್ತಿದರೆ, ಆ ನಿದ್ರೆಯಲ್ಲಿ ನೀನು ನನ್ನನ್ನು ಬಡವನನ್ನಾಗಿ ಮಾಡುವಿಯಾ?" ಇದಕ್ಕೆ ಇಲ್ಲ ಇಲ್ಲವೆಂದು ಗೋಣುಹಾಕುತ್ತ ಆ ಪುರುಷಾಕೃತಿಯು ವಾತಾವರಣದಲ್ಲಿ ಅಸ್ಪಷ್ಟವಾಗುತ್ತಾಗುತ್ತಾ ಅದೃಶ್ಯವಾಯಿತು. ಈ ಸಂಕಟಗಳಿಂದ ವಿಮೋಚನವಾಗಲು ಮರಣದ ಹೊರತು ಅನ್ಯ ಉಪಾಯಗಳು ಭೋಲಾನಾಥನಿಗೆ ತೋಚಲಿಲ್ಲ. ಇರಲಿ. ಈ ಸ್ವಪ್ನಗತ ಪುರುಷನು ತನ್ನನ್ನು ಬಡವನನ್ನಾಗಿ ಮಾಡುವದಕ್ಕೆ ಒಪ್ಪದಿದ್ದರೂ ತಾನೇ ತನ್ನನ್ನು ಬಡವನನ್ನಾಗಿ ಮಾಡಿಕೊಳ್ಳುವದಕ್ಕಾಗಿ ಭೋಲಾನಾಥನು ತನ್ನ ಮೈಮೇಲಿನ ಬೆಲೆ ಬಾಳುವ ವಸ್ತ್ರಾಭರಣಗಳನ್ನು ಬಾಗಿಲ ಹಾಡದಲ್ಲಿಟ್ಟು, ತನ್ನ ಮೊದಲಿನ ಬಡತನದ ಚಿಂದಿಗಳನ್ನು ತನ್ನ ಮೈಮೇಲೆ ಹಾಕಿಕೊಂಡನು. ಪ್ರಾತಃಕಾಲದಲ್ಲಿ ಗಂಗೆಯಲ್ಲಿ ಸ್ನಾನ ಮಾಡಿ, ಸಂಧ್ಯಾವಂದನ ವೇದಾಧ್ಯಯನಗಳನ್ನು ತೀರಿಸಿಕೊಂಡು ಮಧ್ಯಾಹ್ನ ಕಾಲದಲ್ಲಿ ಜೋಳಿಗೆಯನ್ನು ತೆಗೆದುಕೊಂಡು ಮಧುಕರ ವೃತ್ತಿಯನ್ನಾಚರಿಸಿ ಕಾಲ ಕಳೆಯಹತ್ತಿದನು. ಈ ಸ್ಥಿತಿಯಲ್ಲಿ ಅವನ ದಿವಸಗಳು ಸರ್ವಸಾಧಾರಣವಾಗಿ ಸುಖದಲ್ಲಿ ಹೋಗಹತ್ತಿದವು. ಇಷ್ಟರಲ್ಲಿ ಅವನ ತಾಯಿಯು ತನ್ನ ತವರಮನೆಯಲ್ಲಿ ಪ್ರಸೂತ

ಳಾಗಿ ಅವಳಿಗೆ ಪುತ್ರಪ್ರಾಪ್ತಿಯಾಯಿತು. ಮಾತಾಪುತ್ರರಲ್ಲಿ ಮೊದಲು ಗೊತ್ತಾದಂತೆ ಭೋಲಾನಾಥನು ಆ ಅರ್ಭಕನನ್ನು ಒಂದು ಸ್ಥಳದಲ್ಲಿ ಸುವ್ಯವಸ್ಥಿತವಾಗಿಟ್ಟು, ಈ ಸಂಗತಿಯನ್ನು ತನ್ನ ತಾಯಿಗೆ ತಿಳಿಸಿ, ತಾನು ಮತ್ತೆ ಮೊದಲು ಹೇಳಿದ ಕ್ರಮದಂತೆ ಆ ಕ್ಷೇತ್ರದಲ್ಲಿ ತಕ್ಕಮಟ್ಟಿಗೆ ಸುಖದಿಂದ ತನ್ನ ಕಾಲಹರಣ ಮಾಡಹತ್ತಿದನು.

ಕರ್ಮದ ಗತಿಯು ಗಹನವಾದದ್ದು. ಇವನು ಸುಖಸಮಾಧಾನದಿಂದಿರುವದು ಅವನ ದೈವದಲ್ಲಿಯೇ ಇಲ್ಲದ ಮೇಲೆ ಅದು ಅವನಿಗೆ ಲಭಿಸುವದಾದರೂ ಹೇಗೆ? ಪುರೋಹಿತನ ಮಾತಿಗೆ ಮರುಳಾಗಿ ಅವನು ಆ ಕ್ಷೇತ್ರವನ್ನು ಬಿಟ್ಟ ದಿವಸವೇ ಅವನ ಸುಖಶಾಂತಿಗಳಾದರೂ ಅವನನ್ನು ಬಿಟ್ಟವು. ದುರ್ದೈವವು ಅವನ ವಿರುದ್ಧವಾಗಿ ತನ್ನ ಸನ್ನಾಹವನ್ನು ಮಾಡೇ ಇಟ್ಟಿತ್ತು. ಗಿರಿಜಾಬಾಯಿಯು, ತನ್ನ ಮನಸ್ಸಿನಲ್ಲಿ ಹುಟ್ಟಿದ್ದ ನಿರಾಧಾರವಾದ ಸಂಶಯಗಳನ್ನು ನೆರೆಹೊರೆಯಲ್ಲಿದ್ದ ಹೆಂಗಸರ ಮುಂದೆ ತೋಡಿಕೊಂಡು ತೃಪ್ತಳಾಗಲಿಲ್ಲ; ಮತ್ಸರದಿಂದ ಅಂಧಳಾದ ಗಿರಿಜಾಬಾಯಿಯು ತನ್ನ ಗಂಡನ ಕುಲದ ಮೇಲೂ ಅವನ ಕೀರ್ತಿಯ ಮೇಲೂ ಎಂಥೆಂಥ ಸಂಕಟಗಳನ್ನು ತಾನು ತರುವಳೆಂಬ ವಿಚಾರವು ಅವಳಿಗೆ ಉಳಿಯದೆ, ತನ್ನಗಂಡನ ದುರ್ವರ್ತನವನ್ನು ಸುಧಾರಿಸುವ ಉದ್ದೇಶದಿಂದ ತನಗೆ ಗೊತ್ತಿದ್ದ ಸಂಗತಿಗಳನ್ನೆಲ್ಲ ಸಾದ್ಯಂತವಾಗಿ ಆ ನಗರದ ರಾಜನಿಗೆ ವಿದಿತ ಮಾಡಿದಳು.

ಭೋಲಾನಾಥನ ತಂದೆಯು ಜೀವಂತನಿರುವಾಗಲೇ ಅವನ ಹೆಂಡತಿಯು ಅವನಿಂದ ಗರ್ಭಧಾರಣ ಮಾಡಿದ್ದಳೆಂಬ ಸಂಗತಿಯು ನಿಜವಾದದ್ದು. ಆದರೆ, ಗಿರಿಜಾಬಾಯಿಗೆ ಇದು ಸತ್ಯವಾಗಿ ತೋರಲಿಲ್ಲ. ಪತಿಮರಣದ ನಂತರ ತನ್ನ ಗಂಡನ ಸಂಬಂಧದಿಂದಲೇ ಅವಳು ಗರ್ಭಧಾರಣ ಮಾಡಿದಳೆಂದು ಗಿರಿಜಾಬಾಯಿಯ ಕಲ್ಪನೆಯು. ಒಂಬತ್ತು ತಿಂಗಳಗಳು ತುಂಬಿದ ನಂತರವೇ ಅವಳು ಪ್ರಸೂತಳಾಗಿದ್ದಳು. ಆದರೆ, ಕಲ್ಪನೆಯು ಒಮ್ಮೆ ತಪ್ಪಹತ್ತಿತೆಂದರೆ, ಅದು ಎಲ್ಲಿ ನಿಲ್ಲುವದೆಂಬದನ್ನು ಯಾರೂ ಹೇಳಲರಿಯರು. ಈ ನಿಯಮಕ್ಕನುಸಾರವಾಗಿ ಗಿರಿಜಾಬಾಯಿಯು ಕಲ್ಪಿಸಿದ್ದೇನಂದರೆ, ತನ್ನ ಅತ್ತೆಯು ಒಂಬತ್ತು ತಿಂಗಳುಗಳು ತುಂಬುವದರೊಳಗಾಗಿಯೇ ಬಲಾತ್ಕಾರದಿಂದ ಗರ್ಭಪಾತವನ್ನು ಮಾಡಿಕೊಂಡಿರುವಳು. ತಾಯಿಮಕ್ಕಳ ಆಚಾರ

ವಿಚಾರಗಳು ತನಗೆ ತಿಳಿಯಬರಬೇಕೆಂದು ಗಿರಿಜಾಬಾಯಿಯು ಗುಪ್ತರಾದ ಚಾರರನ್ನು ನಿಯೋಜಿಸಿದಳು. ಹುಟ್ಟಿದ ಕೂಸು ಎಲ್ಲಿಯೋ ಇಲ್ಲದಂತಾಗಿದ್ದು, ಭೋಲಾನಾಥನು ಭಿಕ್ಷುಕರ ವೇಷವನ್ನು ಧಾರಣ ಮಾಡಿಕೊಂಡು ಒಂದು ಕ್ಷೇತ್ರದಲ್ಲಿರುತ್ತಾನೆಂಬ ಸಂಗತಿಯು ಚಾರರ ಮುಖಾಂತರವಾಗಿ ಗಿರಿಜಾಬಾಯಿಗೆ ತಿಳಿಯಿತು. ಈ ಸುದ್ದಿಯು ತಿಳಿದ ಕೂಡಲೆ ಅವಳು ತನ್ನ ಪೂರ್ವದ ಕುಕಲ್ಪನೆಯ ಸಂವಿಧಾನವನ್ನು ಕೊನೆಯವರೆಗೆ ಸರಿಯಾಗಿ ಜೋಡಿಸಿದಳು. ಕೂಸು ಇಲ್ಲದಂತಾಗಿದೆಂದ ಮೇಲೆ ಅದನ್ನು ಕೊಂದಿರಲಿಕ್ಕೇ ಬೇಕು; ಭೋಲಾನಾಥನು ಭಿಕ್ಷುಕನ ವೇಷವನ್ನು ಧರಿಸಿ ಮಠದಲ್ಲಿ ಅಡಗಿಕೊಂಡು ಕೂಡುವದಕ್ಕೆ ಗರ್ಭಪಾತದ ಶಾಸನದ ಭೀತಿಯು ಹೊರತು ಅನ್ಯವಾದ ಕಾರಣವಾದರೂ ಯಾವದು? ಹೀಗೆ ವಿಚಾರಿಸಿ ಮತ್ಸರದ ಮೂರ್ತಿಯಾದ ಗಿರಿಜಾಬಾಯಿಯು, ತನ್ನ ಗಂಡನ ಅನ್ಯಗಾಮಿಯಾದ ಪ್ರೇಮವು ದುರ್ಲೌಕಿಕದ ಭೀತಿಯಿಂದಲಾದರೂ ಮರಳಿ ತನ್ನ ಮೇಲೆ ಕೂಡಬೇಕೆಂಬ ಉದ್ದೇಶದಿಂದ ಈ ಸಂಗತಿಯನ್ನು ರಾಜದರಬಾರಕ್ಕೆ ಅರಿಕೆ ಮಾಡಿಕೊಂಡಳು. ಪುರಾತನ ಕಾಲದ ದರಬಾರವದು. ಇಷ್ಟು ಸೂಕ್ಷ್ಮವಾದ ನ್ಯಾಯ-ಅನ್ಯಾಯಗಳನ್ನು ಪರೀಕ್ಷಿಸುವವರಾರು? ಸೂಳಿಯ ಪಾಪ ಸನ್ಯಾಸಿಗೆಂಬ ನಾಣ್ಣುಡಿಯು ಆಗಿನಿಂದಲೇ ಲೋಕದಲ್ಲಿ ರೂಢವಾಗಿದೆ.

* * * *

ಪ್ರಾತಃಕಾಲದ ಸಮಯವು. ಆಕಾಶದಲ್ಲಿ ನಕ್ಷತ್ರಗಳು ವಿರಲವಾಗಿ ತೋರುತ್ತಿದ್ದವು. ಪೂರ್ವದಿಶೆಯು ಕಿಂಚಿತ್ ಆರಕ್ತವಾಗಿತ್ತು. ವೃಕ್ಷಗಳ ಸಮುದಾಯದೊಳಗಿಂದ ಪಕ್ಷಿಗಳ ಮಂಜುಲವಾದ ಧ್ವನಿಯು ಕೇಳಬರುತ್ತಿತ್ತು. ಮುಂಜಾವಿನ ತಂಗಾಳಿಯು ಮಂದಮಂದವಾಗಿ ಬೀಸುತ್ತಿತ್ತು. ಅನೇಕ ದಿವಸಗಳವರೆಗೆ ಕತ್ತಲೆಕೋಣೆಯೊಳಗಿನ ನೆಲಮನೆಯಲ್ಲಿದ್ದ ಭೋಲಾನಾಥನಿಗೆ ಅವಚಿತವಾಗಿ ಇಂಥ ವಿಶ್ವಸೌಂದರ್ಯ ದರ್ಶನವಾದ್ದರಿಂದ ಅವನ ಮನಸ್ಸು ಎಷ್ಟು ಉಲ್ಹಾಸಿತವಾಯಿತೆಂಬದರ ಕಲ್ಪನೆಯನ್ನು ಮಾಡುವದು ಕಠಿಣವಾದ ಕೆಲಸವಲ್ಲ. ಅವನು ಇರುತ್ತಿದ್ದ ಕ್ಷೇತ್ರದಲ್ಲಿಯ ನದಿಯು, ಹತ್ತರದಲ್ಲಿದ್ದ ಉಚ್ಚವಾದದ್ದೊಂದು ಪರ್ವತದಲ್ಲಿ ಉಗಮವನ್ನು ಹೊಂದಿತ್ತು. ಇದೇ ಪರ್ವತದ ಶಿಖರದ ಮೇಲೊಂದು ವಿಸ್ತೀರ್ಣವಾದ

ದುರ್ಗವಿತ್ತು. ಈ ದುರ್ಗಕ್ಕೆ ಸೇರಿದ ಒಂದು ಕತ್ತಲಕೋಣೆಯಲ್ಲಿ ತನಗಾದ ದೇಹಾಂತ ಶಿಕ್ಷೆಯ ಮರಣದ ದಿವಸವನ್ನು ಪ್ರತೀಕ್ಷಿಸುತ್ತ ಭೋಲಾನಾಥನು ಎಷ್ಟೋ ದಿವಸಗಳ ವರೆಗೆ ಕೊಳೆಯುತ್ತ ಬಿದ್ದಿದ್ದನು. ಕೊನೆಗೆ ಆ ದಿವಸವು ಬಂದೊದಗಿತು. ಕಾವಲುಗಾರರು ಆ ಕತ್ತಲೆಕೋಣೆಗೆ ಹಾಕಿದ ಬೀಗವನ್ನು ತೆಗೆದು, ಬಾಗಿಲಗಳನ್ನು ತೆರೆದರು; ಕಾಲುಗಳೊಳಗಿನ ಶೃಂಖಲೆಗಳ ಸಪ್ಪಳವು ಹೃದಯದ್ರಾವಕವಾಗಿ ಕೇಳಬರಹತ್ತಿತ್ತು. ಆ ಹತಭಾಗ್ಯನಾದ ಪ್ರಾಣಿಯು ಬೇಡಿಗಳ ಭಾರವನ್ನು ಸಹಿಸಲಾರದೆ, ಮುಂದಮುಂದವಾಗಿ ಹೆಜ್ಜೆಗಳನ್ನಿಕ್ಕುತ್ತ ತನ್ನ ವಧಸ್ಥಾನವಾಗಿದ್ದ ಪರ್ವತದ ಶಿಖರದ ಕಡೆಗೆ ನಡೆದನು.

ಒಂದು ಎತ್ತರವಾದ ಪರ್ವತದ ತುದಿಯು ಮೇಲಿಂದ ಕೆಳಗೆ ನೂಕಿ ಇವನ ಪ್ರಾಣವನ್ನು ತೆಗೆದುಕೊಳ್ಳಬೇಕೆಂಬ ಶಿಕ್ಷೆಯು ಭೋಲಾನಾಥನಿಗೆ ವಿಧಿಸಲ್ಪಟ್ಟಿತ್ತು. ಆ ಪ್ರಕಾರ ಭೋಲಾನಾಥನು ಆ ಪರ್ವತದ ಶಿಖರದ ಮೇಲೆ ಬಂದು ನಿಂತನು. ಮೇಲಿಂದ ಕೆಳಗೆ ನೋಡುವವರಿಗೆ ಭೂಮಿಯು ಕಾಣದಷ್ಟು ಆ ಪರ್ವತವು ಎತ್ತರವಾಗಿತ್ತು. ಆಕಾಶದಲ್ಲಿ ಹಾರುವದಕ್ಕೆ ಜಾಣವೆಂದು ಹೆಸರು ಪಡೆದ ಪಕ್ಷಿಗಳು ಕೂಡ ನೆಲದ ಮೇಲಿಂದ ಹಾರಿದವೆಂದರೆ, ಪರ್ವತದ ತುದಿಯನ್ನು ಮುಟ್ಟುವದು ಅವುಗಳಿಗೆ ಅಸಾಧ್ಯವಾಗಿ ಮಧ್ಯದಲ್ಲಿಯೇ ವಿಶ್ರಾಂತಿಗಾಗಿ ಎಲ್ಲಿಯಾದರೂ ಕುಳಿತುಕೊಳ್ಳುತ್ತಿದ್ದವು. ಈ ಪಕ್ಷಿಗಳಲ್ಲಿ ರಣಹದ್ದುಗಳ ಗದ್ದಲವೇ ವಿಶೇಷವಾಗಿತ್ತು. ಈ ಪರ್ವತಕ್ಕೆ ಎದುರಾಗಿ ಸ್ವಲ್ಪ ಅಂತರದ ಮೇಲೆ ಮತ್ತೊಂದು ಪರ್ವತವಿತ್ತು. ಶೃಂಖಲೆಗಳಿಂದ ಬದ್ಧನಾದ ಬಂದಿಯು, ಕಾವಲುಗಾರರೂ ಅಧಿಕಾರಸ್ಥರೂ ತನ್ನನ್ನು ನೂಕುವದಕ್ಕೆ ಸಿದ್ಧರಾಗುವ ವರೆಗೆ, ಈ ಎದುರಿನಲ್ಲಿದ್ದ ಪರ್ವತದ ಕಡೆಗೆ ನೋಡುತ್ತ ತಟಸ್ಥನಾಗಿ ನಿಂತಿದ್ದನು. ಆದರೆ, ಅವನ ಮನಸ್ಸಿನಲ್ಲಿ ವಿಚಾರಗಳ ತುಮುಲ ಯುದ್ಧವು ನಡೆದಿತ್ತು. ಮರಣದ ಸಮಯದಲ್ಲಿ ಮನುಷ್ಯನಿಗೆ ಅವನ ಪೂರ್ವವೃತ್ತಗಳೆಲ್ಲ ಕಾಣುತ್ತವೆಂದೆನ್ನುತ್ತಾರೆ. ಈ ಸಮಯದಲ್ಲಿ ಅವನ ಅವಸ್ಥೆಯಾದರೂ ಹೀಗೇ ಆಗಿತ್ತು. ಅವನ ವಿಚಿತ್ರಪೂರ್ಣವಾದ ಚರಿತ್ರವು ಅವನ ಕಣ್ಣುಗಳ ಮುಂದೆ ಬಂದು ನಿಂತಿತು. ಆಗ್ಗೆ ಅವನು ತನ್ನ ಮನಸ್ಸಿನಲ್ಲಿ ಅಂದದ್ದು : " ಸ್ವಲ್ಪಾವಕಾಶದಲ್ಲಿಯೇ ನಾನು ಸಾಯುವೆ

ನೆಂಬ ಸಂಗತಿಯು ನನಗೆ ಆನಂದದಾಯಕವಾಗಿದೆ. ನನ್ನನ್ನು ಸಂಕಟ ದೊಳಗಿಂದ ಮುಕ್ತಮಾಡಲು ಬರುತ್ತಿರುವ ಮರಣವನ್ನು ನಾನು ಮಿತ್ರ ಭಾವದಿಂದ ಸ್ವಾಗತಿಸುತ್ತೇನೆ. ಆದರೆ, ಈ ಸಂಕಟಗಳಾದರೂ ನನ್ನ ಮೇಲೆ ಯಾಕೆ ಒದಗಬೇಕು? ಯಾವ ಅಪರಾಧಗಳನ್ನು ಮಾಡಿರುವೆನೆಂದು ಈ ಯಾತನೆಗಳಿಗೆ ನಾನು ಪಾತ್ರನಾಗಿರುವೆನು? ಆಜನ್ಮ ಧರ್ಮಾಚರಣೆಯನ್ನು ಮಾಡಿದೆನು. ಲೋಕೋಪಕಾರಕ್ಕಾಗಿ ಸ್ವಂತ ಸುಖಕ್ಕೆ ತಿಲಾಂಜಲಿಯನ್ನು ಕೊಟ್ಟೆನು. ಹೀಗಿರಲು ನನ್ನ ಮೇಲೆ ನಿಷ್ಕಾರಣವಾಗಿ ಈ ಸಂಕಟಗಳು ಯಾಕೆ? ನನ್ನ ವಾಣಿಯು ಉಚ್ಚರಿಸುವದಕ್ಕೆ ಕೂಡ ಹೇಸುವ ಅಘೋರ ವಾದ ಪಾತಕಗಳನ್ನು ನಾನು ಮಾಡಿದೆನೆಂಬ ದೋಷಾರೋಪವು ನನ್ನ ಮೇಲೆ ಯಾಕೆ? ಹಾಗೂ ನನಗೆ ದೇಹಾಂತ ಶಾಸನವಾದರೂ ಯಾಕೆ ವಿಧಿ ಸಲ್ಪಡಬೇಕು? ಇದು ಹೀಗೆ ಯಾಕಾಗುತ್ತಿರುವದು? ಹಾಗೂ ಇದನ್ನು ಮಾಡುವವನಾದರೂ ಯಾರಿರಬಹುದು?

ಈ ವಿಚಾರಗಳು ಇವನ ಮನಸ್ಸಿನಲ್ಲಿ ನಡೆದಿರಲು, ಎದುರಿನಲ್ಲಿದ್ದ ಪರ್ವತದ ತುದಿಯ ಮೇಲೆ, ಇವನು ಪೂರ್ವದಲ್ಲಿ ಎಷ್ಟೋ ಸಾರೆ ನೋಡಿದ್ದ ಕರ್ಮಾಧಿಕಾರಿಯ ಮೂರ್ತಿಯು ಇವನಿಗೆ ಕಾಣಹತ್ತಿತು. ಪರ್ವತದ ಶಿಖರ ದಿಂದ ಆಕಾಶದ ವರೆಗಿನ ವಿಸ್ತೀರ್ಣವಾದ ಅವಕಾಶಭಾಗವನ್ನೆಲ್ಲ ಆ ಆಕೃ ತಿಯು ವ್ಯಾಪಿಸಿಕೊಂಡಿತು. ಇಂಥ ಭವ್ಯವಾದ ಹಾಗೂ ವಿರಾಟಸ್ವರೂಪಿ ಯಾದ ಕರ್ಮಾಧಿಕಾರಿಯ ಆಕೃತಿಯನ್ನು ಕಂಡು, ಭೋಲಾನಾಥನು ತೀರ ವಿಸ್ಮಿತನೂ, ಕ್ರುದ್ಧನೂ ಆಗಿ ಅವನನ್ನು ನೋಡಿ ಅಂದದ್ದು: "ಎಲೈ ಕರ್ಮಾಧಿಕಾರಿಯೇ, ಈ ಕಾಲಕ್ಕಾದರೂ ನೀನು ಇಲ್ಲಿ ಇಷ್ಟೇ ಇರುವಿಯಾ? ನನ್ನ ಬೆನ್ನುಬಿಡದೆ ನನ್ನನ್ನು ಯಾಕೆ ಹಿಂಬಾಲಿಸುವಿ? ನೀನು ಯಾರು? ನಿನ್ನ ಅಧಿಕಾರವೇನು? ನನ್ನ ಮೇಲೆ ಸಂಕಟಗಳು ಬಂದೊದಗಿದಾಗ ನನ್ನನ್ನು ಹೀಯಾಳಿಸಲು ವೈರಿಯಂತೆ ನೀನು ಯಾವಾಗಲೂ ಸಿದ್ಧನೇ."

"ನಾನು ಕರ್ಮಾಧಿಕಾರಿಯೆಂದು ನಿನಗೆ ಈ ಮೊದಲೇ ಹೇಳಿಲ್ಲವೆ? ಪ್ರತಿಯೊಬ್ಬನ ಕರ್ಮಗಳಿಗನುಸಾರವಾಗಿ ಅವನಿಗೆ ಫಲಗಳನ್ನು ಕೊಡುವದು ನನ್ನ ಅಧಿಕಾರವಾಗಿದೆ. ನಾನು ನಿನ್ನ ಕರ್ಮಮೂರ್ತಿಯು. ಹಾಗೆಯೇ ಆ ಪುರೋಹಿತನು, ಆ ನಿನ್ನ ದತ್ತಕ ತಂದೆಯು, ದತ್ತಕ ತಾಯಿಯು, ನಿನ್ನ

ಹೆಂಡತಿಯು, ನಿನ್ನ ಹೊಸ ತಮ್ಮನು ಇವರೆಲ್ಲರೂ ಅಂಶತಃ ನಿನ್ನ ಕರ್ಮದ ಫಲಗಳಾಗಿದ್ದಾರೆ. ಪೂರ್ವಸಂಚಿತದಂತೆ ಅಪ್ತೇಷ್ಟರು ಸುಖದುಃಖಗಳಿಗೆ ಕಾರಣರಾಗುತ್ತಾರೆ. ಇದೆಲ್ಲ ನಿನ್ನ ಕರ್ಮದ ಆಟವು!.

ಪ್ರಶ್ನ : ಇಂಥ ಭಯಂಕರವಾದ ಫಲಗಳನ್ನುಪಭೋಗಿಸಲು ನಾನು ಮಾಡಿದ ಅಂಥ ಭಯಂಕರವಾದ ಕರ್ಮಗಳಾವರೂ ಯಾವವು? ನಾನು ಯಾರ ದ್ರವ್ಯಾಪಹಾರವನ್ನು ಮಾಡಿದ್ದೆನೆಂದು ಈ ಭಯಂಕರವಾದ ಪಿಶಾಚಿಗಳು ನನ್ನನ್ನು ಕಾಡುತ್ತಿರುವವು? ಹಾಗೂ ನಾನು ಯಾರ ಪ್ರಾಣಘಾತವನ್ನು ಮಾಡಿದ್ದೆನೆಂದು ಈ ಕ್ರೂರವಾದ ಮರಣದ ಶಿಕ್ಷೆಯು ನನಗೆ ವಿಧಿಸಲ್ಪಟ್ಟಿರುವದು?

ಉತ್ತರ : ಈ ಯಾತನೆಗಳಿಗೆ ಪಾತ್ರನಾಗುವಂತೆ ನೀನು ಜನ್ಮಾಂತರದಲ್ಲಿ ಕರ್ಮಗಳನ್ನಾಚರಿಸಿರುವಿ.

ಪ್ರಶ್ನ: ಈ ಮಾತಿನ ತಿಳುವಳಿಕೆಯಾಗುವದು ಕಠಿಣವಾದದ್ದು. ನನ್ನ ಇಹಜನ್ಮದ ಆಚರಣದ ಮೇಲಿಂದಲೂ ಮನಃಪ್ರವೃತ್ತಿಯ ಮೇಲಿಂದಲೂ ಇಂಥ ಕೃತ್ಯಗಳನ್ನು ನಾನು ಮಾಡಿಲ್ಲೆಂದು ನಿಶ್ಚಯಪೂರ್ವಕವಾಗಿ ಹೇಳಬಲ್ಲೆನು. ಆದರೆ, ಪೂರ್ವಜನ್ಮದಲ್ಲಿ ನಾನು ಅಂಥ ಅಘೋರವಾದ ಪಾತಕಗಳನ್ನು ಮಾಡಿದ್ದರೆ, ಹಾಗೂ ಅವುಗಳ ಪ್ರಾಯಶ್ಚಿತ್ತವನ್ನು ನಾನು ಈ ಜನ್ಮದಲ್ಲಿ ಭೋಗಿಸುವದಾಗಿದ್ದರೆ, ನನ್ನ ಪೂರ್ವಪಾತಕಗಳನ್ನು ನನ್ನ ನೆನಪಿಗೆ ತಂದು ಕೊಡುವದು ನ್ಯಾಯವಾದ ಮಾತಲ್ಲವೆ? ನೀನು ಇಂಥಿಂಥ ಕರ್ಮಗಳನ್ನು ಮಾಡಿರುವದಕ್ಕಾಗಿ ನಿನಗೆ ಇಂಥ ಶಿಕ್ಷೆಯು ವಿಧಿಸಲ್ಪಟ್ಟಿದೆಯೆಂದು ನ್ಯಾಯಾಧೀಶರಾದರೂ ಹೇಳುವ ರೂಢಿಯುಂಟು. ಈಗಿನ ನನ್ನ ಸುಖದುಃಖಗಳಿಗೆ ನನ್ನ ಪೂರ್ವಜನ್ಮದ ಸುಕರ್ಮ ಅಥವಾ ದುಷ್ಕರ್ಮಗಳು ಕಾರಣವಾಗಿವೆಂದು ನೀನು ಹೇಳುತ್ತಿರುವಿ. ಆದರೆ, ನನ್ನ ಪೂರ್ವಜನ್ಮದಲ್ಲಿ ನನಗೆ ದುಷ್ಕರ್ಮಮಾಡುವ ಬುದ್ಧಿಯಾದರೂ ಯಾಕೆ ಹುಟ್ಟಬೇಕು? ಅದಕ್ಕೆ ಅದರ ಪೂರ್ವಜನ್ಮದ ಕರ್ಮಗಳು ಕಾರಣವೆಂದು ನಿನ್ನ ಉತ್ತರವು. ಈ ಪೂರ್ವಜನ್ಮದ ಪರಂಪರೆಯನ್ನಾದರೂ ಎಲ್ಲಿಯ ವರೆಗೆ ಒಯ್ಯತಕ್ಕದ್ದು? ಒಳ್ಳೇದು, ನನ್ನ ಮೊಟ್ಟಮೊದಲನೆಯ ಜನ್ಮದಲ್ಲಿ ಕರ್ಮವು ಎಲ್ಲಿಂದ ಬಂದಿತು? ಮುಂದಿನ ಜನ್ಮದಲ್ಲಿ ದುಃಖಗಳು ಪ್ರಾಪ್ತವಾಗುವಂಥ ಕುಕರ್ಮ

ಗಳು ಆ ಜನ್ಮದಲ್ಲಿ ನನ್ನಿಂದ ಯಾಕೆ ಘಟಿಸಿದವು ? ಈ ಪ್ರಶ್ನೆಗೆ ಸಮಾಧಾನ ಕಾರಕವಾದ ಉತ್ತರವನ್ನು ನೀನು ಕೊಟ್ಟರೆ, ನೀನು ವಿಧಿಸುವ ಅನಂತಾನಂತ ಶಿಕ್ಷೆಗಳನ್ನು ನಾನು ಆನಂದದಿಂದ ಉಪಭೋಗಿಸುವೆನು.

ಉತ್ತರ: ಕರ್ಮವು ಅನಾದಿಯಾದದ್ದೆಂದು ಮಾತ್ರ ನಾನು ಹೇಳ ಬಲ್ಲೆನು. ಇದಕ್ಕೂ ಹೆಚ್ಚಿನ ಸಮಾಧಾನಕಾರಕವಾದ ಉತ್ತರವು ನನ್ನ ಹತ್ತರವಿಲ್ಲ. ಸುಖಗಳನ್ನು ಉಪಭೋಗಿಸುವಾಗ ಈ ಸುಖವು ಯಾವ ಜನ್ಮದಲ್ಲಿಯ ಸುಕರ್ಮದ ಫಲವೆಂದು ಮನುಷ್ಯನು ವಿಚಾರಿಸುವದಿಲ್ಲ. ಅಂದ ಮೇಲೆ ದುಃಖಗಳನ್ನು ಉಪಭೋಗಿಸುವಾಗ ಮಾತ್ರ ಅವನು ಈ ಆಕ್ಷೇಪ ವನ್ನು ಯಾಕೆ ತೆಗೆಯಬೇಕು ?

ಇಷ್ಟು ಮಾತಾಡಿ ಆ ಕರ್ಮಾಧಿಕಾರಿಯು ಅದೃಶ್ಯನಾದನು. ಇದನ್ನು ಕಂಡು ಭೋಲಾನಾಥನು ' ನಿಷ್ಠುರನು, ನಿಷ್ಠುರನು ' ಎಂದು ಕರ್ಮಾಧಿ ಕಾರಿಯನ್ನುದ್ದೇಶಿಸಿ ಅವನನ್ನು ಧಿಕ್ಕರಿಸುವಷ್ಟರಲ್ಲಿ, ಕಾವಲುಗಾರರು ಅವ ನನ್ನು ಪರ್ವತದ ಶಿಖರದಿಂದ ಕೆಳಗೆ ನೂಕಿದರು !

---

# ಪೇರೂ ಹಾಗೂ ಪಿರ್ಝಾರೋ

ಅಮೇರಿಕಾ ಖಂಡದ ಶೋಧವನ್ನು ಕೋಲಂಬಸನು ಹಚ್ಚಿದನು; ಯುರೋಪಿಯುನ್ ರಾಷ್ಟ್ರದವರು ಅಮೇರಿಕೆಗೆ ಹೋಗುವದರ ಪೂರ್ವದಲ್ಲಿ, ಅಲ್ಲಿ 'ರೆಡ್-ಇಂಡಿಯನ್' ಅಥವಾ ತಾಮ್ರವರ್ಣದ ಕಾಡಜನರು ವಾಸಮಾಡಿ ಕೊಂಡಿದ್ದರು; ಹೊಸದಾಗಿ ವಸಹಾತವನ್ನು ಮಾಡಿದ ಯುರೋಪಿಯುನ್ ಜನರ ಮುಂದೆ ಅವರ ಆಟ ಸಾಗದೆ, ಅವರು ಯುರೋಪಿಯನ್ನರ ಅಂಕಿತಕ್ಕೆ ಪೂರ್ಣ ಒಳಗಾದರು; ಇಷ್ಟು ಸಂಗತಿಗಳನ್ನು ಬಿಟ್ಟರೆ ಅಮೇರಿಕೆಯೊಳಗಿನ ಅನೇಕ ದೇಶಗಳ ಪೂರ್ವವೃತ್ತಾಂತವು ನಮ್ಮ ಜನರಿಗೆ ಗೊತ್ತಿಲ್ಲ. ಅಮೇರಿಕೆಯು ಒಂದು ಖಂಡವಾಗಿದೆ. ಇಂಗ್ರಜ ಜನರ ಸಂಬಂಧವು ಉತ್ತರ ಅಮೇರಿಕೆಯಲ್ಲಿರುವ 'ಕಾನಡಾ' ಹಾಗೂ 'ಯುನಾಯಟೆಡ್‌ಸ್ಟೇಟ್ಸ' ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಪ್ರದೇಶಗಳ ಕೂಡ ವಿಶೇಷವಾಗಿರುವದರಿಂದ, ಇಂಗ್ರಜೀ ಇತಿಹಾಸಗಳ ದ್ವಾರಾ ಈ ಪ್ರದೇಶಗಳ ವಿಷಯವಾಗಿ ಅಲ್ಪಸ್ವಲ್ಪ ಜ್ಞಾನವು ಸರ್ವಸಾಧಾರಣವಾಗಿ ಸುಶಿಕ್ಷಿತ ಜನರಿಗಿರುತ್ತದೆ. ಆದರೆ ಉತ್ತರ ಅಮೇರಿಕೆಯಲ್ಲಿರುವ ಪ್ರದೇಶದಷ್ಟೇ ಪ್ರದೇಶವು ದಕ್ಷಿಣ ಅಮೇರಿಕೆಯಲ್ಲಿರುತ್ತದೆ. ಆದರೆ ದಕ್ಷಿಣ ಅಮೇರಿಕೆಯೊಳಗಿನ ಬ್ರಾಝಿಲ, ಪೇರೂ ಮುಂತಾದ ದೊಡ್ಡ ದೊಡ್ಡ ಪ್ರದೇಶಗಳನ್ನು, ಇಂಗ್ರಜೇತರ ಯುರೋಪಿಯನ್ ರಾಷ್ಟ್ರದವರೇ ಪೂರ್ವದಿಂದಾರಭ್ಯ ತಮ್ಮ ಸ್ವಾಧೀನ ಮಾಡಿಕೊಂಡಿರುವದರಿಂದ ಅವುಗಳ ಪೂರ್ವೇತಿಹಾಸವು ನಮ್ಮಲ್ಲಿಯ ಸುಶಿಕ್ಷಿತರಿಗೂ ಕೂಡ ಗೊತ್ತಿರುವದಿಲ್ಲ. ಮೇಲಾಗಿ ಯುರೋಪಿಯನರು ಅಮೇರಿಕೆಗೆ ಹೋಗುವದರ ಪೂರ್ವದಲ್ಲಿ, ಅಮೇರಿಕೆಯಲ್ಲಿಯ ಮೂಲನಿವಾಸಿಗಳೆಲ್ಲರೂ ಕಾಡುಸ್ಥಿತಿಯಲ್ಲಿದ್ದರು, ಅಥವಾ ನರಮಾಂಸ ಭಕ್ಷಕರಾಗಿದ್ದರೆಂಬ ಸರ್ವಸಾಧಾರಣವಾಗಿರುವ ಕಲ್ಪನೆಯಾದರೂ ತಪ್ಪಿನದಾಗಿದೆ. 'ಮೆಕ್ಸಿಕೋ'ದೊಳಗಿನ ಆಝುಟೇಕ ಜನರೂ, ಪೇರೂದೊಳಗಿನ ಇಂಕಾಜನರೂ ತಕ್ಕಮಟ್ಟಿಗೆ ಸುಸಂಸ್ಕೃತರಾದ ಜನರಾಗಿದ್ದರು. ಈ ಜನರ ರಾಜ್ಯಗಳನ್ನು ಸ್ಪಾನಿಆರ್ಡರು ಹೇಗೆ ಪಾದಾಕ್ರಾಂತ ಮಾಡಿದರೆಂಬ ಇತಿಹಾಸವು ಬಹಳೇ ಮನೋವೇಧಕವಾಗಿದೆ. ಅದಕ್ಕಾಗಿ 'ಪ್ರೆಸ್ಕಾಟ' ಎಂಬ ಗ್ರಂಥಕಾರನು ಬರೆದಿಟ್ಟಿರುವ ಪೇರೂದೇಶದ

ಇತಿಹಾಸದ ಮೇಲಿಂದ, ಆ ದೇಶದ ಪ್ರಾಚೀನ ನಿವಾಸಸ್ಥರನ್ನು ಸ್ಪಾನಿಆರ್ಡರು ಯಾವ ಬಗೆಯಿಂದ ಪಾದಾಕ್ರಾಂತ ಮಾಡಿದರೆಂಬದರ ಸಂಗತಿಯನ್ನು ಅಲ್ಪಶಃ ನಮ್ಮ ವಾಚಕರ ಸಲುವಾಗಿ ಕೊಡುತ್ತೇವೆ.

ಪೇರೂ ದೇಶವು ಅಮೇರಿಕೆಯಲ್ಲಿ ಒಂದು ದೊಡ್ಡದಾದ ಪ್ರದೇಶವಾಗಿದೆ. ಈ ದೇಶದ ದಕ್ಷಿಣೋತ್ತರ ಉದ್ದಳತೆಯು ೨೭೦೦ ಮೈಲವಾಗಿದ್ದು ಅಗಲಳತೆಯು ಇನ್ನೂರರಿಂದ ನಾನೂರು ಮೈಲವಾಗಿದೆ. ಪೇರೂ ದೇಶದ ಪಶ್ಚಿಮಕ್ಕೆ ಪಾಸಿಫಿಕ ಮಹಾಸಾಗರವಿದ್ದು, ಪೂರ್ವಕ್ಕೆ ಅತ್ಯುಚ್ಚವಾದ ಆಂಡಿಜ ಪರ್ವತವು ಹಬ್ಬಿಕೊಂಡಿದೆ. ಈ ಪರ್ವತದ ಹಲಕೆಲವು ಶಿಖರಗಳು ೨೫೦೦೦ ಫೂಟುಗಳ ವರೆಗೆ ಎತ್ತರವಾಗಿವೆ. ಅಂದರೆ, ಹಿಮಾಲಯ ಪರ್ವತವನ್ನು ಬಿಟ್ಟುಕೊಟ್ಟರೆ, ಇದೇ ಪರ್ವತವು ಪೃಥ್ವಿಯ ಮೇಲೆ ಉಚ್ಚವಾದದ್ದು. ಆಂಡಿಜಪರ್ವತ ಹಾಗೂ ಪಾಸಿಫಿಕ ಮಹಾಸಾಗರಗಳ ನಡುವೆ ಈ ಪ್ರದೇಶವು ಹಬ್ಬಿಕೊಂಡಿದೆ. ಈ ದೇಶದೊಳಗಿನ ಮೂಲನಿವಾಸಸ್ಥರಿಗೆ 'ಪೇರುವ್ಹಿಯನ' ಜನರೆಂಬ ಸಂಜ್ಞೆಯನ್ನು ಯುರೋಪಿಯನ್ನರು ಕೊಡುತ್ತಾರೆ. ಆದರೆ, ಈ ದೇಶದೊಳಗಿನ ಉಚ್ಚವರ್ಣದ ಜನರಿಗೂ ರಾಜಮನೆತನದವರಿಗೂ 'ಇಂಕಾ' ಎಂಬ ಸಂಜ್ಞೆ ಇತ್ತು. ಆದಕ್ಕಾಗಿ ಪೇರೂ ದೇಶದೊಳಗಿನ ಜನರಿಗೆ ಇಂಕಾ ಎಂಬ ಸಂಜ್ಞೆಯೇ ಇತಿಹಾಸದಲ್ಲಿ ಸರ್ವಸಾಧಾರಣವಾಗಿ ಕೊಡಲ್ಪಟ್ಟಿದೆ. ಕೋಲಂಬಸನು ಅಮೇರಿಕೆಯನ್ನು ಶೋಧಿಸಿದನು; ಆದರೆ ಈ ವಿಸ್ತೀರ್ಣವಾದ ಹೊಸ ಖಂಡದೊಳಗಿನ ಭಿನ್ನ ಭಿನ್ನ ದೇಶಗಳ ಜ್ಞಾನವನ್ನು ಸಂಪಾದಿಸುವದಕ್ಕೂ ಮೆಕ್ಸಿಕೋದೊಳಗಿನ 'ಆಝುಟೇಕ ಜನರ ಸಾಮ್ರಾಜ್ಯದ ಮೇಲೂ ಪೇರೂದೊಳಗಿನ ಇಂಕಾಜನರ ವಿಸ್ತೀರ್ಣವಾದ ಪ್ರದೇಶದ ಮೇಲೂ ಸ್ಪೇನದ ಧ್ವಜಪಟವನ್ನು ಊರುಬೇಕಾದರೆ, ಕೋರ್ಟಿಸ್ ಹಾಗೂ ಪಿಝಾರೋರಂಥ ಸಾಹಸಿಗಳಾದ ಎದೆಗಾರರಿಗೆ ಅನೇಕ ವರ್ಷಗಳ ವರೆಗೆ ಜೀವಮಿಾರಿ ಪ್ರಯತ್ನಗಳನ್ನೂ, ಕಷ್ಟಗಳನ್ನೂ ಪಡಬೇಕಾಯಿತು. ೧೫ನೇ ಶತಕದ ಕೊನೆಯಲ್ಲಿ ಪನಾಮಾ ಸಂಯೋಗಭೂಮಿಯ ಮೇಲೆ ಸ್ಪಾನಿಶ ಜನರ ವಸಹಾತಿಗಳು ಸ್ಥಾಪಿತವಾಗಿದ್ದರೂ ಪಾಸಿಫಿಕ ಮಹಾಸಾಗರದ ದಕ್ಷಿಣಭಾಗದ ದಂಡೆಯ ಮೇಲೆ ಯಾವ ಜನರು ವಾಸಿಸಿರುವರೆಂಬದೂ, ಅವರ ರಾಜ್ಯವ್ಯವಸ್ಥೆಯು ಯಾವ ಬಗೆಯದಾಗಿತ್ತೆಂಬದೂ ಸ್ಪಾನಿಆರ್ಡರಿಗೆ ಗೊತ್ತಾಗಿದ್ದಿಲ್ಲ. ಸ್ಪಾನಿ

ಆರ್ಡರಿಗೆ ಬಂಗಾರದ ಹುಚ್ಚು ಬಳಿತಾಗಿತ್ತು. ಹೊಸ ಹೊಸ ದೇಶಗಳು ದೊರೆದ ಕೂಡಲೆ, ಅಲ್ಲಿ ಬಂಗಾರವು ಅಪಾರವಾಗಿ ದೊರೆಯುತ್ತದೇನೆಂಬದರ ವಿಷಯವಾಗಿ ಅವರು ವಿಚಕ್ಷಣೆಯನ್ನು ಮಾಡುತ್ತಿದ್ದರು. ಸ. ೧೫೧೧ನೇ ಇಸ್ವಿಯಲ್ಲಿ ವ್ಯಾಸ್ಕೋ-ನನೇಝು-ಡೀ-ಬಲ್ಬೋಆ ಎಂಬ ಸ್ಪಾನಿಶ ಗೃಹಸ್ಥನು ತದ್ದೇಶೀಯ ಅಮೇರಿಕನ ಜನರಿಂದ ಸಂಪಾದಿಸಿದ ಬಂಗಾರವನ್ನು ತೂಗುತ್ತಿದ್ದನು. ಈ ಬಂಗಾರವು ೮-೧೦ ಶೇರುಗಳಕಿಂತ ಹೆಚ್ಚಿಗಿದ್ದಿದ್ದಿಲ್ಲ. ಆದರೆ, ಅವನು ಅದನ್ನು ತೂಗುವಾಗ ಗುಂಜಿಯಷ್ಟು ಕೂಡ ಹೆಚ್ಚುಕಡಿಮೆಯಾಗದಂತೆ ಎಚ್ಚರಪಡುತ್ತಿದ್ದನು. ಆಗ್ಗೆ ಇದನ್ನೆಲ್ಲ ನೋಡುತ್ತ ಅಲ್ಲಿ ಕುಳಿತಿದ್ದ ಒಬ್ಬ ತದ್ದೇಶೀಯ ಗೃಹಸ್ಥನು ಬಲ್ಬೋಆನ ತಕ್ಕಡಿಯ ಮೇಲೆ ಕೈ ಹೊಡೆದು ಅವನಿಗೆ ಅಂದದ್ದು: "ಇಷ್ಟು ಬಂಗಾರದ ತೂಕವನ್ನಾದರೂ ಎಷ್ಟು ಜೀನತನದಿಂದ ಮಾಡುವದು? ಈ ಸಮುದ್ರದ ದಂಡಿಯ ದಕ್ಷಿಣಭಾಗದಲ್ಲಿ ಬಂಗಾರದ ರಾಶಿಗಳುಳ್ಳ ದೇಶಗಳಿರುವವು. ನಿಮಗೆ ಕಬ್ಬಿಣದ ಬೆಲೆಯಿದ್ದಷ್ಟು ಅವರಿಗೆ ಬಂಗಾರದ ಬೆಲೆಯಿರುವದು." ತದ್ದೇಶೀಯ ಸರದಾರನ ಈ ಭಾಷಣವು ಬಲ್ಬೋಆನಿಗೆ ಮೊಟ್ಟಮೊದಲು ಅತಿಶಯೋಕ್ತಿಯುಳ್ಳದ್ದಾಗಿ ತೋರಿತು. ಆದರೆ, ಕಬ್ಬಿಣದ ಬೆಲೆಯಿಂದ ಬಂಗಾರವು ಮಾರುತ್ತಿರುವ ಪ್ರದೇಶವು ಇದ್ದದ್ದಾಗಿದ್ದರೆ, ಅದರ ಶೋಧವನ್ನು ಹಚ್ಚಬೇಕೆಂಬ ಮನೀಷೆಯು ಸ್ಪಾನಿಶ ಜನರ ಮನಸ್ಸಿನಲ್ಲಿ ಸ್ವಾಭಾವಿಕವಾಗಿಯೇ ಹುಟ್ಟಿತು. ೧೫೨೨ನೇ ಇಸ್ವಿಯಲ್ಲಿ ಸ್ಪಾನಿಶ ಅಧಿಕಾರಿಗಳು ಪಾಸ್ಕೂಅಲ-ಡೀ-ಅಂದಾಗೋಯಾ ಎಂಬವನ ಸಂಗಡ ಕೆಲವು ಹಡಗಗಳನ್ನೂ ಕೆಲವು ಜನರನ್ನೂ ಕೊಟ್ಟು ಪಾಸಿಫಿಕ ಮಹಾಸಾಗರದ ದಕ್ಷಿಣ ದಂಡೆಯ ಶೋಧಹಚ್ಚುವದಕ್ಕೆ ಅವನನ್ನು ಕಳಿಸಿಕೊಟ್ಟರು. ಆದರೆ ಅಂದಾಗೋಯಾನ ಪರ್ಯಟನದಿಂದ ವಿಶೇಷವಾದ ಕಾರ್ಯನಿಷ್ಪತ್ತಿಯಾಗಲಿಲ್ಲ. ಯಾಕಂದರೆ, ಸಮುದ್ರದ ಮೇಲಿನ ಭಯಂಕರವಾದ ಬಿರುಗಾಳಿಯಿಂದಲೂ ದಂಡೆಯ ಮೇಲಿನ ರೋಗೋತ್ಪಾದಕ ಹವೆಯಿಂದಲೂ ಅಂದಾಗೋಯಾನು ಜರ್ಜರಿತನಾದ್ದರಿಂದ ಅವನು ಹತಾಶನಾಗಿ ಬರಿಗೈ ಬೀಸಾಡುತ್ತ ಪಾನಾಮಕ್ಕೆ ಮರಳಿ ಬಂದನು.

### ಫ್ರಾನ್ಸಿಸ್ಕೋ ಪಿಝಾರೋ

ಅಂದಾಗೋಯಾನು ಅಪಯಶವನ್ನು ಹೊಂದಿ ಮರಳಿ ಬಂದರೂ

ಪೇರೂದಂಥ ಸುವರ್ಣಭೂಮಿಯ ಶೋಧಹಚ್ಚುವ ಕೆಲಸದಿಂದ ಪರಾಙ್ಮುಖ ವಾಗುವಂಥ ಹೇಡಿಗಳು ಸ್ಪಾನಿಆರ್ಡರು ಆಗಿದ್ದಿಲ್ಲ. ಪಾಸಿಫಿಕ ಮಹಾ ಸಾಗರದಲ್ಲಿ ಪರ್ಯಟನವನ್ನು ಮಾಡುವದಕ್ಕಾಗಿ ಮತ್ತೊಂದು ಹಡಗವನ್ನು ಕಳಿಸತಕ್ಕದ್ದೆಂದು ಸ. ೧೫೨೪ರಲ್ಲಿ ಗೊತ್ತುಮಾಡಲ್ಪಟ್ಟಿತು. ಶೂರನೂ, ಸಾಹಸಿಯೂ, ದೃಢನಿಶ್ಚಯಿಯೂ, ಸಂಕಟಕ್ಕೆ ಅಭಿಮುಖವಾಗಿ ನಿಲ್ಲುವವನೂ ಎಂದು ಪ್ರಸಿದ್ಧಿಯನ್ನು ಹೊಂದಿದ್ದ ಪಿಝಾರೋ ಎಂಬ ಸರದಾರನು ಈ ಹಡಗದ ಕ್ಯಾಪ್ಟನನಾಗಿ ನೇಮಿಸಲ್ಪಟ್ಟನು. ಪಿಝಾರೋನು ಈ ಕಾಲಕ್ಕೆ ೫೦-೫೫ ವರ್ಷ ವಯಸ್ಸುಳ್ಳವನಾಗಿದ್ದರೂ ೩೦-೩೫ ವರ್ಷದ ತಾರುಣ್ಯದ ಭರದಲ್ಲಿರುವ ವೀರಪುರುಷನ ಉತ್ಸಾಹವು ಅವನಲ್ಲಿ ತುಂಬಿತುಳುಕುತ್ತಿತ್ತು. ಪಿಝಾರೋನು ತನ್ನ ತಂದೆತಾಯಿಗಳ ಔರಸಪುತ್ರನಾಗಿರದೆ, ಕಾನೀನ ಪುತ್ರನಾಗಿದ್ದನು. ಚಿಕ್ಕಂದಿನಲ್ಲಿ ಅವನಿಗೆ ಶಿಕ್ಷಣದ ಗಂಧವಾದರೂ ಇದ್ದಿದ್ದಿಲ್ಲ. ತಂದೆತಾಯಿಗಳಿಂದ ತ್ಯಜಿಸಲ್ಪಟ್ಟಂಥ ಅನಾಥ ಬಾಲಕರ ಸಲುವಾಗಿ ಸ್ಥಾಪಿಸಲ್ಪಟ್ಟದ್ದೊಂದು ಆಶ್ರಮದಲ್ಲಿ ಅವನು ದೊಡ್ಡವನಾಗಿದ್ದನು. ಅವನು ಹತ್ತುಹದಿನೈದು ವರ್ಷದವನಾದಂದಿನಿಂದ ಎಷ್ಟೋ ವರ್ಷಗಳ ವರೆಗೆ ಕುರಿಗಳನ್ನು ಕಾಯುವ ಕೆಲಸವನ್ನು ಮಾಡುತ್ತಿದ್ದನು. ಮುಂದೆ, ಅಮೇರಿಕಾ ಖಂಡದೊಳಗಿನ ಹೊಸ ಹೊಸ ಪ್ರದೇಶಗಳ ವರ್ಣನೆಗಳು ಸ್ಪೇನದಲ್ಲಿ ಹಬ್ಬಿಕೊಳ್ಳಹತ್ತಿದವು ಧೈರ್ಯವಂತರಿಗೂ ಸಾಹಸಗಾರರಿಗೂ ದ್ರವ್ಯಸಂಚಯವನ್ನು ಮಾಡುವದಕ್ಕೆ ಅಮೇರಿಕೆಯಲ್ಲಿರುವಂಥ ಸುಸಂಧಿಯು ಅನ್ಯತ್ರ ದೊರೆಯಲಾರದೆಂತಲೂ ಬಂಗಾರವೆಂದರೆ ಅಲ್ಲಿ ಕಃಪದಾರ್ಥವೆಂತಲೂ ಬಂಗಾರದ ರಾಶಿಗಳನ್ನು ಬೇಕಾದವರು ಎತ್ತಿಕೊಂಡು ಒಯ್ಯಬಹುದೆಂತಲೂ ಮುಂತಾದ ಸತ್ಯಾಸತ್ಯದ ಸುದ್ದಿಗಳು ಹೊಸ ಖಂಡದೊಳಗಿನ ಸಂಪತ್ತಿಯ ವಿಷಯವಾಗಿ ಹುಟ್ಟಹತ್ತಿದವು. ಪಿಝಾರೋನ ಕಿವಿಗೆ ಈ ಸುದ್ದಿಗಳು ಬಿದ್ದಕೂಡಲೆ, ಅವನು ಕುರಿಗಳನ್ನು ಕಾಯುವ ಕ್ಷುಲ್ಲಕ ಕಾರ್ಯವನ್ನು ಬಿಟ್ಟುಕೊಟ್ಟು ತನ್ನ ವಯಸ್ಸಿನ ೨೫-೩೦ನೇ ವರ್ಷದ ಸುಮಾರಕ್ಕೆ ಸ್ಪೇನ ದೇಶಕ್ಕೆ ಶರಣು ಹೊಡೆದು ಅಮೇರಿಕೆಗೆ ಸಾಗಿದನು. ಪಾನಾಮಾ ಎಂಬ ಸ್ಪಾನಿಶ ವಸಹಾತಿಯಲ್ಲಿದ್ದ ಗವ್ಹರ್ನರರ ಕೈಕೆಳಗೆ ಸೈನ್ಯದೊಳಗಿನ ಸಿಪಾಯಿಯ ಕೆಲಸವನ್ನು ಮಾಡಿ ಒಳ್ಳೇ ಹೆಸರು ಪಡೆದನು. ಮುಂದೆ ೧೫೨೪ನೇ ವರ್ಷದಲ್ಲಿ

ಪೇರೂ ದೇಶದ ಪರ್ಯಟನೆಗೆ ಹೊರಟ ಹಡಗದ ಮೇಲೆ, ಇವನೊಬ್ಬ ಅಧಿಕಾರಿಯಾಗಿ ನಿಯುಕ್ತನಾದನು. ಈ ಹಡಗದ ಮೇಲೆ ಅಲ್ಮಾಗ್ರೋ ಹಾಗೂ ಲ್ಯೂಕ ಎಂಬಿಬ್ಬರು ಬೇರೆ ಅಧಿಕಾರಿಗಳಾದರೂ ಇದ್ದರು. ಎರಡು ಹಡಗಗಳನ್ನೂ ಹಾಗೂ ಹೀಗೂ ಮಾಡಿ ನೂರು ನಾವಿಕರನ್ನೂ ಕೂಡಿಹಾಕಿ ಪಿಝಾರೋನು ಪೇರೂ ದೇಶದ ಶೋಧಾರ್ಥವಾಗಿ ಪ್ರಯಾಣ ಮಾಡಿದನು. ಈ ಮೊದಲನೆಯ ಪರ್ಯಟನದಲ್ಲಿ ಪಿಝಾರೋನ ಮಜಲು ಪೇರೂ ದೇಶದ ಸೀಮೆಯನ್ನು ಕೂಡ ಮುಟ್ಟಲಿಲ್ಲ. ಪೇರೂ ದೇಶದ ಸೀಮೆಯು ಹತ್ತುವದರ ಕಿಂತ ಮುಂಚಿತವಾಗಿ, ಪನಾಮಾ ಸಂಯೋಗಭೂಮಿಯ ದಕ್ಷಿಣದಿಕ್ಕಿನಲ್ಲಿ, ನೂರಾರು ಮೈಲುಗಳ ವರೆಗಿನ ಪಾಸಿಫಿಕ ಮಹಾಸಾಗರದ ದಂಡೆಯು ಅರಣ್ಯಗಳಿಂದಲೂ, ಜವಳು ಪ್ರದೇಶದಿಂದಲೂ ವ್ಯಾಪ್ತವಾಗಿದೆ. ಈ ಪ್ರದೇಶದೊಳಗಿನ ಜನರಾದರೂ ತೀರ ಕಾಡುಸ್ಥಿತಿಯಲ್ಲಿರುತ್ತಾರೆ. ಹಾಗೂ ಈ ದಂಡೆಯ ಹತ್ತರದಲ್ಲಿರುವ ಸಮುದ್ರದೊಳಗಿನ ಚಿಕ್ಕ ಚಿಕ್ಕ ನಡುಗಡ್ಡೆಗಳೊಳಗಿನ ಹವೆಯಾದರೂ ದಂಡೆಯ ಮೇಲಿನ ಹವೆಯಂತೆ ರೋಗೋತ್ಪಾದಕವಾಗಿರುವದಲ್ಲದೆ ವಿಷಮಯವಾಗಿದೆ. ಪಿಝಾರೋನು ಈ ದಂಡೆಯ ಹತ್ತರ ತನ್ನ ಹಡಗವನ್ನು ನಿಲ್ಲಿಸಿ, ಕೈಕೆಳಗಿನ ಕೆಲವು ಜನರನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು, ಮನುಷ್ಯರ ವಸ್ತಿಯು ಎಲ್ಲಿಯಾದರೂ ಇರುವದೇನೆಂಬದರ ಶೋಧವನ್ನು ಮಾಡಹತ್ತಿದನು; ಆದರೆ ಆ ಪ್ರಾಂತದೊಳಗಿನ ಜನರು ಕಾಡು ಹಾಗೂ ಅಡ್ನಾಡಿಗಳಾಗಿರುವದಲ್ಲದೆ ನರಮಾಂಸ ಭಕ್ಷಕರಾಗಿರುವರೆಂದು ಅವನು ಕಂಡುಕೊಂಡನು. ಈ ಪ್ರಾಂತದೊಳಗಿನ ರೋಗೋತ್ಪಾದಕ ಹಾಗೂ ವಿಷಮಯವಾದ ಹವೆಯಿಂದ, ಅವನ ಸಂಗಡಿಗರು ತೀರ ಹಣ್ಣಿಗೆ ಬಂದು, ಪೇರೂ ದೇಶದ ಶೋಧದ ಉಸಾಬರಿಯನ್ನು ಬಿಟ್ಟುಕೊಟ್ಟು ಬಂದ ಹಾದಿಯಿಂದ ಮರಳಿ ಪನಾಮಕ್ಕೆ ಹೋಗಬೇಕೆಂದು ಪ್ರತಿಯೊಬ್ಬನೂ ಹಟ ಹಿಡಿಯಹತ್ತಿದನು. ಯಾವ ಕಾರ್ಯವನ್ನೂ ಸಾಧ್ಯಮಾಡಿಕೊಳ್ಳದೆ ಹಿಂದಿರುಗಿ ಹೋಗಿ ಎಲ್ಲರ ಛೀ ಥೂಗಳಿಗೆ ಗುರಿಯಾಗುವದರಕಿಂತ ಕ್ಷುಧೆ ತೃಷೆಗಳಿಂದ ಸಮುದ್ರದಲ್ಲಿ ಸಾಯುವದು ಲೇಸಾದದ್ದೆಂದು ಪಿಝಾರೋನ ಸಂಕಲ್ಪವಾಗಿದ್ದರಿಂದ, ಮರಳಿ ಹೋಗುವದಕ್ಕೆ ಒಪ್ಪಿಗೊಳ್ಳದೆ ಅವನು ಎಷ್ಟೋ ತಿಂಗಳಗಳ ವರೆಗೆ ಒಂದು ನಡುಗಡ್ಡೆಯಲ್ಲಿ ತಳವನ್ನೂರಿಕೊಂಡು ನಿಂತನು.

ತನ್ನ ಸಂಗಡಿಗರಲ್ಲಿ ತೀರ ಅಸಂತುಷ್ಟರಾಗಿದ್ದ ಕೆಲವರನ್ನು ಅವನು ಪಾನಾಮಾಕ್ಕೆ ಹೋಗಗೊಟ್ಟನು. ಗಟ್ಟಿಯಾದದ್ದೊಂದು ಹೊಸ ಹಡಗವನ್ನೂ ಕೆಲವು ನಾವಿಕರನ್ನೂ ತನ್ನ ಸಹಾಯ್ಯಕ್ಕಾಗಿ ಕಳಿಸಿಕೊಡುವದಕ್ಕೆ ತನ್ನ ಸಹಾಯ್ಯಕನಾದ ಅಲ್ಮಾಗ್ರೋನಿಗೆ ಅವನು ವಿನಂತಿಯನ್ನು ಮಾಡಿಕೊಂಡನು. ಈ ನಡುಗಡ್ಡೆಯಲ್ಲಿ ಪಿಝಾರೋನು ಆರು ತಿಂಗಳ ವರೆಗೆ ಇದ್ದನು. ಅವನ ಹತ್ತರದಲ್ಲಿದ್ದ ಜನರೆಲ್ಲರೂ ತೀರ ಜರ್ಜರಿತರಾಗಿದ್ದರು. ಅಲ್ಮಾಗ್ರೋನು ಸಹಾಯ್ಯಕನಾಗಿ ಬಂದಾಗ ಪಿಝಾರೋನ ಅನುಯಾಯಿಗಳಲ್ಲಿ ಎಷ್ಟೋ ಜನರು ಮರಳಿ ಹೋಗಲು ಉದ್ಯುಕ್ತರಾದರು. ಯಾಕಂದರೆ, ಪಿಝಾರೋನ ಬೆನ್ನುಹತ್ತಿ ನಿಷ್ಕಾರಣವಾಗಿ ಕಷ್ಟಪಡುವ, ಕಾಡಜನರ ಕೂಡ ನಿರರ್ಥಕವಾಗಿ ಹೋರಾಡುವ, ಹಾಗೂ ಕೊನೆಯಲ್ಲಿ ಯಾವದಾದರೊಂದು ಭಯಾನಕವಾದ ನಿರ್ಜನ ನಡುಗಡ್ಡೆಯಲ್ಲಾಗಲಿ, ಸಮುದ್ರ ದಂಡೆಯ ಮೇಲಿನ ಘೋರವಾದ ಅರಣ್ಯದಲ್ಲಾಗಲಿ, ಚಳಿಜ್ವರಕ್ಕೆ ಬಲಿಯಾಗಿ ಜೀವಕ್ಕೆ ಎರವಾಗುವ ಮಾರ್ಗವು ಯಾರಿಗೂ ಮಾನ್ಯವಾಗಿದ್ದಿಲ್ಲ. ಆದರೆ, ಪಿಝಾರೋನು ದೃಢನಿಶ್ಚಯಿಯೂ, ಹಟವಾದಿಯೂ ಆದ್ದರಿಂದ ಮರಳಿ ಹೋಗುವದಕ್ಕೆ ಅವನು ಒಪ್ಪಿಕೊಳ್ಳಲಿಲ್ಲ. ಅವನು ತಳವೂರಿಕೊಂಡು ನಿಂತಿದ್ದ ಪ್ರದೇಶದೊಳಗಿನ ಕಾಡು ಇಂಡಿಯನ್ ಜನರಿಂದ, ದಕ್ಷಿಣದಿಕ್ಕಿಗೆ ದೂರ ಅಂತರದಲ್ಲಿ ಬಲಾಢ್ಯವಾದದ್ದೊಂದು ಸಮೃದ್ಧಿಮಯವಾದ ರಾಜ್ಯವಿರುವದೆಂದು ಕೇಳಿಕೊಂಡಿದ್ದನು. ಸುಮಾರು ಸಾವಿರ ಮೈಲಗಳ ಅಂತರದ ಮೇಲಿರುವ ಈ ರಾಜ್ಯದ ಶೋಧವಾಗಿ ಅಲ್ಲಿಯ ಸಂಪತ್ತಿಯು ತನ್ನ ಹಸ್ತಗತವಾಗುವ ವರೆಗೆ ತನ್ನ ಪರ್ಯಟನದ ಸಾರ್ಥಕವಾದಂತಾಗುವದಿಲ್ಲೆಂದು ಪಿಝಾರೋನು ತಿಳಿದಿದ್ದನು. ಅವನು ತನ್ನ ಕೈಯ್ಯಲ್ಲಿದ್ದ ಖಡ್ಗದಿಂದ ಭೂಮಿಯ ಮೇಲೆ ಒಂದು ಗೆರೆಯನ್ನು ಕೊರೆದು, ಈ ಗೆರೆಯ ಉತ್ತರ ದಿಕ್ಕಿನಲ್ಲಿ ಸುಖವೂ, ಸಮಾಧಾನವೂ, ಸ್ವಾಸ್ಥ್ಯವೂ ಆದರೆ ಸರ್ವಸಾಧಾರಣವಾದ ಬಡತನವಿರುವವೆಂತಲೂ ದಕ್ಷಿಣ ದಿಕ್ಕಿನಲ್ಲಿ ದುಃಖವೂ, ಕಷ್ಟವೂ, ಭೀತಿಯೂ ಇದ್ದಾಗ್ಯೂ ಕೆಲವು ಕಾಲವನ್ನು ಸಂಕಟಗಳಲ್ಲಿ ಕಳೆದರೆ, ಪೇರೂ ದೇಶದೊಳಗಿನ ಅಪರಂಪಾರವಾದ ಸಂಪತ್ತಿಯು ತಮ್ಮ ಕೈವಶವಾಗುವದಲ್ಲದೆ, ಕದಾಚಿತ್ ತಮಗೆ ಅಲ್ಲಿ ರಾಜ್ಯವನ್ನು ಕೂಡ ಸ್ಥಾಪಿಸುವದು ಶಕ್ಯವಾಗಬಹುದೆಂತಲೂ ವರ್ಣಿಸಿ,

ತಾನಂತೂ ತನ್ನ ಜೀವದಲ್ಲಿ ಜೀವವಿರುವವರೆಗೆ ಪೇರೂ ದೇಶವನ್ನು ಗೊತ್ತು ಹಚ್ಚದ ಹೊರತು ಒಂದು ಹೆಜ್ಜೆಯನ್ನಾದರೂ ಹಿಂದೆ ಇಡಲಿಕ್ಕಿಲ್ಲೆಂದು ಹೇಳಿ, ಆ ಗೆರೆಯ ದಕ್ಷಿಣ ದಿಕ್ಕಿಗೆ ಹಾರಿ, ಹುಟ್ಟಿ ಗಂಡಸರಾದವರು ತನ್ನ ಮಾರ್ಗವನ್ನು ಅವಲಂಬಿಸುವರು, ಕೈಯಲ್ಲಿ ಬಳೆಗಳನ್ನಿಕ್ಕಿದವರು ಉತ್ತರ ದಿಕ್ಕಿಗೆ ಹೋಗಿ ಕೋಳಿಗಳಂತೆ ಗೂಡು ಸೇರುವರೆಂದು ಪಿಝಾರೋನು ಗಟ್ಟಿಸಿ ಒದರಿದ ಕೂಡಲೆ, ಅವನ ಅನುಯಾಯಿಗಳೊಳಗಿನ ಧಷ್ಟಪುಷ್ಟರೂ ತರುಣರೂ ಆಗಿದ್ದ ನಾವಿಕರು ಅವನನ್ನು ಹಿಂಬಾಲಿಸಿದರು. ನಿನ್ನ ಉಸಾಬರಿಯು ಬೇಡೆಂದು ನೆಲಹಿಡಿದು ಕೂತ ೫೦-೬೦ ನಾವಿಕರಲ್ಲಿ ಕೆಲವರಿಗೆ ಅಲ್ಲಿಯೇ ಒಂದು ನಡುಗಡ್ಡೆಯಲ್ಲಿ ಇರಹೇಳಿ ಉಳಿದವರನ್ನು ಪಾನಾಮಾಕ್ಕೆ ಅಟ್ಟಿಕೊಟ್ಟನು. ಗೋರ್ಗೋನಾ ನಡುಗಡ್ಡೆಯಲ್ಲಿ, ತನ್ನ ಮುಂದಿನ ಪ್ರಯಾಣದ ವ್ಯವಸ್ಥೆಯನ್ನು ಮಾಡಿಕೊಂಡು ಪಿಝಾರೋನು ತನ್ನ ಹಡಗವನ್ನು ದಕ್ಷಿಣ ದಿಶಾಭಿಮುಖವಾಗಿ ಸಾಗಿಸಿದನು. ಈ ಸಾರೆ ಬಿರುಗಾಳಿಯ ತೊಂದರೆಯಿಲ್ಲದ್ದರಿಂದ ಇಪ್ಪತ್ತನೇ ದಿವಸ ಈ ಹಡಗವು ಪೇರೂ ದೇಶದೊಳಗಿನ ಗ್ವಾಯಕೀಲ ಎಂಬ ಆಖಾತವನ್ನು ಸೇರಿತು. ಮುಂದೆ ಸ್ವಲ್ಪಾವಧಿಯಲ್ಲಿಯೇ ಪಿಝಾರೋನ ಹಡಗವು ಟುಂಬೇಝು ಎಂಬ ಬಂದರದಲ್ಲಿ ಬಂದು ನಿಂತಿತು. ಟುಂಬೇಝುವು ಜನರಿಂದ ಒಳಿತಾಗಿ ತುಂಬಿದ ಪಟ್ಟಣವಾಗಿತ್ತು. ಅದರ ಸಾಂಪತ್ತಿಕಸ್ಥಿತಿಯಾದರೂ ಸಮಾಧಾನಕಾರಕವುಳ್ಳದ್ದಾಗಿತ್ತು. ಈ ಪಟ್ಟಣವನ್ನು ನೋಡಿದ ಕೂಡಲೆ ಪಿಝಾರೋನಿಗೆ ಅತ್ಯಂತ ಆನಂದವಾಗಿ, ಪೇರೂ ದೇಶದ ಸುವರ್ಣ ಭೂಮಿಯಲ್ಲಿ ತನ್ನನ್ನು ತಂದದ್ದಕ್ಕಾಗಿ ಈಶ್ವರನ ಕೃಪೆಯನ್ನು ಕೊಂಡಾಡಿದನು. ಸ್ಪಾನಿಆರ್ಡ ಜನರ ಹಡಗಗಳಂಥ ಹಡಗಗಳನ್ನು ಪೇರೂವಿನ ಜನರು ಮೊದಲು ಎಂದೂ ನೋಡಿದ್ದಿಲ್ಲ. ಪಿಝಾರೋನ ಹಡಗವು ಬಂದರದಲ್ಲಿ ಬಂದಕೂಡಲೆ, 'ಬಾಲ್ಸಾ' ಎಂಬ ಚಿಕ್ಕ ಚಿಕ್ಕ ಡೋಣಿಗಳಲ್ಲಿ ಕುಳಿತುಕೊಂಡು ಆ ಜನರು ಆ ದೊಡ್ಡ ಹಡಗದ ಸುತ್ತು ಗುಂಪಾದರು. ಟುಂಬೇಝುದ ಸುತ್ತಲಿನ ಪ್ರಾಂತದ ಮೇಲೆ 'ಕುರಾಕಾ' ಎಂಬವನೊಬ್ಬ ಇಂಕಾರಾಜನ ಅಧಿಕಾರಿಯಿದ್ದನು. ಸ್ಪಾನಿಆರ್ಡರ ಹಡಗವನ್ನು ನೋಡಿ ಇದೊಂದು ನೀರಿನ ಮೇಲೆ ತೇಲುವ ಕಿಲ್ಲೆಯಂತಲೇ ಅವನಿಗೆ ಜ್ಞಾನವಾಗಿ, ಇಂಥ ದೊಡ್ಡದಾದ ತೇಲುವ ಕಿಲ್ಲೆಯನ್ನು ತೆಗೆದುಕೊಂಡು, ಈ ಅಮರ್ಯಾದಿತವಾದ ಮಹಾಸಾಗರ

ದೊಳಗಿಂದ ನಮ್ಮ ದೇಶಕ್ಕೆ ಈ ಜನರು ಬಂದರೆಂದವೇಲೆ, ಇವರು ನಿಸ್ಸಂಶಯವಾಗಿ ದೇವ, ಯಕ್ಷ, ಗಂಧರ್ವ, ಕಿನ್ನರರಂಥ ಉಚ್ಚಕೋಟಿಯವರಾಗಿರಬೇಕೆಂದು ಅವನು ತರ್ಕಿಸಿ, ಅನೇಕ ಪ್ರಕಾರದ ಹಣ್ಣುಹಂಪಲುಗಳ ಬುಟ್ಟಿಗಳನ್ನು ಕಾಣಿಕೆಗಾಗಿ ಡೋಣಿಯಲ್ಲಿ ತುಂಬಿಕೊಂಡು, ಸ್ಪಾನಿಶ ಹಡಗದಲ್ಲಿದ್ದ ಪಿಝಾರೋನ ದರ್ಶನಕ್ಕೆ ಹೋದನು. ಲಾಮಾ ಎಂಬ ಹೆಸರಿನ ದೊಡ್ಡ ಜಾತಿಯ ಟಗರುಗಳು ಆ ದೇಶದಲ್ಲಿ ದೊರೆಯುತ್ತವೆ. ಈ ಜಾತಿಯದೊಂದು ಟಗರನ್ನಾದರೂ ಅವನು ಪಿಝಾರೋನಿಗೆ ಕಾಣಿಕೆಯಾಗಿ ಕೊಟ್ಟನು. ಪಿಝಾರೋನು ತದ್ದೇಶೀಯರಲ್ಲಿ ಒಬ್ಬಿಬ್ಬರನ್ನು ಹಿಡಿದು ತನ್ನ ಸಂಗಡ ತಂದಿದ್ದನು. ಪಿಝಾರೋನು ಹಿಂದಕ್ಕೊಮ್ಮೆ ನಿರುಪಾಯವುಳ್ಳವನಾಗಿ ಆರು ಏಳು ತಿಂಗಳಗಳವರೆಗೆ ಒಂದು ನಡುಗಡ್ಡೆಯಲ್ಲಿ ವಾಸ್ತವ್ಯಮಾಡಿಕೊಂಡಿದ್ದ ಸಂಗತಿಯು ವಾಚಕರಿಗೆ ಗೊತ್ತೇ ಉಂಟು. ಆ ನಡುಗಡ್ಡೆಯ ಸುತ್ತಲಿನ ಪ್ರದೇಶದಲ್ಲಿ ವಾಸಮಾಡಿಕೊಂಡಿದ್ದ ಇಂಡಿಯನ ಕುಲಕ್ಕೆ ಈ ಉಭಯತರೂ ಸೇರಿದವರಾಗಿದ್ದರು. ಇವರಲ್ಲಿ ಒಬ್ಬನಿಗೆ ಪೇರೂದೊಳಗಿನ ಇಂಕಾ ಕ್ಷತ್ರಿಯರ ಭಾಷೆಯು ತಿಳಿಯುತ್ತಿತ್ತು. ಈ ದ್ವಿಭಾಷಿಯ ದ್ವಾರದಿಂದ ಪಿಝಾರೋ ಹಾಗೂ ಪೇರೂ ಜನರ ಅಧಿಕಾರಿಯಾದ ಕುರಾಕಾ ಇವರ ಸಂಭಾಷಣಕ್ಕೆ ಪ್ರಾರಂಭವಾಯಿತು. ಕುರಾಕಾ ಪಿಝಾರೋನಿಗೆ "ನೀವು ಯಾರು, ಎಲ್ಲಿಯವರು, ಯಾವ ಕಾರ್ಯಾರ್ಥ ಇಲ್ಲಿಗೆ ಬಂದಿರುವಿರಿ" ಮುಂತಾದ ಪ್ರಶ್ನೆಗಳನ್ನು ಕೇಳಿದನು. "ನಾವು ಇಲ್ಲಿಂದ ಬಹಳ ದೂರದಲ್ಲಿರುವ ಸ್ಪೇನ ದೇಶದ ನಿವಾಸಿಗಳಾಗಿದ್ದು, ನಿಮ್ಮ ದೇಶದ ಜನರ ಪರಿಚಯವನ್ನು ಮಾಡಿಕೊಳ್ಳುವದಕ್ಕಾಗಿಯೂ ನಿಮ್ಮ ಕೂಡ ಸ್ನೇಹಸಂಬಂಧವನ್ನು ಬೆಳಿಸುವದಕ್ಕಾಗಿಯೂ ಇಷ್ಟು ಕಷ್ಟಾಪೇಷ್ಟೆಗಳನ್ನು ಸಹಿಸಿ ಇಲ್ಲಿಗೆ ಬಂದಿರುವೆವೆ"ಂದು ಪಿಝಾರೋನು ಅವನಿಗೆ ತಿಳಿಸಿದನು. ಹೊಸದಾಗಿ ಬಂದಿರುವ ಈ ದೂರದೇಶದ ಅತಿಥಿಗಳು ಬಹಳೇ ಸಂಭಾವಿತರಾಗಿರುವರೆಂದು ಪಾಪ, ಆ ಬಡ ಭೋಳೆ ಕುರಾಕಾನ ತಿಳುವಳಿಕೆಯಾಯಿತು. ಇದೇ ಕಾಲಕ್ಕೆ ಇಂಕಾ ಕ್ಷಾತ್ರಕುಲಕ್ಕೆ ಹೊಂದಿದ ಒಬ್ಬ ಸರದಾರನಾದರೂ ಸಹಜವಾಗಿ ಟುಂಬೇಝುಪಟ್ಟಣಕ್ಕೆ ಬಂದಿದ್ದನು. ಇವನಾದರೂ ಪಿಝಾರೋನ ಭೆಟ್ಟಿಗೆ ಹೋದನು. ಆಗ್ಗೆ ಪಿಝಾರೋನು ಸ್ವಲ್ಪ ಸ್ಪಷ್ಟವಾಗಿಯೇ ಮಾತಾಡಿ

ಇವನಿಗೆ ತಿಳಿಸಿದ್ದೇನಂದರೆ, “ ನಿಮ್ಮ ದೇಶದ ಮೇಲೆ ನಮ್ಮ ದೇಶದ ವರ್ಚಸ್ಸ ವನ್ನು ಸ್ಥಾಪಿಸುವದಕ್ಕಾಗಿಯೂ, ನಿಮ್ಮ ಧರ್ಮದ ಮೇಲೆ ನಮ್ಮ ಧರ್ಮದ ವರ್ಚಸ್ಸವನ್ನು ಸ್ಥಾಪಿಸುವದಕ್ಕಾಗಿಯೂ ನಾವು ಇಷ್ಟು ದೂರ ಬಂದಿರು ತ್ತೇವೆ. ” ಪಿಝಾರೋನ ಈ ಭಾಷಣವನ್ನು ಕೇಳಿ ಈ ಇಂಕಾನಿಗೆ ಆಶ್ಚರ್ಯ ವೆನಿಸಿತು ಯಾಕೆಂದರೆ, ಪಿಝಾರೋನ ಸಂಗಡ ನೂರು ನೂರಾಐವತ್ತು ಜನರೇ ಇದ್ದರು ಅಂದ ಮೇಲೆ ಇಂಕಾನ ರಾಜ್ಯದ ಮೇಲೆ ವರ್ಚಸ್ಸವನ್ನು ಕೂಡಿಸುವ ಪಿಝಾರೋನ ಮನೀಷೆಯು ಕೇವಲ ಮೂರ್ಖತನದ್ದೆಂದು ಆ ಇಂಕಾನಿಗೆ ತೋರಿತು. ಮೇಲಾಗಿ ಇಂಕಾ ಜನರು ಸೂರ್ಯೋಪಾಸಕ ರಾಗಿದ್ದು ಸೂರ್ಯನಿಗಿಂತ ಹೆಚ್ಚಿನ ದೇವರಿರುವದು ಶಕ್ಯವಿಲ್ಲ; ಅಂದಮೇಲೆ ಇಂಕಾನ ಪ್ರಜರ ಮೇಲೆ ಈ ಹೊಸ ಧರ್ಮದ ವರ್ಚಸ್ಸವು ಕೂಡುವದು ಅಶಕ್ಯವಾದದ್ದೆಂದು ಅವನು ಯೋಚಿಸಿದನು. ಆದರೆ, ಇವನು ಪಿಝಾರೋ ನಿಗೆ ಯಾವ ಮಾತನ್ನೂ ಸ್ಪಷ್ಟವಾಗಿ ಮಾತಾಡಿ ತೋರಿಸಲಿಲ್ಲ. ಹಡಗದ ಮೇಲೆ ಬಂದಿದ್ದ ಈ ಇಂಕಾನಿಗೆ ಪಿಝಾರೋನು ಆತಿಥ್ಯವನ್ನು ಮಾಡಿದನು. ಪಿಝಾರೋನಿಂದ ಕೊಡಲ್ಪಟ್ಟ ಯುರೋಪಿಯನ್ ಮಾದರಿಯ ಮದ್ಯವು ತನಗೆ ವಿಶೇಷವಾಗಿ ರುಚಿಸಿತೆಂದು ಇಂಕಾನು ಹೇಳಿದನು. ಇಂಕಾನು ಬಂದರದ ಮೇಲಿಂದ ಮರಳಿ ಹೋಗುವಾಗ ಪಿಝಾರೋನು ಅವನಿಗೊಂದು ಉಕ್ಕಿನ ಕೊಡಲಿಯನ್ನು ಕಾಣಿಕೆಯಾಗಿ ಕೊಟ್ಟನು. ಇಂಕಾ ಜನರ ದೇಶ ದಲ್ಲಿ ಬಂಗಾರವು ಅಪರಂಪಾರವಾಗಿತ್ತು. ಆದರೆ ಅವರಿಗೆ ಕಬ್ಬಿಣವೆಂದರೇ ನೆಂಬದು ಕೂಡ ಗೊತ್ತಿದ್ದಿದ್ದಿಲ್ಲ. ಟುಂಬೇಝು ಪಟ್ಟಣದ ಪರಿಸ್ಥಿತಿಯನ್ನು ಅವಲೋಕಿಸುವದಕ್ಕೆ ಪಿಝಾರೋನು ತನ್ನ ಸಂಗಡಿಗನಾದ ಮೊಲಿನೋ ಎಂಬವನಿಗೆ ಹೇಳಿ ಅವನನ್ನು ಆ ಪಟ್ಟಣಕ್ಕೆ ಕಳುಹಿಕೊಟ್ಟನು. ಮೊಲಿನೋನು ಇಡಿಯ ಊರುತುಂಬ ತಿರುಗಾಡಿ, ಊರೊಳಗಿನ ದೇವಾ ಲಯಗಳನ್ನೂ ಕುರಾಕಾ ಅಧಿಕಾರಿಯು ಇರುತ್ತಿದ್ದ ಬಂಗಲೆಯನ್ನೂ ನೋಡಿ ದನು; ಹಾಗೂ ಇಂಕಾನು ಇಳಿದುಕೊಂಡಿದ್ದ ತೋಟವನ್ನೂ ಕೂಡ ಅವನು ಪ್ರವೇಶಿಸಿದನು. ಕುರಾಕಾನಂಥ ಸಣ್ಣ ಅಧಿಕಾರಿಯ ಮನೆಯೊಳಗಿನ ತಿನ್ನು ಣ್ಣುವ ಹಾಗೂ ನೀರು ಕುಡಿಯುವ ಪಾತ್ರೆಗಳೆಲ್ಲ ಬೆಳ್ಳಿ-ಬಂಗಾರಗಳಿಂದ ಮಾಡಲ್ಪಟ್ಟದ್ದವು. ದೇವಾಲಯಗಳಲ್ಲಿ ನೋಡಿದತ್ತ ಬಂಗಾರದ ಹೊರತು

ಅವನಿಗೆ ಏನೂ ಕಾಣಲೇ ಇಲ್ಲ. ಇಂಕಾನ ತೋಟವಂತೂ ಕೇಳುವದೇನು? ಅಲ್ಲಿ ನಿಜವಾದ ಹಣ್ಣು ಹಂಪಲಗಳ ನೆರೆಯಲ್ಲಿ ಬೆಳ್ಳಿಬಂಗಾರದ ಕೃತ್ರಿಮ ಫಲಗಳು ತೂಗಾಡುತ್ತಿದ್ದವು. ಮಾಲಿನೋನು ಮರಳಿ ಬಂದು, ತಾನು ನೋಡಿದ ಸಂಗತಿಗಳನ್ನೆಲ್ಲ ಹಡಗದ ಮೇಲಿದ್ದ ಪಿಝಾರೋನಿಗೆ ವಿದಿತ ಮಾಡಿದನು. ತಾನು ಮಾಡಿದ ಅನುಮಾನದಕಿಂತ ಸ್ವಲ್ಪ ಹೆಚ್ಚು ಬೆಳ್ಳಿಬಂಗಾರವು ಮಾಲಿನೋನ ದೃಷ್ಟಿಗೆ ಬಿದ್ದಿರುವದರಿಂದ ಅವನ ಕಣ್ಣು ತಿರುಗಿ, ನೋಡಿದ ಸಂಗತಿಗಳ ವರ್ಣನೆಯನ್ನು ಅವನು ಅತಿಶಯೋಕ್ತಿಯಿಂದ ಮಾಡುತ್ತಿರಬಹುದೆಂದು ಪಿಝಾರೋನಿಗೆ ಸಂಶಯ ಹುಟ್ಟಿ, ಅವನು ತನ್ನ ಸಂಗಡದಲ್ಲಿದ್ದ ಬೇರೊಬ್ಬ ಶಾಂತತಲೆಯ ಗೃಹಸ್ಥನಿಗೆ ಪಟ್ಟಣದಲ್ಲಿ ಸಂಚರಿಸಿ ಬರುವದಕ್ಕೆ ಹೇಳಿದನು. ಈ ಗೃಹಸ್ಥನಾದರೂ, ಮೊದಲನೆಯವನಂತೆ, ನೋಡಿದ ಸಂಗತಿಗಳ ವರ್ಣನೆಯನ್ನು ವಿಲಕ್ಷಣವಾಗಿ ಮಾಡಹತ್ತಿದನು. ದೇವಾಲಯದ ಚತ್ತಂತೂ ಬಂಗಾರದ ದಪ್ಪಾದ ತಗಡುಗಳಿಂದ ಆಚ್ಛಾದಿತ ಮಾಡಲ್ಪಟ್ಟದೆಂದು ಅವನು ಹೇಳಹತ್ತಿದನು. ಆಗಂತೂ ತಾವು ನಿಜವಾದ ರಾವಣನ ಲಂಕೆಗೆ ಬಂದಿರುವೆವೆಂದು ಪಿಝಾರೋನಿಗೆ ಎನಿಸಹತ್ತಿತು. ಟುಂಬೇಝು ದಲ್ಲಿಯ ಇಂಕಾನಿಗೂ ಇತರ ಜನರಿಗೂ 'ಬಂದೂಕ' ಮೊದಲಾದ ಆಯುಧಗಳ ವಿಷಯವಾಗಿ ಏನೂ ಜ್ಞಾನವಿದ್ದಿಲ್ಲ. ಕುದುರೆಯನ್ನಂತೂ ಅವರು ಎಂದೂ ನೋಡಿದ್ದಿಲ್ಲ. ಪಿಝಾರೋನ ಹಡಗದಲ್ಲಿ ಕೆಲವು ಕುದುರೆಗಳಿದ್ದವು. ಕುದುರೆಯ ಮೇಲೆ ಕುಳಿತುಕೊಂಡ ಮನುಷ್ಯನು ಭರದಿಂದ ಹೋಗುವದನ್ನು ನೋಡಿದಾಗಂತೂ ಕುದುರೆ ಹಾಗೂ ಕುದುರೆಯ ಸವಾರನು ಒತ್ತಟ್ಟಿಗೆ ಕೂಡಿದ ಇದೊಂದು ವಿಲಕ್ಷಣವಾದ ಪ್ರಾಣಿಯೆಂತಲೇ ಅವರ ತಿಳುವಳಿಕೆಯಾಯಿತು! ಕುದುರೆ ಬೇರೆ, ಕುದುರೆಯ ಮೇಲಿನ ಸವಾರನು ಬೇರೆ ಎಂಬ ಕಲ್ಪನೆಯಾದರೂ ಅವರಿಗೆ ಆಗಲಿಲ್ಲ! ಬಂದೂಕಿನ ಮದ್ದೆಂದರೇನೆಂಬದು ಯಾರಿಗೆ ಗೊತ್ತಿಲ್ಲ, ಹಾಗೂ ಕುದುರೆಯ ಮೇಲೆ ಕೂಡುವ ಕಲೆಯು ಯಾರ ಸ್ವಪ್ನದಲ್ಲಿ ಕೂಡ ಇಲ್ಲ, ಇಂಥ ಪೇರುವಿನ ಜನರನ್ನು ಕ್ಷಣಾವಕಾಶದಲ್ಲಿ ಗೆಲ್ಲಬಹುದೆಂದು ಪಿಝಾರೋನ ಮನವರಿಕೆಯಾಗಿ, ಕಟ್ಟಿಗೆಯಂತೆ ಬಂಗಾರವು ವಿಪುಲವಾಗಿದ್ದ ದೇಶವು ಸ್ವಲ್ಪ ಪ್ರಯಾಸದಿಂದ ತಮ್ಮ ಕೈವಶವಾಗುವದೆಂಬ ಕಲ್ಪನಾತರಂಗಗಳ ಆನಂದದಲ್ಲಿ ಅವನು ಕ್ಷಣಮಾತ್ರ ಈಸಾಡಹತ್ತಿ

ದನು. ಆದರೆ, ಈ ಮೊದಲನೆಯ ಪರ್ಯಟನದಲ್ಲಿ ಅವನ ಹತ್ತಿರ ನೂರು ನೂರೈವತ್ತು ಜನರೇ ಇದ್ದರು. ಇಂಕಾನ ಸಾಮ್ರಾಜ್ಯವು ಎರಡುಸಾವಿರದ ಐನೂರು ಮೈಲುಗಳ ವರೆಗೆ ಉದ್ದವಾದ ಹಾಗೂ ಮೂರುನೂರೈವತ್ತು ಮೈಲುಗಳ ವರೆಗೆ ಅಗಲವಾದ ವಿಸ್ತೀರ್ಣ ಪ್ರದೇಶದ ಮೇಲೆ ಹಬ್ಬಿದ್ದು ಅದರ ಜನಸಂಖ್ಯೆಯು ಕೋಟ್ಯಂತರವಾಗಿತ್ತು. ಬಂದೂಕುಗಳನ್ನು ಅವರು ಅರಿಯುವವರಾಗಿದ್ದರೂ ಇಂಕಾನ ಹತ್ತಿರ ಬಲಾಢ್ಯ ಸೈನ್ಯವಿದ್ದು ಅವನ ಪಟ್ಟಣಗಳು ಕೋಟೆಯ ಗೋಡೆಗಳಿಂದ ಪರಿವೇಷ್ಟಿತವಾಗಿದ್ದವು. ಈ ಸಂಗತಿಯು ಪಿಝಾರೋನ ಲಕ್ಷ್ಯಕ್ಕೆ ಬಂದದರಿಂದ, ಯುದ್ಧವನ್ನು ಮಾಡಿ ದೇಶವನ್ನು ಗೆದೆಯುವ ತನ್ನ ಉದ್ದೇಶವು ಹೊರಬೀಳಕೂಡದೆಂಬ ವಿಚಾರಮಾಡಿ, ಅವನು ತನ್ನ ಕೈಕೆಳಗಿನ ಜನರ ಸುವರ್ಣತೃಷ್ಣೆಯನ್ನು ತತ್ಕಾಲದ ಮಟ್ಟಿಗೆ ದಬ್ಬಿಟ್ಟು, ಮುಂದೆ ಹೆಚ್ಚಿನ ಸಿದ್ಧತೆಯನ್ನು ಮಾಡಿಕೊಂಡು ಬಲಾಢ್ಯವಾದ ಸೈನ್ಯವನ್ನು ತನ್ನ ಸಂಗಡ ತೆಗೆದುಕೊಂಡು ಬಂದು, ಆಬಳಿಕ ಈ ಸುವರ್ಣ ಭೂಮಿಯಲ್ಲಿರುವ ಜನರ ಮೇಲೆ ತನ್ನ ವರ್ಚಸ್ವವನ್ನು ಪ್ರಸ್ಥಾಪಿತ ಮಾಡುವ ನಿಶ್ಚಯವನ್ನು ಮಾಡಿ, ಪಿಝಾರೋನು ಈ ಸಾರೆ ಹಿಂದಿರುಗಿದನು. ಮರಳಿ ಹೋಗುವಾಗ ಅವನು ತನ್ನ ಸಂಗಡ ಆ ದೇಶದೊಳಗಿನ ಹಲಕೆಲವು ಬಂಗಾರದ ಬೇರೆ ಬೇರೆ ಮಾದರಿಯ ಪಾತ್ರೆಗಳನ್ನೂ ಲಾಮಾ ಜಾತಿಯ ಕೆಲವು ಕುರಿಗಳನ್ನೂ ತೆಗೆದುಕೊಂಡು ಹೋದನು

ಸನ್ ೧೫೨೮ರಿಂದ ೧೫೩೦ರ ವರೆಗೆ ಪಿಝಾರೋನು ಸ್ಪೇನದಲ್ಲಿದ್ದನು. ಹೊಸದಾಗಿ ಶೋಧಿಸಿದ ದೇಶದ ವರ್ಣನೆಯನ್ನೂ, ಅಲ್ಲಿಯ ಅಪಾರವಾದ ಸಂಪತ್ತಿಯ ವೃತ್ತಾಂತವನ್ನೂ ಪಿಝಾರೋನು ಆ ಕಾಲದ ಸ್ಪೇನದ ಅರಸನಾಗಿದ್ದ ಐದನೇ ಚಾರ್ಲಸನಿಗೆ ಹೇಳಿದನು. ಹರ್ನಾಂಡೋ ಕೋರ್ಟೆಸನು ಮೇಕ್ಸಿಕೋ ದೇಶವನ್ನು ಅಂಕಿತ ಮಾಡಿಕೊಂಡು, ಅದನ್ನು ಸ್ಪೇನದ ರಾಜ್ಯಕ್ಕೆ ಸೇರಿಸಿದಂತೆ, ತನಗಾದರೂ ಸರಕಾರದಿಂದ ಸ್ವಲ್ಪ ಸಹಾಯ್ಯವು ದೊರೆದರೆ, ಮೇಕ್ಸಿಕೋದಕಿಂತ ಹೆಚ್ಚು ಸಂಪನ್ನವಾದ ಹಾಗೂ ಹೆಚ್ಚು ವಿಸ್ತೀರ್ಣವಾದ ಪೇರೂ ದೇಶವನ್ನೂ ಇಂಕಾ ಎಂಬ ಸೂರ್ಯವಂಶೀ ಜನರ ಸಾಮ್ರಾಜ್ಯವನ್ನೂ ಸ್ಪೇನದ ರಾಜಮನೆತನದ ಚರಣಕ್ಕೆ ಅರ್ಪಿಸುವೆನೆಂಬ ಪ್ರತಿಜ್ಞೆಯನ್ನು ಅವನು ಅರಸನ ಮುಂದೆ ಮಾಡಿದನು. ಪಿಝಾರೋನ

ಈ ಮಾತು ಕೇಳಿ ಯಾವದೇ ದೇಶದ ಅರಸನ ಬಾಯಿಗೆ ನೀರುಬಿಡುವದು ಸ್ವಾಭಾವಿಕವಾದದ್ದು. ಚಾರ್ಲಸ ರಾಜನು ಪಿಝಾರೋನನ್ನು ಪೇರೂ ದೇಶದ ಗವ್ಹರ್ನರ ಹಾಗೂ ಕ್ಯಾಪ್ಟನ್ ಜನರಲ್‌ನನ್ನಾಗಿ ನೇಮಿಸಿ ದನು ಪಿಝಾರೋನ ಸಂಗಡಿಗನಾದ ಅಲ್ಮಾಗ್ರೋನು ಟುಂಬೇ ಝುದ ಕಮಾಂಡರನಾಗಿ ನೇಮಿಸಲ್ಪಟ್ಟನು. ಪಿಝಾರೋನು ಎರಡುನೂರಾ ಐವತ್ತು ಶಿಪಾಯರ ಪಲಟಣವನ್ನು ಸಿದ್ಧಮಾಡತಕ್ಕದ್ದು; ಈ ಪಲಟಣಿಗೆ ಬೇಕಾಗುವ ತೋಫುಗಳ ಹಾಗೂ ಮದ್ದುಗುಂಡುಗಳ ಸಹಾಯ್ಯವನ್ನು ಸ್ಪೇನ ಸರಕಾರದವರು ಮಾಡತಕ್ಕದ್ದು; ಹಾಗೂ ಪಾನಾಮಾಕ್ಕೆ ಹೋಗಿ ಮುಟ್ಟಿದ ಬಳಿಕ ಆರು ತಿಂಗಳಗಳಲ್ಲಿಯೇ ಪಿಝಾರೋನು ಪೇರೂ ದೇಶದ ಮೇಲೆ ಅವಶ್ಯವಾಗಿ ದಂಡೆತ್ತಿ ಹೋಗಬೇಕು; ಮುಂತಾದ ಕರಾರಗಳಾದವು. ಎರಡುನೂರೈವತ್ತು ಶಿಪಾಯರದೊಂದು ಪಲಟಣಿಯ ಸಹಾಯ್ಯದಿಂದ ಪೆರೂದಂಥ ವಿಸ್ತೀರ್ಣವಾದದ್ದೊಂದು ಪ್ರದೇಶ ವನ್ನು ಅಂಕಿತ ಮಾಡಿಕೊಳ್ಳಲು ಪುರುಷನೊಬ್ಬನು ಸಿದ್ಧನಾಗಬೇಕೆಂಬ ಮಾತು ಕೇಳುವದಕ್ಕೆ ಕೂಡ ವಿಸ್ಮಯಕಾರಕವಾದದ್ದು. ಆದರೆ, ಈಶ್ವರೇ ಚ್ಛೆಯ ಅಘಟಿತ ಲೀಲೆಗಳಿಗನುಸರಿಸಿ ಹಲಕೆಲವು ಸಂಗತಿಗಳು ಸಂಭವಿಸಿ ಬರತಕ್ಕವಾಗಿರುವದರಿಂದ, ಅಪ್ರಯೋಜಕಗಳೆಂದು ಕಂಡುಬರುವ ಸಾಧನ ಗಳಿಂದ ಅದ್ಭುತ ಸಂಗತಿಗಳು ಸಂಭವಿಸುತ್ತವೆಂದೆನ್ನಲಾರದೆ ಇರಲಾಗದು.

ಸ್ಪೇನ ದೇಶದ ರಾಜನಿಂದ ಪಿಝಾರೋನು ಅಪ್ಪಣೆಯನ್ನು ಪಡೆದು ಕೊಂಡು ಪಾನಾಮಾಕ್ಕೆ ಮರಳಿ ಬಂದನು; ಸನ್ ೧೫೩೧ನೇ ಇಸ್ವಿಯ ಜಾನೇವಾರಿಯಲ್ಲಿ ಪೇರೂ ದೇಶವನ್ನು ಅಂಕಿತ ಮಾಡಿಕೊಳ್ಳುವ ಉದ್ದೇಶ ದಿಂದ ದಂಡೆತ್ತಿ ಹೊರಟನು. ಟಂಬೇಝು ಪಟ್ಟಣವನ್ನು ಮುಟ್ಟುವದರ ಪೂರ್ವದಲ್ಲಿಯೇ ಅವನು ತನ್ನ ಜನರನ್ನು ಕೋಕ ಎಂಬ ಪ್ರಾಂತದಲ್ಲಿ ಇಳಿ ಸಿದನು. ಪಿಝಾರೋನ ಸಂಗಡ ಈ ಸಾರೆ ೬೦-೭೦ ಕುದುರೆಗಳ ಸವಾರ ರಿದ್ದರು. ಈ ಸವಾರರ ಭೀತಿಗಾಗಿ ಸಣ್ಣಪುಟ್ಟ ಹಳ್ಳಿಗಳೊಳಗಿನ ಜನರು ಓಡಹತ್ತಿದರು. ಹಳ್ಳಿಗಳು ತೆರವಾದಕೂಡಲೆ ಅವುಗಳನ್ನು ಅವನು ಸುಲಿ ದನು. ಈ ಸುಲಿಗೆಯಲ್ಲಿ ಹೇರಳವಾಗಿ ಬೆಳ್ಳಿ ಬಂಗಾರವೂ, ಪೂಗಿಫಲ ದಷ್ಟು ದೊಡ್ಡ ದೊಡ್ಡ ರತ್ನಗಳೂ ಅವನಿಗೆ ದೊರೆತವು. ಈ ಸುಲಿಗೆಯೊಳ

ಗಿನ ಒಂದು ಪಂಚಮಾಂಶಭಾಗವು ಸ್ಪೇನದ ಅರಸನದೆಂದು ಬೇರೆ ತೆಗೆಯು ಲ್ಪಟ್ಟು, ಉಳಿದ ದ್ರವ್ಯವು ಪಿಝಾರೋನ ಕೈಕೆಳಗಿನವರಲ್ಲಿ ಹಂಚಲ್ಪಟ್ಟಿತು. ಈ ಪ್ರಕಾರ ಪ್ರಥಮಾರಂಭದಲ್ಲಿಯೇ ತನ್ನ ಸೈನಿಕರನ್ನು ಬೆಳ್ಳಿ ಬಂಗಾರದಿಂದ ಸಂತೋಷಪಡಿಸಿ ಪೇರೂ ದೇಶದ ಮೇಲೆ ಸಾಮ್ರಾಜ್ಯಸತ್ತೆಯನ್ನು ನಡೆಸು ತ್ತಿದ್ದ ಇಂಕಾ ಎಂಬ ಹೆಸರಿನ ಕ್ಷತ್ರಿಯರ ಮುಖ್ಯ ರಾಜಧಾನಿಯಾಗಿದ್ದ ಕುಝ್ಕೋ ಪಟ್ಟಣದ ಮೇಲೆ ಹಲ್ಲಾ ಮಾಡುವ ವಿಚಾರವನ್ನು ಪಿಝಾರೋನು ಮಾಡಿದನು. ಈ ರಾಜಧಾನಿಯ ಪಟ್ಟಣವು ಅಂಡೀಜ ಪರ್ವತದ ಇಳಿವಾರ ದಲ್ಲಿ ಸಮುದ್ರ ದಂಡೆಯಿಂದ ದಕ್ಷಿಣಕ್ಕೆ ಒಳ್ಳೆ ಅಂತರದ ಮೇಲಿತ್ತು. ಟುಂಬೇಝುದಿಂದ ೧೦೦ ಮೈಲುಗಳ ಅಂತರದ ಮೇಲಿರುವ ಒಂದು ಆರೋ ಗ್ಯಕರವಾದ ಪ್ರದೇಶದಲ್ಲಿ ತನ್ನ ಠಾಣ್ಯವನ್ನೂರಿ ಅವನು ಅದಕ್ಕೆ ಸಾನ ಮಿಗ್ಯೂಏಲ (ಸೇಂಟ ಮಾಯಕೇಲ) ಎಂಬ ಖ್ರಿಸ್ತಿ ಸಾಧು ಪುರುಷನ ಹೆಸರು ಕೊಟ್ಟನು. ಈ ಸ್ಥಳದಿಂದ ಸ ೧೫೩೨ನೇ ಇಸ್ವಿಯ ಸಪ್ಟಂಬರ ತಿಂಗಳದ ೨೪ನೇ ತಾರೀಖಿನ ದಿವಸ ಪಿಝಾರೋನು ತನ್ನ ಸಂಗಡ ೨೦೦ ಶಿಪಾಯರನ್ನು ತೆಗೆದುಕೊಂಡು ಇಂಕಾನ ಬಲಾಢ್ಯವಾದ ಸಾಮ್ರಾಜ್ಯದ ಮೇಲೆ ದಂಡೆತ್ತಿ ಹೊರಟನು.

ಪಿಝಾರೋನ ಈ ಮುಂದಿನ ವೃತ್ತಾಂತವನ್ನು ಕೊಡುವದರ ಮುಂಚಿ ತವಾಗಿ ಅವನು ಯಾವ ದೇಶದ ಮೇಲೆ ಸಾಗಿಹೋಗಬೇಕೆಂದು ಮಾಡಿ ದ್ದನೋ ಆ ದೇಶದ, ಅಲ್ಲಿಯ ಲೋಕಸ್ಥಿತಿಯ ಹಾಗೂ ಅಲ್ಲಿಯ ಸಾಮ ರ್ಥ್ಯದ ಇಲ್ಲವೆ ಬಲಾಬಲದ ದಿಗ್ದರ್ಶನವನ್ನು ಅಲ್ಪದರಲ್ಲಿ ಮಾಡುವದು ಅವಶ್ಯವಾಗಿದೆ. ಇಂಕಾನ ರಾಜ್ಯದೊಳಗಿನ ಜನರು ಅಜ್ಞಾನಿಗಳಾಗಿರದೆ, ಒಳಿತಾಗಿ ಸುಧಾರಿಸಿದವರಾಗಿದ್ದರು. ಅವರಿಗೆ ಲೇಖನ ಕಲೆಯು ಅವಗತ ವಿದ್ದಿಲ್ಲ. ಆದರೂ ಲಿಪಿಯ ಬದಲು ಬಣ್ಣದ ದಾರಗಳಿಗೆ ಗಂಟುಗಳನ್ನು ಹಾಕಿ, ಹಾಗೂ ಭಿನ್ನ ಭಿನ್ನ ಬಣ್ಣಗಳಿಂದ ಭಿನ್ನ ಭಿನ್ನ ಅರ್ಥಗಳ ಕಲ್ಪನೆಗಳ ನ್ನಾಗಲಿ, ಪದಾರ್ಥಗಳನ್ನಾಗಲಿ ತೋರಿಸತಕ್ಕದ್ದೆಂಬ ಪ್ರಕಾರದ ಪದ್ಧತಿ ಯನ್ನು ನಿಶ್ಚಯಿಸಿ, ಅವರು ಗಣಿತವನ್ನು ಮಾಡುತ್ತಿದ್ದರು. ಈ ಭಿನ್ನಭಿನ್ನ ಬಣ್ಣದದಾರಗಳ ಹೆಣಿಕೆಯಿಂದ ಅವರ ಪತ್ರವ್ಯವಹಾರವೂ ಪರಸ್ಪರರ ವಿಚಾರ ವಿನಿಮಯದ ವ್ಯವಹಾರವೂ ನಡೆಯುತ್ತಿದ್ದವು. ಈ ಪದ್ಧತಿಗೆ 'ಕ್ವಿಪ್ಸ'

ಎಂಬ ಸಂಜ್ಞೆಯಿತ್ತು. ಸರಕಾರ ದರಬಾರದ ದಪ್ತರವೆಲ್ಲ ಈ 'ಕ್ವಿಪ್ಸ' ಪದ್ಧತಿಯಿಂದಲೇ ಇಡಲ್ಪಡುತ್ತಿತ್ತು. ಬೇರೆ ಬೇರೆ ಬಣ್ಣಗಳ ದಾರಗಳಿಂದ ತಮ್ಮ ವಿಚಾರಗಳನ್ನು ಗ್ರಥಿತ ಮಾಡುವ ಪದ್ದತಿಯು ಲೇಖನ ಕಲೆಯಕಿಂತ ಅಸಂಸ್ಕೃತವಾದದ್ದೆಂಬ ಮಾತು ನಿಜವು. ಆದರೆ, ಇಂಕಾನ ರಾಜ್ಯದ ವ್ಯವಹಾರವೆಲ್ಲ ಇದೇ ಪದ್ಧತಿಯಿಂದ ಚನ್ನಾಗಿ ನಡೆಯುತ್ತಿತ್ತೆಂದು ಸ್ಪಾನಿಆರ್ಡರು ಸರಟಿಫಿಕೇಟ ಕೊಟ್ಟಿದ್ದಾರೆ. ಅಂದಮೇಲೆ 'ಕ್ವಿಪ್ಸ' ಪದ್ಧತಿಯು ಸರ್ವತೋಪರಿ ತ್ಯಾಜ್ಯವಾಗಿತ್ತೆಂದು ಅನ್ನುವ ಧಾರ್ಷ್ಟ್ಯವನ್ನು ಯುರೋಪಿಯನ್ ಇತಿಹಾಸಕಾರರೂ ಕೂಡ ಮಾಡುವದಿಲ್ಲ ಲೇಖನ ವಾಚನಗಳ ಕಲೆಗಳಲ್ಲಿ ಪೇರೂ ಜನರು ಹಿಂದುಳಿದಿದ್ದರೂ ಉಳಿದ ಸಂಗತಿಗಳಲ್ಲಿ ಅವರ ಪ್ರಗತಿಯು ಚನ್ನಾಗಿತ್ತು. ಒಕ್ಕಲತನದಲ್ಲಿ ಅವರು ಒಳಿತಾಗಿ ಪಾರಂಗತವನ್ನು ಹೊಂದಿದ್ದರು. ರೋಮನ್ ಜನರು ಪ್ರಾಚೀನ ಕಾಲದಲ್ಲಿ ಕಟ್ಟಿದಂಥ ದೊಡ್ಡ ದೊಡ್ಡ ಮಾರ್ಗಗಳು ಪೇರೂ ದೇಶದಲ್ಲಿದ್ದವು ಪೇರೂ ದೇಶವು ಅಂಡೀಜ ಪರ್ವತದ ಅತ್ಯುಚ್ಚ ಶಿಖರಗಳಿಂದ ಇಳಿಯುತ್ತಿಳಿಯುತ್ತ ಪಾಸಿಫಿಕ ಮಹಾಸಾಗರದ ದಂಡೆಯ ವರೆಗೆ ಹಬ್ಬಿಕೊಂಡಿದೆ. ಇದರಿಂದ ಪೇರೂ ದೇಶದಲ್ಲಿ ಮಾರ್ಗ ನಡೆಯುವದು ವಸ್ತುತಃ ಬಹಳ ಕಠಿಣವಾಗಿರಬೇಕು. ಆದರೂ ಪರ್ವತದ ಹೊದರುಗಳೊಳಗಿಂದ ಶಿಖರದ ವರೆಗೆ ದೊಡ್ಡ ದೊಡ್ಡ ಮಾರ್ಗಗಳನ್ನು ಇಂಕಾ ಜನರು ಕಟ್ಟಿದ್ದಾರೆ. ಒಕ್ಕಲತನದ ಅಭಿವೃದ್ಧಿಗಾಗಿ ದೊಡ್ಡ ದೊಡ್ಡ ಕಾಲುವೆಗಳನ್ನು ಕಟ್ಟುವ ಕಲೆಯಾದರೂ ಅವರಿಗೆ ವಿಶೇಷವಾಗಿ ಗೊತ್ತಿತ್ತು. ಇಂಕಾ ಜನರು ಪೇರೂ ದೇಶದಲ್ಲಿ ಕಟ್ಟಿದ ಕಾಲುವೆಗಳು ಭೂಮಿಯ ಮೇಲೆ ಹರಿಯದೆ, ಭೂಮಿಯ ಪೃಷ್ಠಭಾಗದ ಕೆಳಗಿಂದ ಹರಿಯುತ್ತವೆ. ಈ ಕಾಲುವೆಯೊಳಗಿನ ನೀರು ಒಕ್ಕಲಿಗರಿಗೆ ತೊಂದರೆಯಿಲ್ಲದಂತೆ ದೊರೆಯುತ್ತಿತ್ತು. ಪೇರೂ ದೇಶದಲ್ಲಿ ಆನೆ, ಕುದುರೆ, ಒಂಟೆ ಮುಂತಾದ ಪಶುಗಳು ದೊರೆಯುತ್ತಿದ್ದಿಲ್ಲ; ಆದರೂ ಲಾಮಾ ಎಂಬ ಹೆಸರಿನದೊಂದು ಪಶುವಿತ್ತು. ಅದಕ್ಕೆ ಕುರಿಯೆನ್ನಬೇಕೋ ಒಂಟೆಯೆನ್ನಬೇಕೋ ಎಂಬುದರ ಬಗ್ಗೆ ಸ್ಪಾನಿಶ ಜನರ ಮನಸ್ಸಿನಲ್ಲಿ ಸಂದೇಹ ಉತ್ಪನ್ನವಾಯಿತು. ಈ ಲಾಮಾ ಪಶುವಿನ ಮೈಮೇಲೆ ಮೃದುವಾದ ಹಾಗೂ ಬೆಚ್ಚಗಾದ ಉಣ್ಣೆಯು ದೊರೆಯುತ್ತದೆ. ಒಂಟೆಯಂತೆ ಎಂಟೆಂಟು ದಿವಸಗಳ

ವರೆಗೆ ಕೂಳು ಸೇರಿಲ್ಲದೆ ಈ ಲಾಮಾ ಪ್ರಾಣಿಯು ಗುಡ್ಡಗಾಡ ಪ್ರದೇಶದಲ್ಲಿ ಪ್ರವಾಸವನ್ನು ಮಾಡುತ್ತದೆ. ಆದಕ್ಕಾಗಿ ಸ್ಪಾನಿಆರ್ಡರು ಇದಕ್ಕೆ 'ಚಿಕ್ಕ ಒಂಟೆ' ಎಂಬ ಹೆಸರು ಕೊಟ್ಟಿದ್ದಾರೆ. ಈ ಲಾಮಾ ಪಶುಗಳ ದೊಡ್ಡ ದೊಡ್ಡ ಹಿಂಡುಗಳು ಪೇರೂ ದೇಶದಲ್ಲಿ ದೊರೆಯುತ್ತವೆ. ಲಾಮಾ ಪ್ರಾಣಿಯು ಮೈಮೇಲಿರುವ ಉಣ್ಣೆಯಿಂದ ಬೆಚ್ಚಗಿನ ಹಾಗೂ ನೋಟಕ್ಕೆ ಸುಂದರವಾದ ಬಟ್ಟೆಗಳಾಗುತ್ತವೆ. ಇಂಕಾ ಕ್ಷತ್ರಿಯರು ಇವೇ ವಸ್ತ್ರಗಳನ್ನು ಉಪಯೋಗಿಸುತ್ತಿದ್ದರು. ಇಂಕಾ ಕ್ಷತ್ರಿಯರು ತಾವು ಸೂರ್ಯವಂಶಿಗಳೆಂದು ಮನ್ನಿಸುತ್ತಿದ್ದರು, ಹಾಗೂ ಸೂರ್ಯನು ಅವರ ಆರಾಧ್ಯ ದೈವತನಾಗಿದ್ದನು. ಇಂಕಾನ ವಿಸ್ತೀರ್ಣವಾದ ಸಾಮ್ರಾಜ್ಯದಲ್ಲಿ ಸೂರ್ಯೋಪಾಸನೆಯ ಸಲುವಾಗಿ ಅನೇಕ ದೇವಾಲಯಗಳು ಕಟ್ಟಿಸಲ್ಪಟ್ಟಿದ್ದವು. ಸೂರ್ಯನಂತೆ ಚಂದ್ರ, ಶುಕ್ರ ಮುಂತಾದ ಗ್ರಹಗಳನ್ನಾದರೂ ದೇವತೆಗಳೆಂದು ಅವರು ಪೂಜಿಸುತ್ತಿದ್ದರು ಮಿಂಚು ಹಾಗೂ ಇಂದ್ರಧನುಷ್ಯಗಳಾದರೂ ದೈವೀ ಶಕ್ತಿಯ ಸೂಚಕಗಳೆಂದು ಅವು ಅವರಿಗೆ ಪೂಜ್ಯವಾಗಿದ್ದವು. ಫಲ, ಪುಷ್ಪ, ಧಾನ್ಯ, ಸುಗಂಧಿ ಪದಾರ್ಥಗಳು ಪೂಜಾದ್ರವ್ಯಗಳೆಂದು ತಿಳಿಯಲ್ಪಡುತ್ತಿದ್ದವು. ಕೆಲವು ಪ್ರಸಂಗಗಳಲ್ಲಿ ದೇವಾಲಯದಲ್ಲಿ ಪಶುಬಲಿಯನ್ನಾದರೂ ಅವರು ಕೊಡುತ್ತಿದ್ದರು; ಕ್ವಚಿತ್ ಪ್ರಸಂಗಗಳಲ್ಲಿ ಸುಂದರಳಾದ ಕುಮಾರಿಯನ್ನಾಗಲಿ, ಅರ್ಭಕವನ್ನಾಗಲಿ ಬಲಿಯೆಂದು ದೇವರಿಗೆ ಅರ್ಪಿಸುತ್ತಿದ್ದರು. ಆದರೆ, ಇದು ಎಂದಾದರೊಮ್ಮೆ ಅಪ್ಪಿತಪ್ಪಿ ಸಂಭವಿಸುತ್ತಿತ್ತು. ಸೂರ್ಯೋಪಾಸನೆಯ ಮಹತ್ವವು ಇಂಕಾನ ರಾಜ್ಯದಲ್ಲಿ ಅತಿಶಯವಾಗಿತ್ತು. ಕುಝ್ಕೋ ರಾಜಧಾನಿಯೊಳಗಿನ ಸೂರ್ಯನ ದೇವಾಲಯವೆಂದರೆ, ಅದೊಂದು ಸುವರ್ಣರತ್ನಖಚಿತವಾದ ಮಂದಿರವಾಗಿತ್ತು. ಇಂಕಾನ ರಾಜ್ಯದಲ್ಲಿ ದೇವಾಲಯಗಳನ್ನೂ, ಮಂದಿರಗಳನ್ನೂ ಸುಶೋಭಿತ ಮಾಡುವದರಲ್ಲಿ ಬಂಗಾರದ ಉಪಯೋಗವಾಗುತ್ತಿತ್ತು. ಇಂಕಾ ಎಂಬ ಕ್ಷತ್ರಿಯ ಜಾತಿಯ ಮನೆತನದವರಲ್ಲೆಲ್ಲ ಬಂಗಾರದ ಪಾತ್ರೆಗಳ ಹೊರತು ಅನ್ಯವಾದ ಪಾತ್ರೆಗಳು ಇರುತ್ತಿದ್ದಿಲ್ಲ. ಸೂರ್ಯನ ಪೂಜೆಗಾಗಿ 'ಸೂರ್ಯಕನ್ಯಕಾ' ಎಂಬ ಕುಮಾರಿಕೆಯರಿರುತ್ತಿದ್ದರು. ರಾಜಧಾನಿಯಲ್ಲಿದ್ದ ಮುಖ್ಯವಾದ ಸೂರ್ಯಮಂದಿರವಲ್ಲಿ ೧೫೦೦ ಕುಮಾರಿಕೆಯರು ಸೂರ್ಯೋಪಾಸಿಕೆಯರೆಂದು ಇಡಲ್ಪಟ್ಟಿದ್ದರು.

ಉಚ್ಚ ಉಚ್ಚ ಮನೆತನದೊಳಗಿನ ಕುಮಾರಿಕೆಯರು ಚಿಕ್ಕಂದಿನಿಂದ ಈ ದೇವಾಲಯದಲ್ಲಿ ವೃದ್ಧ ಸ್ತ್ರೀಯರ ಕೈಕೆಳಗೆ ಕೆಲಸಗಳನ್ನು ಮಾಡುತ್ತಿದ್ದರು. ಆದರೆ, ಅವರೆಲ್ಲರೂ ಆಮರಣ ಅವಿವಾಹಿತರಾಗಿಯೇ ಉಳಿಯತಕ್ಕದ್ದೆಂಬ ನಿಯಮವಿದ್ದಿಲ್ಲ. ಯಾಕಂದರೆ, ಈ ಸೂರ್ಯೋಪಾಸಿಕೆಯರಲ್ಲಿ ಎಷ್ಟೋ ಕುಮಾರಿಕೆಯರು ಇಂಕಾ ರಾಜನ ಕೂಡ ವಿವಾಹಿತರಾಗಿದ್ದರು. ಸರದಾರ ಮನೆತನಗಳೊಳಗಿನ ಇಂಕಾ ಪುರುಷರಾದರೂ ತಮ್ಮ ಅಂತಃಪುರದ ಸಲುವಾಗಿ ಸೂರ್ಯಮಂದಿರದೊಳಗಿನ ಸುಂದರರಾದ ಕುಮಾರಿಕೆಯರನ್ನೇ ಆರಿಸಿ ಒಯ್ಯುತ್ತಿದ್ದರು. ಇಂಕಾ ರಾಜನಿಗೂ ಅವನ ಸರದಾರರಿಗೂ ಏಕಕಾಲಕ್ಕೆ ಅನೇಕ ಹೆಂಡಂದಿರನ್ನು—ಪ್ರಸಂಗವಶಾತ್ ನೂರಾರು ಅಥವಾ ಸಾವಿರಾರು ಹೆಂಡಂದಿರನ್ನು — ಲಗ್ನ ಮಾಡಿಕೊಳ್ಳುವದಕ್ಕೆ ಪ್ರತಿಬಂಧವಿದ್ದಿದ್ದಿಲ್ಲ. ಆದರೆ, ಸರ್ವಸಾಧಾರಣ ಜನರಲ್ಲಿ ಒಂದೇ ಲಗ್ನ ಮಾಡಿಕೊಳ್ಳುವ ಪರಿಪಾಠವಿತ್ತು. ಪುರುಷರು ಇಪ್ಪತ್ತನಾಲ್ಕು ವರ್ಷದವರಾಗುವವರೆಗೂ, ಸ್ತ್ರೀಯರು ಇಪ್ಪತ್ತು ವರ್ಷದವರಾಗುವ ವರೆಗೂ ವಿವಾಹವನ್ನು ಮಾಡಿಕೊಳ್ಳಕೂಡದೆಂದು ನಿರ್ಬಂಧವಿತ್ತು. ವಿವಾಹಕ್ಕೆ ವಧುವರರ ತಂದೆತಾಯಿಗಳ ಅನುಮತಿಯು ಅವಶ್ಯವಾಗಿ ಬೇಕಾಗುತ್ತಿತ್ತು. ಭಿನ್ನ ಭಿನ್ನ ಜಾತಿಯ ವಧುವರರಲ್ಲಿ ಲಗ್ನಗಳಾಗುತ್ತಿದ್ದಿಲ್ಲ. ಲಗ್ನದ ಮುಹೂರ್ತವು ಇಡಿಯ ವರ್ಷದಲ್ಲಿ ಒಂದೇ ದಿವಸವಿರುತ್ತಿತ್ತು. ಮನುಷ್ಯನು ಸತ್ತನೆಂದರೆ ಅವನನ್ನು ಅವನ ಅಲಂಕಾರಗಳ ಸಹಿತವಾಗಿ ಹುಗಿಯುತ್ತಿದ್ದರು. ದೊಡ್ಡ ದೊಡ್ಡ ರಾಜರ ಹಾಗೂ ಸರದಾರರ ನೂರಾರು ಹೆಂಡಂದಿರು ಗಂಡನ ಮರಣದನಂತರ ಸಹಗಮನ ಮಾಡಿ ಒಮ್ಮೊಮ್ಮೆ ಸತಿಯಾದರೂ ಹೋಗುತ್ತಿದ್ದರು.

ಇಂಕಾ ರಾಜರು ಪ್ರಜರ ಸುಖಕ್ಕಾಗಿಯೂ, ಸೌಕರ್ಯಕ್ಕಾಗಿಯೂ ಅನೇಕ ಯೋಜನೆಗಳನ್ನು ಮಾಡಿದ್ದರು. ದೇಶದೊಳಗಿನ ಧಾನ್ಯವೆಲ್ಲ ಹಳ್ಳಿ ಹಳ್ಳಿಗಳಲ್ಲಿದ್ದ ಸರಕಾರೀ ಧಾನ್ಯಾಗಾರಗಳಲ್ಲಿ ಸಂಚಯಿಸಲ್ಪಡುತ್ತಿತ್ತು. ಲಾಮಾ ಕುರಿಗಳ ಉಣ್ಣೆಯನ್ನಾದರೂ ಇದೇ ರೀತಿಯಿಂದ ಸಂಚಯಿಸಿಡುವ ಪ್ರಘಾತವಿತ್ತು. ಧಾನ್ಯ ಹಾಗೂ ಇತರ ಪದಾರ್ಥಗಳನ್ನೆಲ್ಲ ಸರಕಾರೀ ಅಧಿಕಾರಿಗಳೇ ಜನರಿಗೆ ಹಂಚಿಕೊಡುತ್ತಿದ್ದರು. ಇದರಿಂದ, ಸರದಾರರ ಮನೆತನಗಳನ್ನಷ್ಟು ಬಿಟ್ಟು ಉಳಿದ ಪ್ರಜಾಜನರಲ್ಲಿ, ಇವನು ಶ್ರೀಮಂತನು,

ಇಪನು ಬಡವನು ಎಂಬ ಭೇದವೇ ಪೇರೂ ದೇಶದಲ್ಲಿದ್ದಿದ್ದಿಲ್ಲ. ಜನರಿಗೆ ಸುದ್ದಿ ಮುಂತಾದವುಗಳನ್ನು ಮುಟ್ಟಿಸುವದಕ್ಕಾಗಿ ಟಪಾಲಿನ ವ್ಯವಸ್ಥೆಯಾದರೂ ಇತ್ತು. ಯಾವ ಮಾರ್ಗಗಳಿಗೆ ಹಂಬೋಲ್ಟನಂಥ ವಿಖ್ಯಾತನಾದ ಜರ್ಮನ ಪ್ರವಾಸಿಯು 'Most stupendous and useful (ಅತ್ಯಂತ ಅದ್ಭುತ ಹಾಗೂ ಅತ್ಯಂತ ಲೋಕೋಪಯೋಗಿ)' ಎಂಬ ಸಂಜ್ಞೆಯನ್ನು ಕೊಟ್ಟಿರುವನೋ, ಅಂಥ ಸುಂದರವಾದ ಮಾರ್ಗಗಳಿಂದ ಪ್ರತಿನಿತ್ಯ ಒಂದು ನೂರೈವತ್ತು ಮೈಲುಗಳ ವೇಗದಿಂದ ಟಪಾಲಿನ ವ್ಯವಹಾರವು ನಡೆಯುತ್ತಿತ್ತು. ಊರೂರಿಗೆ ಶಿಕ್ಷಣದ ವ್ಯವಸ್ಥೆಯಾದರೂ ಮಾಡಲ್ಪಟ್ಟಿತ್ತು. ನ್ಯಾಯದ ಪದ್ಧತಿಯಾದರೂ ಉತ್ತಮವಾಗಿತ್ತು. ಹಳ್ಳಿಗಳೊಳಗಿನ ಸಣ್ಣ ಸಣ್ಣ ಅಪರಾಧಗಳ ವಿಚಾರಣೆಯನ್ನು ಮಾಡುವದಕ್ಕಾಗಿ ಮ್ಯಾಜಿಸ್ಟ್ರೇಟರಿರುತ್ತಿದ್ದರು. ಹೆಚ್ಚಿನ ಅಪರಾಧಗಳ ವಿಚಾರಣೆಯು ನ್ಯಾಯಾಧೀಶರ ಮುಂದೆ ನಡೆಯುತ್ತಿತ್ತು. ಅಪೀಲಿನ ಪದ್ಧತಿಯು ಪ್ರಚಾರದಲ್ಲಿದ್ದಿದ್ದಿಲ್ಲ. ನ್ಯಾಯಾಧೀಶರನ್ನು ನೇಮಿಸುವ ಇಲ್ಲವೆ ಅವರನ್ನು ಪದಭ್ರಷ್ಟ ಮಾಡುವ ಅಧಿಕಾರವು ಬಾದಶಹನದು. ಹತ್ತು ಸಾವಿರ ಜನಸಂಖ್ಯೆಯುಳ್ಳ ಪ್ರಾಂತದ ಮೇಲೆ ಇಂಕಾ ಜಾತಿಯ ಸುಭೇದಾರನಿರುತ್ತಿದ್ದನು. ಅವನ ಕೈಕೆಳಗೆ ಕುರಾಕಾ ಎಂಬ ಚಿಕ್ಕ ಅಧಿಕಾರಿಯಿರುತ್ತಿದ್ದನು. 'ಫಿರ್ಯಾದಿ' ಬಂದ ಐದು ದಿವಸಗಳಲ್ಲಿ ನ್ಯಾಯಾಧೀಶನು ಅದರ ನಿರ್ಣಯವನ್ನು ಮಾಡಲೇಬೇಕೆಂಬ ನಿಯಮವಿತ್ತು.

ಇಂಕಾ ರಾಜನ ಸೈನ್ಯವು ಎರಡು ಲಕ್ಷವಾಗಿತ್ತು. ಬಂದೂಕಿನ ಮದ್ದಿನ ಉಪಯೋಗವು ಇಂಕಾ ಜನರಿಗೆ ಗೊತ್ತಿದ್ದಿಲ್ಲ; ಬಿಲ್ಲು, ಬರ್ಚಿ, ಬಾಣ, ಖಡ್ಗ, ಪರಶು, ಗದಾ, ಕವಣೆ ಮುಂತಾದವುಗಳೇ ಅವರ ಶಸ್ತ್ರಾಸ್ತ್ರಗಳಾಗಿದ್ದವು. ಕಬ್ಬಿಣವೆಂದರೇನೆಂಬದನ್ನು ಅವರು ಸ್ವಪ್ನದಲ್ಲಿ ಕೂಡ ಅರಿಯರು. ಅವರ ಶಸ್ತ್ರಾಸ್ತ್ರಗಳೆಲ್ಲ ತಾಂಬ್ರದಿಂದಲೇ ಮಾಡಲ್ಪಟ್ಟಿದ್ದವು. ಸೈನ್ಯದೊಳಗಿನ ಜನರ ತಲೆಗಳಿಗೆ ಬೇರೆ ಬೇರೆ ಬಣ್ಣದ ಪಟ್ಟಿಗಳುಳ್ಳ ಮುಂಡಾಸಗಳೂ, ಮೈಯಲ್ಲಿ ದಪ್ಪಾದ ಅರಿವೆಯ ಗಿಡ್ಡ ಅಂಗಿಗಳೂ ಇರುತ್ತಿದ್ದವು. ಸರದಾರರ 'ಪೋಷಾಕ'ಕ್ಕೆ ಬಂಗಾರದ ಹಾಗೂ ವಜ್ರಮಾಣಿಕ್ಯಗಳ ಅಲಂಕಾರಗಳು ಹಚ್ಚಲ್ಪಡುತ್ತಿದ್ದವು. ಅವರ ಶಿರಸ್ತ್ರಾಣದ ಮೇಲೆ ಪಕ್ಷಿಗಳ ಸುಂದರವಾದ ಪುಚ್ಛಗಳಿಂದ ಮಾಡಲ್ಪಟ್ಟ ತುರಾಯಿಗಳಿರುತ್ತಿದ್ದವು. ಪ್ರತಿಯೊಂದು ಪಲಟ

ಣದ ಮುಂದೊಂದು ಬಾವಟೆ ಇಲ್ಲವೆ ನಿಶಾನಿ ಇರುತ್ತಿತ್ತು. ಅದರ ಮೇಲಿನ ಇಂದ್ರಧನುಷ್ಯದ ಆಕೃತಿಯು ಬಂಗಾರದ ತಂತಿಗಳಿಂದ ಮಾಡಲ್ಪಡುತ್ತಿತ್ತು.

ಈ ಪ್ರಕಾರ ಕೆಲವಂಶಗಳಿಂದ ಸುಧಾರಿಸಿದ ಆದರೆ ಅನೇಕಾಂಶಗಳಿಂದ ಹಿಂದುಳಿದ ಜನರ ಮೇಲೆ, ಪಿಝಾರೋನು ದಂಡೆತ್ತಿ ಹೋದಾಗ, ಅಟಾಹುಲಪ್ಪಾ ಎಂಬ ಹೆಸರಿನ ರಾಜನು ರಾಜ್ಯವನ್ನಾಳುತ್ತಿದ್ದನು. ಪಿಝಾರೋನು ಪೇರೂ ದೇಶಕ್ಕೆ ಹೋಗುವದರ ಪೂರ್ವದಲ್ಲಿ ಸ್ವಲ್ಪ ವರ್ಷಗಳಿಂದ ಅಟಾಹುಲಪ್ಪಾ ಹಾಗೂ ಅವನ ಮಲ ಅಣ್ಣನಾದ ಹೌಸಕಾರ ಈ ಉಭಯತರ ನಡುವೆ ಭಯಂಕರವಾದ ಯಾದವಿಯು— ಗೃಹಕಲಹವು— ಹಬ್ಬಿಕೊಂಡಿತ್ತು. ಅಟಾಹುಲಪ್ಪಾ ಹಾಗೂ ಹೌಸಕಾರ ಈ ಉಭಯತರೂ ಹುಯನಾಕೇಪಾಕನ ಮಕ್ಕಳು. ಹುಯನಾ ಕೇಪಾಕನು ಒಳ್ಳೇ ಪರಾಕ್ರಮಿಯಾದ ರಾಜನು. ಅವನು ಕ್ವಿಟೋ ಹಾಗೂ ಚಿಲೀ ಪ್ರಾಂತಗಳ ಮೇಲೆ ಇಂಕಾರಾಜರ ಅಧಿಕಾರವನ್ನು ಸ್ಥಾಪಿಸಿದ್ದನು; ಪೇರೂ ದೇಶದ ರಾಜಧಾನಿಯಾಗಿದ್ದ ಕುಝ್ಕೋ ಪಟ್ಟಣದಿಂದ ಕ್ವಿಟೋ ಪಟ್ಟಣದ ವರೆಗೆ ದೊಡ್ಡ ಮಾರ್ಗವನ್ನು ಕಟ್ಟಿದ್ದನು. ಇಂಕಾ ಜನರ 'ಕ್ವಿಚುಆ' ಭಾಷೆಯ ಪ್ರಸಾರವು ತನ್ನ ರಾಜ್ಯದ ತುಂಬ ಆಗಬೇಕೆಂಬದಾಗಿ ಅವನು ನಾನಾವಿಧ ಪ್ರಯತ್ನವನ್ನು ಮಾಡಿದನು. ಈ ರಾಜನು ರಾಜ್ಯವನ್ನಾಳುತ್ತಿದ್ದಾಗ ಇಂಕಾ ಜನರ ಸಾಮರ್ಥ್ಯ-ವೈಭವಗಳು ಪರಮಾವಧಿಯನ್ನು ಮುಟ್ಟಿದ್ದವೆಂದು ಆ ಪ್ರಾಂತದೊಳಗಿನ ಜನರ ಮತವಿದೆ. ಕ್ವಿಟೋ ಪ್ರಾಂತದ ಮೇಲೆ ಸ್ವತಂತ್ರವಾಗಿ ರಾಜ್ಯವನ್ನಾಳುತ್ತಿದ್ದ ರಾಜನ ಪರಾಭವವನ್ನು ಮಾಡಿ, ಅವನ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿ, ಹುಯನಾ ಕೇಪಾಕನು ಪರಾಭೂತನಾಗಿದ್ದ ರಾಜನ ಸುಂದರಳಾದ ಕನ್ನೆಯನ್ನು ಮದುವೆಯಾಗಿದ್ದನು. ಈ ಮೊದಲು ಹುಯನಾಕೇಪಾಕನಿಗೆ ಇಂಕಾ ಕುಲದೊಳಗಿನ ಅನೇಕ ರಾಣಿಗಳಿದ್ದರು. ಇವರಲ್ಲೊಬ್ಬಳಿಗೆ ಹೌಸಕಾರನೆಂಬ ಮಗನಿದ್ದನು. ಇವನೇ ಯುವರಾಜನೆಂದು ಗೊತ್ತುಮಾಡಲ್ಪಟ್ಟಿತ್ತು. ಕ್ವಿಟೋದ ರಾಜನ ಕನ್ನಿಕೆಯು ಕೂಡ ವಿವಾಹವಾದ ಬಳಿಕ, ಕೇಪಾಕನು ಅವಳ ಮೇಲೆ ಅತ್ಯಂತ ಪ್ರೇಮಮಾಡಹತ್ತಿದನು. ಮುಂದೆ ಅವಳಿಗೆ ಅಟಾಹುಲಪ್ಪಾ ಎಂಬ ಮಗನು ಹುಟ್ಟಿದನು. ಈ ಮಗನಿಗಾದರೂ ರಾಜ್ಯದ ಕೆಲವು ಭಾಗವು

ದೊರೆಯಬೇಕೆಂದು ರಾಜನು ವ್ಯವಸ್ಥೆಯನ್ನು ಮಾಡಹತ್ತಿದನು. ಇಂಕಾ ರಾಜಮನೆತನದ ಪದ್ಧತಿಯಂತೆ, ಕೇಪಾಕನು ಕ್ವಿಟೋ ರಾಜಕನ್ನಿಕೆಯ ಕೂಡ ಮಾಡಿಕೊಂಡ ವಿವಾಹವು ಅಶಾಸ್ತ್ರವಾಗಿತ್ತು. ಇಂಕಾಕುಲದ ಅಭಿಮಾನಿಗಳೆಲ್ಲ ಅಟಾಹುಲಪ್ಪಾನು ದಾಸೀಪುತ್ರನೆಂದು ತಿಳಿಯುತ್ತಿದ್ದರು. ಆದರೆ, ಕೇಪಾಕನು ಬಲಾಢ್ಯನೂ, ಅನಿಯಂತ್ರಿತ ರಾಜಪುರುಷನೂ ಆಗಿದ್ದರಿಂದ ಅವನು ಮಾಡಿದ್ದೇ ಕಾರಣವು, ಕಟ್ಟಿದ್ದೇ ತೋರಣವು ಎಂಬ ಶಕ್ತಿಯು ಅವನಲ್ಲಿತ್ತು. ಮರಣ ಸಮಯದಲ್ಲಿ ರಾಜನು ತನ್ನ ರಾಜ್ಯದಲ್ಲಿ ಎರಡು ವಿಭಾಗಗಳನ್ನು ಮಾಡಿ, ಹೌಸಕಾರನು ಕುರ್ಝ್ಕೊ ಪಟ್ಟಣದಲ್ಲಿದ್ದು ದಕ್ಷಿಣಸೀಮೆಯ ರಾಜ್ಯವನ್ನಾಳ ಬೇಕೆಂತಲೂ ತಾನು ಹೊಸದಾಗಿ ಗೆದ್ದ ಕ್ವಿಟೋಪ್ರಾಂತದ ಮೇಲೂ ಉತ್ತರ ಸೀಮೆಯ ಪ್ರದೇಶದ ಮೇಲೂ ಅಟಾಹುಲಪ್ಪಾನು ರಾಜ್ಯವನ್ನು ಮಾಡ ಬೇಕೆಂತಲೂ ಅವನು ನಿರ್ಣಯಿಸಿದನು. ಕೇಪಾಕನ ಮರಣದ ನಂತರ ಐದು ವರ್ಷಗಳವರೆಗೆ ಈ ಉಭಯ ಬಂಧುಗಳು ತಮ್ಮ ತಮ್ಮ ರಾಜ್ಯವನ್ನು ಚನ್ನಾಗಿ ಆಳುತ್ತಿದ್ದನು. ಆದರೆ, ಮಹತ್ವಾಕಾಂಕ್ಷಿಯೂ ಕರ್ತೃತ್ವಶಾಲಿಯೂ ಆದ ಅಟಾಹುಲಪ್ಪಾನು ತನ್ನ ಪ್ರಾಂತದ ಸೀಮಾಂತರದ ಮೇಲಿದ್ದ ಜನರ ಮೇಲೆ ದಂಡೆತ್ತಿ ಹೋಗಿ ಅವರ ಮೇಲೆ ತನ್ನ ಅಧಿಕಾರವನ್ನು ನಡಿಸಹತ್ತಿದನು. ಹೌಸಕಾರನ ಪ್ರಾಂತದ ಮೇಲೆ ಅವನೇನು ದಂಡೆತ್ತಿ ಹೋಗಿದ್ದಿಲ್ಲ. ಆದರೆ, ಅಟಾಹುಲಪ್ಪಾನು ದಾಸೀಪುತ್ರನೂ ತನಗಿಂತಲೂ ಚಿಕ್ಕವನೂ ಆಗಿರಲು, ತನಗಿಂತ ಹೆಚ್ಚು ಬಲಾಢ್ಯನಾಗಬೇಕೆಂಬ ಮಾತು ಹೌಸಕಾರನಿಗೆ ರುಚಿಸಲಿಲ್ಲ. ಈ ನಿಮಿತ್ತದಿಂದ ಆ ಉಭಯ ಬಂಧುಗಳಲ್ಲಿ ವಿತುಷ್ಟವುಂಟಾಗಿ ಕೊನೆಗೆ ಅದು ವಿಕೋಪವನ್ನು ಹೊಂದಿ ಬಂಧುಬಂಧುಗಳಲ್ಲಿ ಯುದ್ಧವು ಪ್ರಾರಂಭವಾಯಿತು. ಈ ಯುದ್ಧದಲ್ಲಿ ಹೌಸಕಾರನ ಪರಾಜಯವಾಗಿ, ಅವನು ತನ್ನ ತಮ್ಮನ ಬಂದಿವಾನನಾದನು. ಅಟಾಹುಲಪ್ಪಾನು ತನ್ನ ಅಣ್ಣನ ಇಂಕಾ ಸರದಾರರನ್ನೂ, ಅವನ ಕುಟುಂಬದೊಳಗಿನ ಜನರನ್ನೂ, ಹೌಸಕಾರನ ಅಂತಃಪುರದೊಳಗಿನ ಸ್ತ್ರೀಯರನ್ನೂ, ಬಾಲಕರನ್ನೂ ಕೂಡ ಕೊಂದುಹಾಕಿದನು. ಹಿಂದೆ ಮುಂದೆ ಹೌಸಕಾರನ ವತಿಯಿಂದ ರಾಜ್ಯಕ್ಕೆ ಯಾರಾದರೂ ತಾವು ಬಾಧ್ಯಸ್ಥರೆಂದು ಬಂದಾರೆಂಬ ಸಂಶಯದಿಂದ ಅಟಾಹುಲಪ್ಪಾನು ತನ್ನ ತಂದೆಯ ಹಾಗೂ ಅಣ್ಣನ ವಂಶಗಳನ್ನು ನಿರ್ಮೂಲವಾಗಿ

ಛೇದಿಸಿ ತನ್ನ ಮಾರ್ಗವನ್ನು ನಿಷ್ಕಂಟಕವಾಗಿ ಮಾಡಿಕೊಂಡನೆಂದು ಸ್ಪ್ಯಾನಿಶ ಇತಿಹಾಸಕಾರರು ಹೇಳುತ್ತಾರೆ. ಈ ರೀತಿಯಾಗಿ ತನ್ನ ಅಣ್ಣನನ್ನು ಪಾದಾಕ್ರಾಂತ ಮಾಡಿ, ಅವನ ರಾಜ್ಯವನ್ನು ಅಪಹರಿಸಿ, ಅಟಾಹುಲಪ್ಪಾನು ಪೇರೂದೇಶದ ಮೇಲೆ ತನ್ನ ಏಕಛತ್ರೀ ಸಾಮ್ರಾಜ್ಯವನ್ನು ಸ್ಥಾಪಿಸುವಷ್ಟರಲ್ಲಿ ಪಿಝಾರೋನು ಸ್ಪ್ಯಾನಿಶ ಸೈನ್ಯವನ್ನು ತೆಗೆದುಕೊಂಡು ಪೇರೂ ದೇಶದ ಮೇಲೆ ಸಾಗಿ ಹೋದನು. ಪೇರೂ ದೇಶದಲ್ಲಿ ಅಶುಭಸೂಚಕವಾದ ಅನೇಕ ಅಪಶಕುನಗಳಾಗಹತ್ತಿದವೆಂದು ಜನರು ಭಯಗ್ರಸ್ತರಾಗಿದ್ದರು. ವಿದ್ಯುತ್ ಶಕ್ತಿಗೆ ಸಮಾನವಾದ ಬಂದೂಕುಗಳೆಂಬ ವಿಲಕ್ಷಣವಾದ ಶಸ್ತ್ರಾಸ್ತ್ರಗಳನ್ನು ಧರಿಸಿದ ಅಶ್ವಾರೂಢರ ಸಮೇತನಾಗಿ ಪಿಝಾರೋನು ಟುಂಬೇಝುದಿಂದ ಹೊರಟು ಕುಝ್ಕೋ ಪಟ್ಟಣಾಭಿಮುಖವಾಗಿ ಬರುತ್ತಲಿದ್ದಾನೆಂಬ ಸುದ್ದಿಯು ಅಟಾಹುಲಪ್ಪಾನಿಗೆ ಮುಟ್ಟಿತು. ಆದರೆ, ಪಿಝಾರೋನಿಗೆ ಪ್ರತಿಬಂಧ ಮಾಡುವ ಯಾವ ಉಪಾಯವನ್ನೂ ಅವನು ಯೋಜಿಸಲಿಲ್ಲ. ಕಾಕ್ಸಮರ್ಕಾ ಹಾಗೂ ಪಿಝಾರೊ ಇವುಗಳ ಮಧ್ಯದಲ್ಲಿ ಅಂಡೀಜ ಪರ್ವತದ ಕೆಲವು ಸಾಲುಗಳಿದ್ದವು. ಈ ಪರ್ವತದ ಸಾಲುಗಳನ್ನು ಏರಿಳಿದು ಪಿಝಾರೋನು ಕಾಕ್ಸಮರ್ಕಾ ಸ್ಥಲವನ್ನು ಮುಟ್ಟತಕ್ಕವನಿದ್ದನು. ಪಿಝಾರೋನು ಗುಡ್ಡದೊಳಗಿನ ಬಿಕ್ಕಟ್ಟಿನ ಘಟ್ಟವನ್ನೇರಿ ಬರುವಾಗ ಅಟಾಹುಲಪ್ಪಾನ ಸೈನ್ಯದವರು ಅವನನ್ನು ನಿರೋಧಿಸಿದ್ದರೆ, ಇನ್ನೂರು ಸ್ಪ್ಯಾನಿಅರ್ಡ ಶಿಪಾಯರನ್ನು ಗುಡ್ಡದಲ್ಲಿಯೇ ಮುಚ್ಚಿಬಿಡುವದು ಇಂಕಾ ಸೈನ್ಯಕ್ಕೆ ಅಶಕ್ಯವಾಗಿತ್ತು ಹೀಗೇನಲ್ಲ. ಸ್ಪ್ಯಾನಿಶ ಅಶ್ವಾರೂಢರ ಕೈಯಲ್ಲಿದ್ದ ಬಂದೂಕಗಳ ಭೀತಿಯಿಂದಲೋ ಮತ್ತಾವ ಕಾರಣದಿಂದಲೋ ಅಟಾಹುಲಪ್ಪಾನು ಪರ್ವತದ ಬಿಕ್ಕಟ್ಟಿನ ಕಂದರದಲ್ಲಿ ಪಿಝಾರೋನನ್ನು ಹಿಡಿದುಹಾಕುವ ಸುಲಭವಾದ ಯುಕ್ತಿಯನ್ನು ಕೂಡ ಯೋಜಿಸಲಿಲ್ಲ. ಪಿಝಾರೋನು ತಾನು ಹಿಡಿದುತಂದಿದ್ದ ಎಷ್ಟೋ ಇಂಡಿಯನ್‌ರಲ್ಲಿ ಒಬ್ಬಿಬ್ಬರಿಗೆ ಸ್ಪ್ಯಾನಿಶ ಭಾಷೆಯನ್ನು ಕಲಿಸಿ, ಅವರನ್ನು ದ್ವಿಭಾಷಿಗಳನ್ನಾಗಿ ಮಾಡಿದ್ದನು. ಅಟಾಹುಲಪ್ಪಾನು ದೊಡ್ಡ ಸೈನ್ಯವನ್ನು ತೆಗೆದುಕೊಂಡು ಕಾಕ್ಸಮರ್ಕಾದಲ್ಲಿ ಶತ್ರುಗಳ ಕೂಡ ಯುದ್ಧ ಮಾಡುವದಕ್ಕಾಗಿ ಸಿದ್ಧನಾಗಿದ್ದಾನೆಂಬ ಸುದ್ದಿಯು ಪಿಝಾರೋನಿಗೆ ತಿಳಿಯಿತು. ಎಷ್ಟೇ ಉತ್ಕೃಷ್ಟವಾದ ಶಸ್ತ್ರಾಸ್ತ್ರಗಳಿದ್ದರೂ ಇನ್ನೂರು ಶಿಪಾಯರು ಅಟಾ

ಹುಲಪ್ಪಾನ ೨೫-೩೦ ಸಾವಿರ ಸೈನ್ಯದ ಮುಂದೆ ನಿಲ್ಲುವದು ಅಸಾಧ್ಯವೆಂಬ ಮಾತು ಪಿಝಾರೋನು ಅರಿತವನಾದ್ದರಿಂದ, ಅವನು ತನ್ನಲ್ಲಿದ್ದ ಒಬ್ಬ ದ್ವಿಭಾಷಿಯನ್ನು ರಾಜನ ಹತ್ತರ ಕಳಿಸಿ, "ಸ್ಪಾನಿಶ ಜನರಾದ ನಾವು ನಮ್ಮ ಸ್ಪಾನಿಶಬಾದಶಹರ ಆಜ್ಞಾನುಸಾರವಾಗಿ ನಿಮ್ಮ ಮಿತ್ರತ್ವವನ್ನು ಸಂಪಾದಿಸುವದಕ್ಕಾಗಿ ಬಂದಿದ್ದೇವೆ. ನಮಗೆ ಯುದ್ಧಕಲೆಯು ಚನ್ನಾಗಿ ಅವಗತವಾಗಿರುವದರಿಂದ, ರಾಜರು ನಮ್ಮ ಉಪಯೋಗವನ್ನು ಮಾಡಿಕೊಳ್ಳುವದಾಗಿದ್ದರೆ ಮಾಡಿಕೊಳ್ಳಬೇಕು. ರಾಜರಿಗೆ ಯಾರಾದರೂ ಶತ್ರುಗಳಿದ್ದರೆ ಅವರ ಕೂಡ ಯುದ್ಧ ಮಾಡಲು ನಾವು ಸಿದ್ಧರಿದ್ದೇವೆ." ಈ ಅಭಿಪ್ರಾಯದ ಸಂದೇಶವನ್ನು ದ್ವಿಭಾಷಿಯು ಮುಖಾಂತರವಾಗಿ ಅಟಾಹುಲಪ್ಪಾನಿಗೆ ಕಳಿಸಿದನು. ಈ ಸಂದೇಶಕ್ಕೆ ಅಟಾಹುಲಪ್ಪಾ ಬಾದಶಹನಾದರೂ ತನ್ನ ವಕೀಲನ ಮುಖಾಂತರವಾಗಿ ಪಿಝಾರೋನಿಗೆ ಈ ಮುಂದಿನ ಉತ್ತರವನ್ನು ಕಳುಹಿಕೊಟ್ಟನು. "ಪರಸ್ಥರಾದ ನಿಮ್ಮ ಸ್ಪಾನಿಆರ್ಡ ಜನರ ಪರಾಕ್ರಮವನ್ನೂ, ಕೀರ್ತಿಯನ್ನೂ ಕೇಳಿ ನಾವು ಬಹಳ ಸಂತುಷ್ಟರಾಗಿರುತ್ತೇವೆ. ನೀವು ಕಾಕ್ಸಮರ್ಕಾಕ್ಕೆ ಒಂದು ನಮಗೆ ಎಂದು ದರ್ಶನವನ್ನು ಕೊಡುವಿರೆಂಬದನ್ನು ತಿಳಿಸಬೇಕು. ನಿಮ್ಮ ದರ್ಶನದ ಉತ್ಸುಕತೆಯು ನಮಗೆ ಬಹಳವಾಗಿದೆ." ತನ್ನ ಮಾರ್ಗದಲ್ಲಿ ಯಾವ ಪ್ರತಿಬಂಧವನ್ನೂ ತರದೆ, ರಾಜನು ಸೈನ್ಯಸಮೇತನಾದ ತನ್ನನ್ನು ಕಾಕ್ಸಮರ್ಕಾಕ್ಕೆ ಕರೆಯುತ್ತಾನೆಂಬ ಸುದ್ದಿಯನ್ನು ಕೇಳಿ ಪಿಝಾರೋನು ತುಸು ಗೊಂದಲದಲ್ಲಿ ಬಿದ್ದನು. ತಮ್ಮ ಚಿಕ್ಕ ಸೈನ್ಯವು ಗುಡ್ಡವನ್ನೇರಿ ದಣಿದು ಕಾಕ್ಸಮರ್ಕಾ ಮುಟ್ಟಿದ ಕೂಡಲೆ, ತಮ್ಮ ಮೇಲೆ ೨೫-೩೦ ಸಾವಿರ ಸೈನ್ಯವನ್ನು ತೆಗೆದುಕೊಂಡು ಹಲ್ಲಾ ಮಾಡುವ ವಿಚಾರವು ರಾಜನದಾಗಿರಬಹುದೆಂದು ಪಿಝಾರೋನಿಗೆ ಸಂಶಯು ಉತ್ಪನ್ನವಾಯಿತು. ಆದರೆ, ಪಿಝಾರೋನು ಒಳ್ಳೆ ಎದೆಗಾರನಾದ ವೀರನಾದ್ದರಿಂದ ಕಾಕ್ಸಮರ್ಕಾದವರೆಗೆ ಹೋಗುವ ವಿಚಾರವನ್ನು ಗಟ್ಟಿಮಾಡಿದನು. ಪರ್ವತದೊಳಗಿನ ಘಟ್ಟದ ಮಾರ್ಗವನ್ನು ಇಂಕಾ ರಾಜರು ಚನ್ನಾಗಿ ಕಟ್ಟಿದ್ದರೂ ಕೆಲಕೆಲವು ಸ್ಥಳಗಳಲ್ಲಿ ಒಬ್ಬ ಮನುಷ್ಯನು ಮಾತ್ರ ಹೋಗುವಷ್ಟು ದಾರಿಯಿತ್ತು. ಒಂದು ಬದಿಗೆ ಗೋಡೆ ಕಟ್ಟಿದಂತೆ ಆಕಾಶಪ್ರಾಯವಾದ ಉಚ್ಚಪರ್ವತವು, ಮತ್ತೊಂದು ಬದಿಗೆ ಸಾವಿರಾರು

ಫೂಟು ಆಳವಾದ ಕೊನ್ನಾರವು! ಕುದುರೆ ಸವಾರರಿಗಂತೂ ಈ ಘಟ್ಟವನ್ನೇರುವದು ತೀರ ಕಷ್ಟಪ್ರದವಾಯಿತು. ಆದರೂ ಇಂಥ ಬಿಕ್ಕಟ್ಟಿನ ಗುಡ್ಡಗಾಡ ಪ್ರದೇಶದೊಳಗಿಂದ ಪಾರಾಗಿ ಯಥಾಕಾಲದಲ್ಲಿ ಪಿಝಾರೋನು ಕಾಕ್ಸ ಮರ್ಕಾಕ್ಕೆ ಬಂದು ಮುಟ್ಟಿದನು. ಪಟ್ಟಣದ ಆಚೆಯ ಮಗ್ಗಲಿಗೆ ಒಂದು ಹಳ್ಳದ ದಂಡೆಗುಂಟ ಎಷ್ಟೋ ಮೈಲಗಳ ವರೆಗೆ ಇಂಕಾ ಜನರ ಸೈನ್ಯವು ಹಬ್ಬಿಕೊಂಡಿತ್ತು. ಉತ್ತಮೋತ್ತಮವಾದ ಡೇರೆಗಳ ಸಾಲುಗಳೇ ಸ್ಪಾನಿಆರ್ಡರ ದೃಷ್ಟಿಗೆ ಬಿದ್ದವು. ಈ ಸೈನ್ಯದ ವ್ಯವಸ್ಥೆಯನ್ನು ನೋಡಿ, ಇಂಥ ದೊಡ್ಡದಾದ ಸೈನ್ಯವು ನಮ್ಮ ಮೇಲೆ ಕಡಿದುಬಿದ್ದರೆ, ನಾವು ನುಚ್ಚುನುರಿಯಾಗುವೆವೆಂಬ ಭೀತಿಯಾದರೂ ಸ್ಪಾನಿಆರ್ಡರಿಗೆ ಹುಟ್ಟಿತು. ಆದರೆ, ಪಿಝಾರೋನ ಕುದುರೆ ಸವಾರರು ಕಾಕ್ಸಮರ್ಕಾ ಪಟ್ಟಣವನ್ನು ಮುಟ್ಟಿದರೂ ಅವರಿಗೆ ಯಾರಿಂದಲೂ ಯಾವ ತೊಂದರೆಯು ಉಂಟಾಗಲಿಲ್ಲ. ಪಿಝಾರೋನ ತಮ್ಮನಾದ ಹನ್ಯಾರ್ಂಡೋನು ಇಬ್ಬರು ಸವಾರರನ್ನು ತೆಗೆದುಕೊಂಡು, ಅಟಾಹುಲಪ್ಪಾನು ಇಳಿದುಕೊಂಡಿದ್ದ ತೋಟದಲ್ಲಿ ಹೋಗಿ ರಾಜನ ಎದುರು ನಿಂತನು. "ಅಮರ್ಯಾದಿತವಾದ ಸಮುದ್ರದ ಆಚೆಕಡೆಗಿರುವ ಸ್ಪೇನ ದೇಶದ ನಿವಾಸಸ್ಥರು ನಾವಾಗಿದ್ದು, ರಾಜನ ಸೈನ್ಯದಲ್ಲಿ ಸೇವೆಯನ್ನು ಮಾಡುವದು ನಮ್ಮ ಉದ್ದೇಶವಾಗಿದೆ; ಹಾಗೂ ನಮ್ಮ ಸದ್ಧರ್ಮದ, ಅಂದರೆ ಖ್ರಿಶ್ಚನ್ ಧರ್ಮದ ಪ್ರಸಾರವನ್ನು ಇಂಕಾ ರಾಜ್ಯದಲ್ಲಿ ಮಾಡುವದು ನಮ್ಮ ವಿಚಾರವಾಗಿದೆ. ಅದಕ್ಕಾಗಿ ಅಟಾಹುಲಪ್ಪಾನು ನಮ್ಮ ಸ್ಪಾನಿಆರ್ಡರ ನಾಯಕನಾದ ಪಿಝಾರೋನ ಭೆಟ್ಟಿಗೆ ಅವನು ತನ್ನ ಸೈನ್ಯಸಮೇತನಾಗಿ ತಳಊರಿದ ಸ್ಥಳಕ್ಕೆ ಬರಬೇಕು." ಹನ್ಯಾರ್ಂಡೋನ ಈ ಭಾಷಣಕ್ಕೆ ಇಂಕಾ ರಾಜನು ಯಾವ ಉತ್ತರವನ್ನೂ ಕೊಡಲಿಲ್ಲ. ಅವನ ಹತ್ತರದಲ್ಲಿದ್ದ ಸರದಾರನೊಬ್ಬನು "ಒಳ್ಳೇದು" ಎಂದು ಉತ್ತರವನ್ನು ಕೊಟ್ಟನು. ಈ ಉತ್ತರದಿಂದ ಸಮಾಧಾನವನ್ನು ಹೊಂದದೆ, ಇದಕ್ಕೂ ಹೆಚ್ಚು ಸ್ಪಷ್ಟವಾದ ಉತ್ತರವು ಬೇಕೆಂಬ ವಿನಂತಿಯನ್ನು ಹನ್ಯಾರ್ಂಡೋನು ಮಾಡಿಕೊಂಡನು. "ಈ ಹೊತ್ತು ನನ್ನ ಉಪವಾಸದ ದಿವಸವಾಗಿದೆ; ನಾಳಿನ ದಿವಸ ನಿಮ್ಮ ಕಪ್ತಾನನ ಭೆಟ್ಟಿಗೆ ಬರುವೆವು; ಅಲ್ಲಿಯವರೆಗೆ ನೀವು ಕಾಕ್ಸಮರ್ಕಾ ಪಟ್ಟಣದೊಳಗಿನ ಸಾರ್ವಜನಿಕ ಮಂದಿರದಲ್ಲಿ ವಿಶ್ರಮಿಸಿಕೊಳ್ಳಬೇಕು." ಇದನ್ನು

ಕೇಳಿಕೊಂಡು ಹರ್ನ್ಯಾಂಡೋನು ತನ್ನ ಅಣ್ಣನ ಹತ್ತರ ಹೋದನು. ಆಟಾಹುಲಪ್ಪಾನು ತನ್ನ ಭೆಟ್ಟಿಗೆ ಬರುವನೆಂಬ ಸುದ್ದಿಯನ್ನು ಕೇಳಿ ಪಿಝಾರೋನಿಗೆ ಆನಂದವಾಯಿತು. ಆಟಾಹುಲಪ್ಪಾನು ಭೆಟ್ಟಿಗೆ ಬಂದಕೂಡಲೆ, ಅವನನ್ನು ಆಕಸ್ಮಿಕವಾಗಿ ಸೆರೆಯಲ್ಲಿ ಹಿಡಿಯತಕ್ಕ ದೆಂಬ್ದ ವಿಶ್ವಾಸಘಾತದ ಯೋಚನೆಯನ್ನು ಅವನು ಯೋಜಿಸಿದನು. ಮೆಕ್ಸಿಕೋದೊಳಗಿನ ಆಝುಟೆಕ್ಸ ಜನರ ರಾಜನನ್ನು ತನ್ನದೇಶಬಾಂಧವ ನಾದ ಕೋರ್ಟೇಝನು ಹೀಗೆಯೇ ಸೆರೆಯಲ್ಲಿ ಹಿಡಿದು ಮೆಕ್ಸಿಕೋದ ರಾಜ್ಯ ನ್ನು ಸಂಪಾದಿಸಿದ ಸಂಗತಿಯು ಪಿಝಾರೋನ ಧ್ಯಾನ ದಲ್ಲಿತ್ತು. ತನ್ನ ಯೋಚನೆಯನ್ನು ತನ್ನ ತಮ್ಮನಿಗೂ, ಮುಖ್ಯ ಮುಖ್ಯ ರಾದ ಸೇನಾನಿಗಳಿಗೂ ಅವನು ತಿಳಿಸಿದನು. ಆಟಾಹುಲಪ್ಪಾನು ತೀರ ಸ್ವಲ್ಪ ಸರದಾರರೊಂದಿಗೆ ತಮ್ಮ ಶಿಬಿರಕ್ಕೆ ಬರುವಂತೆ ಮಾಡಿ, ತಮ್ಮ ಸವಾರರನ್ನೂ ಸೈನ್ಯವನ್ನೂ ಶಿಬಿರದ ಸುತ್ತಲಿನ ಮಂದಿರದಲ್ಲಿ ಮುಚ್ಚಿಡತಕ್ಕದ್ದು; ಶಿಷ್ಟಾ ಚಾರದಂತೆ ಆಗತ ಸ್ವಾಗತ ಮಾಡುವದರಲ್ಲಿ ತಾನು ತೊಡಗಿದಾಗ, ವಿಶಿಷ್ಟ ಪ್ರಕಾರದ ಸೂಚನೆಯಾದ ಕೂಡಲೆ, ಕುದುರೆ ಸವಾರರು ಮುತ್ತಿಗೆಯನ್ನು ಹಾಕಿ ರಾಜನನ್ನು ಸೆರೆಯಲ್ಲಿ ಹಿಡಿಯುತಕ್ಕದ್ದೆಂಬ ಹಂಚಿಕೆಯನ್ನು ಪಿಝಾ ರೋನು ಹಾಕಿದನು. ವಿಶ್ವಾಸಘಾತವಾದೀತೆಂಬ ಸಂಶಯವು ಆಟಾಹುಲ ಪ್ಪಾನಿಗೆ ಬಂದಿತ್ತೆಂದು ತೋರುವದಿಲ್ಲ. ಯಾಕೆಂದರೆ, ಮೊದಲು ಗೊತ್ತಾ ದಂತೆ, ಮಾನೆಯ ದಿವಸ ಅವನು ಒಂದು ಪಾಲಿಕೆಯಲ್ಲಿ ಕುಳಿತುಕೊಂಡು ಪಿಝಾರೋನ ಶಿಬಿರಕ್ಕೆ ಬಂದನು. ಅವನ ಸಂಗಡ ಅನೇಕ ಸರದಾರರಾ ದರೂ ಇದ್ದರು. ಅವನ ಸೈನ್ಯವು ತುಸು ಅಂತರದ ಮೇಲೆ ಬೀದಿಬೀದಿಗಳಲ್ಲಿ ನಿಂತಿತ್ತು. ಆಟಾಹುಲಪ್ಪಾನ ಪಾಲಿಕೆಯು ಶಿಬಿರದಲ್ಲಿ ಬಂದಕೂಡಲೆ ಪಿಝಾರೋನ ಸೈನ್ಯದ ಕೂಡ ಬಂದಿದ್ದ ಫ್ರಾಯರ ವಾಲವರ್ಡ ಎಂಬ ಪಾದ್ರಿಯು ಮುಂದಾಗಿ, "ನಾವು, ಪೃಥ್ವಿಯಮೇಲೆ ಪರಮೇಶ್ವರನ ಪ್ರತಿನಿಧಿ ಯಾದ ಪೋಪನ ಹಾಗೂ ಸ್ಪೇನದ ಬಾದಶಹನಾದ ಐದನೇ ಚಾರ್ಲಸನ ದೂತರಾಗಿದ್ದೇವೆ. ಪೋಪನ ಧರ್ಮವಾಗಿದ್ದ ಖ್ರಿಶ್ಚ್ಯಾನಿಟಿಯನ್ನೂ, ಸ್ಪೇನದ ಸಾರ್ವಭೌಮ ಚಾರ್ಲಸನ ವರ್ಚಸ್ವವನ್ನೂ ನೀವು ಒಪ್ಪಿಕೊಳ್ಳ ತಕ್ಕದ್ದೆ"ಂದು ದ್ವಿಭಾಷಿಯ ಮುಖಾಂತರವಾಗಿ ನಿವೇದಿಸಿದ ಉದ್ಧಾಮತನದ

ವಿನಂತಿಯನ್ನು ಕೇಳಿಕೊಂಡು, ರಾಜನ ಮುದ್ರೆಯು ಕ್ರೋಧದಿಂದಲೂ, ಸಂತಾಪದಿಂದಲೂ ಆರಕ್ತವಾಯಿತು. ನಮ್ಮ ದೇಶದ ಧರ್ಮವು ನಮಗೆ ವಂದನೀಯವಾಗಿದೆ, ನಮ್ಮ ಪರಮೇಶ್ವರನಾದ ಸೂರ್ಯನಿಗೂ. ಶ್ರೇಷ್ಠನಾದ ಮತ್ತೊಬ್ಬ ದೇವರು ಇರುವನೆಂದು ನಾವು ಮನ್ನಿಸುವದಿಲ್ಲ. ನಾನು ಪೇರೂ ದೇಶದ ಬಲಾಢ್ಯನಾದ ಸಾರ್ವಭೌಮನಿದ್ದು, ಸ್ಪೇನದ ರಾಜನ ವರ್ಚಸ್ಸನ್ನು ಒಪ್ಪಿಕೊಳ್ಳಲು ನಾನು ಸಿದ್ಧನಿಲ್ಲ" ರಾಜನು ಈ ಅರ್ಥದ ಉತ್ತರವನ್ನು ದ್ವಿಭಾಷಿಯ ಮುಖಾಂತರವಾಗಿ ಪಾದ್ರಿಗೆ ಕೊಟ್ಟನು. ನಿಮ್ಮ ಪೋಪನ ಧರ್ಮವು ಶ್ರೇಷ್ಠವಾಗಿದೆಂಬದಕ್ಕೆ ಯಾವ ಪ್ರಮಾಣವೆಂದು ರಾಜನು ವಾಲವರ್ದನಿಗೆ ಪ್ರಶ್ನವನ್ನು ಮಾಡಿದನು. ಆಗ್ಗೆ ಫ್ರಾಯರನ ಬಾಯಬಲದ ಗ್ರಂಥವನ್ನು ಮುಂದೆಮಾಡಿದನು. ಬಾಯಬಲದ ಈ ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು ಅಟಾಹುಲಪ್ಪಾನು ಅದನ್ನು ಬಿರಕಾಸಿ ಒಗೆದನು. "ಪರಸ್ಥರಾದ ನೀವು ನನ್ನ ದೇಶದಲ್ಲಿ ಬಂದು, ಇಲ್ಲದ ಕಾರಭಾರವನ್ನು ನಡೆಸಿರುವಿರಿ, ಇದರ ವಿಚಾರಣೆಯನ್ನು ಮಾಡುವದರ ಸಲುವಾಗಿ ನಾನು ಬಂದಿದ್ದೇನೆ." ಇದನ್ನು ಕೇಳಿ ಫ್ರಾಯರ ವಾಲವರ್ದನು ರೇಗಿಗೆದ್ದು, ಪಿಝಾರೋನನ್ನುದ್ದೇಶಿಸಿ ಅಂದದ್ದು, "ಈ ಉದ್ಧಾಮ ರಾಜನು ನಮ್ಮ ಧರ್ಮ ಪುಸ್ತಕವನ್ನು ಭೂಮಿಯ ಮೇಲೆ ಬಿರಕಾಸಿ ಒಗೆದು, ನಮ್ಮ ಧರ್ಮದ ಅಪಮಾನವನ್ನು ಮಾಡಿದ್ದಾನೆ. ಇವನ ಸಮಾಚಾರವನ್ನು ನೀವು ಈಗಲೇ ತೆಗೆದುಕೊಳ್ಳಬೇಕೆಂದು, ನಿಮ್ಮ ಧರ್ಮಗುರುವಾದ ನಾನು ನಿಮಗೆ ಆಜ್ಞಾಪಿಸುತ್ತೇನೆ." ಫ್ರಾಯರನ ಈ ಉದ್ಗಾರಗಳನ್ನು ಕೇಳಿದ ಕೂಡಲೆ, ಪಿಝಾರೋನು ತನ್ನ ಕೈಯಲ್ಲಿದ್ದ ನಿಶಾನಿಯಿಂದ ಸಂಜ್ಞೆಯನ್ನು ಮಾಡಿದನು. ಸಂಕೇತವಾದ ಕೂಡಲೆ, ಶಿಬಿರದ ಸುತ್ತಲೂ ಗುಪ್ತವಾಗಿದ್ದ ಸೈನ್ಯವು ಕೂಡಲೆ ಓಡಿಬಂದು ರಾಜನ ಪಾಲಕಿಗೆ ಮುತ್ತಿಗೆ ಹಾಕಿತು. ಹತ್ತರದಲ್ಲಿದ್ದ ಪೇರೂವ್ಹಿಯನ ಜನರ ಮೇಲೆ ಕುದುರೆಗಳನ್ನು ಹಾಕಿ ಬರ್ಚಿಗಳಿಂದ ಚುಚ್ಚಿ ಅವರನ್ನು ದೂರ ಓಡಿಸಿತು. ತಮ್ಮ ರಾಜನನ್ನು ತಮ್ಮ ಸಮಕ್ಷದಲ್ಲಿ ಸೆರೆಹಿಡಿಯುವದನ್ನು ನೋಡಲಾರದೆ ಇಂಕಾ ಸೈನ್ಯದವರು ಧಾವಿಸಿ ಬರಲು ಸ್ಪಾನಿಶರು ಅವರ ಮೇಲೆ ಗುಂಡುಗಳ ಮಳೆಯನ್ನು ಸುರುವಿ ಸಾವಿರಾರು ಜನರನ್ನು ನೆಲಕ್ಕೆ ಉರುಳಿಸಿದರು. ಅಟಾಹುಲಪ್ಪಾನನ್ನಾದರೂ ಯಮಸದನಕ್ಕೆ ಕಳಿಸಬೇಕೆಂದು ಕೆಲವು

ಸ್ಪಾನಿಆರ್ಡರು ಯೋಚಿಸಿದರು. ಆದರೆ, ಆವನನ್ನು ಕೊಲ್ಲುವದರಕಿಂತ ಜೀವಂತ ಹಿಡಿದು ಸೆರೆಯಲ್ಲಿಡುವದೇ ವಿಶೇಷವಾಗಿ ಲಾಭದಾಯಕವಾದದ್ದೆಂದು ಪಿಝಾರೋನು ಹೇಳಲು, ಅವನ ಅನುಯಾಯಿಗಳು ರಾಜನನ್ನು ಬಂಧಿಸಿ ಒಂದು ಕೋಠಡಿಯಲ್ಲಿ ಇಟ್ಟರು. ಶಿಬಿರದ ಸುತ್ತಲೂ ನೆರೆದ ಇಂಕಾ ಜನರ ಮೇಲೆ ಸಶಸ್ತ್ರಪಾಣಿಗಳಾದ ಸ್ಪಾನಿಆರ್ಡರು ಸಾಗಿಹೋಗಿ ಅವರಲ್ಲಿ ಕೆಲವರನ್ನು ಕಡಿದು ತುಂಡರಿಸಿದರು; ಉಳಿದವರನ್ನು ಆವರ ಮೇಲೆ ಕುದುರೆಗಳನ್ನು ಹಾಕಿ ಓಡಿಸಿದರು. ಈ ರೀತಿಯಾಗಿ ಪಿಝಾರೋನ ಯೋಚನೆಯು ಕೈಗೂಡಿತು. ಇಂಕಾಜನರ ಸಾರ್ವಭೌಮನಾದ ಅಟಾಹುಲಪ್ಪಾನು ದನಗಳನ್ನು ಕಾಯುವ ಅಕ್ಷರಶತ್ರುವಾದ, ಆದರೆ ಸಾಹಸಿಯಾದ ಸ್ಪಾನಿಆರ್ಡ ಮನುಷ್ಯನ ಬಂದಿವಾನನಾದನು. ಅಟಾಹುಲಪ್ಪಾನನ್ನು ಸೆರೆಹಿಡಿಯುವ ಗೊಂದಲದಲ್ಲಿ ನಾಲ್ಕೈದುಸಾವಿರ ಈದ್ದೇಶೀಯರು ಕೊಲ್ಲಲ್ಪಟ್ಟರು. ಉಳಿದ ಸೈನ್ಯವು ಹೆದರಿ ಪಲಾಯನಸೂತ್ರವನ್ನು ಹೇಳಿತು. ಹಲವರನ್ನು ಸ್ಪಾನಿಆರ್ಡರು ಸೆರೆಯಲ್ಲಿ ಹಿಡಿದು ಅವರನ್ನು ತಮ್ಮ ದಾಸರನ್ನಾಗಿ ಮಾಡಿದರು. ಇಂಕಾನ ಸೈನ್ಯವು ಓಡಿಹೋದ ಬಳಿಕ, ಪಿಝಾರೋನು ತನ್ನ ಸೈನ್ಯದೊಳಗಿನ ಮೂವತ್ತು ಸವಾರರನ್ನು ಅಟಾಹುಲಪ್ಪಾನು ಇಳಿದುಕೊಂಡಿದ್ದ ತೋಟದೋಗಿನ ಬಂಗಲೆಯನ್ನು ಸುಲಿದುಕೊಂಡು ಬರುವದಕ್ಕಾಗಿ ಕಳುಹಿಕೊಟ್ಟನು. ಈ ಸುಲಿಗೆಯಲ್ಲಿ ತಮ್ಮ ಕೈವಶವಾದ ಬೆಳ್ಳಿಬಂಗಾರದ ದೊಡ್ಡ ದೊಡ್ಡ ಪಾತ್ರೆಗಳನ್ನು ನೋಡಿ, ಸ್ಪಾನಿಆರ್ಡರು ಬೆರಗಾದರು. ದೊಡ್ಡ ದೊಡ್ಡ ಆಕಾರದ ಪಚ್ಚೆಗಳಾದರೂ ಈ ಸುಲಿಗೆಯಲ್ಲಿ ಸ್ಪಾನಿಆರ್ಡರಿಗೆ ದೊರೆದವು. ಸಲಿಗೆಯಲ್ಲಿ ದೊರೆತ ಬಂಗಾರವನ್ನು ಪಿಝಾರೋನೂ ಆವನ ಅನುಯಾಯಿಗಳೂ ಮೇಲಿಂದ ಮೇಲೆ ತೂಕಮಾಡಿ ನೋಡುವದನ್ನು ಅಟಾಹುಲಪ್ಪಾನು ಕಂಡು, ಪರಸ್ಥರಾದ ಈ ಸ್ಪಾನಿಆರ್ಡರ ಮೂಲದೇಶವು ದರಿದ್ರವಾಗಿರಬಹುದೆಂತಲೂ ಈ ಜನರು ಬಂಗಾರವನ್ನು ನೋಡಿರಬಹುದಾಗಿಲ್ಲೆಂತಲೂ ಆವನು ತರ್ಕಿಸಿದನು. ಅಪರಿಮಿತವಾದ ಬಂಗಾರದ ಆಮಿಷವನ್ನು ಇವರಿಗೆ ತೋರಿಸಿದರೆ. ಇವರು ತನ್ನ ಮುಕ್ತತೆಯನ್ನು ಮಾಡಬಹುದೆಂಬ ಆನುಮಾನವನ್ನು ಮಾಡಿ, ಅವನು ಪಿಝಾರೋನ ಹತ್ತರ ಹೋಗಿ ಅಂದದ್ದು : “ ಸಲಿಗೆಯಲ್ಲಿ ದೊರೆತ ಅಲ್ಪ ಬಂಗಾರದಿಂದಲೇ ನೀವು

ಆಶ್ಚರ್ಯಚಕಿತರಾದದ್ದನ್ನು ನೋಡಿ, ನನಗೆ ಚಮತ್ಕಾರವೆನಿಸುತ್ತದೆ. ನಾವು ಕುಳಿತಿರುವ ಕೋಣೆಯ ತುಂಬ ಬಂಗಾರವನ್ನು ಕ್ಷಣಾರ್ಧದಲ್ಲಿ ನಾನು ನಿಮಗೆ ತಂದುಕೊಡುತ್ತೇನೆ " ಈ ಸಂಗತಿಯು ಮೊಟ್ಟಮೊದಲು ಪಿಝಾರೋನಿಗೆ ನಿಜವಾದದ್ದೆಂದು ತೋರಲಿಲ್ಲ. ಅಟಾಹುಲಪ್ಪಾನು ಇಲ್ಲದ್ದೊಂದು ಹರಟೆಯನ್ನು ಕೊಚ್ಚುತ್ತಾನೆಂದು ಅವನು ಭಾವಿಸಿದನು. "ನೀವು ನನ್ನನ್ನು ಬಂಧಮುಕ್ತನನ್ನಾಗಿ ಮಾಡಿದರೆ, ಈ ಕೋಣೆಯ ತುಂಬ ಬಂಗಾರವನ್ನು ನಾನು ನಿಮಗೆ ತಂದುಕೊಡುವೆನೆ"ಂದು ಅಟಾಹುಲಪ್ಪಾನು ಆಗ್ರಹಪೂರ್ವಕವಾಗಿ ಮೇಲಿಂದಮೇಲೆ ಪಿಝಾರೋನಿಗೆ ಹೇಳಹತ್ತಿದನು. ಕೊನೆಗೆ ಅಟಾಹುಲಪ್ಪಾನು ೨೨ ಫೂಟು ಉದ್ದವಾದ ೧೭ ಫೂಟು ಅಗಲವಾದ ಹಾಗೂ ೯ ಫೂಟು ಎತ್ತರವಾದ ಕೋಣೆಯನ್ನು ಬಂಗಾರದಿಂದ ತುಂಬಿ, ಆ ಬಂಗಾರವನ್ನು ಪಿಝಾರೋನಿಗೆ ಅರ್ಪಣ ಮಾಡಿದರೆ ಪಿಝಾರೋನು ಅವನನ್ನು ಬಂಧಮುಕ್ತಮಾಡಬೇಕೆಂದು ಗೊತ್ತಾಯಿತು. ಈ ಬಂಗಾರದ ಹೊರತು ಇಷ್ಟೇ ಬೆಳ್ಳಿಯನ್ನಾದರೂ ತಂದುಕೊಡುವೆನೆಂದು ಅಟಾಹುಲಪ್ಪಾನು ತಾನಾಗಿಯೇ ಸ್ವಸಂತೋಷದಿಂದ ಪಿಝಾರೋನಿಗೆ ಹೇಳಿದನು. ಅಟಾಹುಲಪ್ಪಾನು ಎರಡು ತಿಂಗಳದ ಅವಧಿಯಲ್ಲಿ ತನ್ನ ವಚನವನ್ನು ಪೂರ್ಣಮಾಡತಕ್ಕದ್ದೆಂದು ಮಾತಾದರೂ ಗೊತ್ತಾಗಿತ್ತು.

ಪರಕೀಯರಾದ ಸ್ಪಾನಿಆರ್ಡರು ಅಟಾಹುಲಪ್ಪಾನನ್ನು ಸೆರೆಹಿಡಿದಿದ್ದಾರೆಂಬ ವರ್ತಮಾನವು ಪರಾಭೂತನಾಗಿ ಪ್ರತಿಬಂಧದಲ್ಲಿದ್ದ ಹೌಸಕಾರನಿಗೆ ವಿದಿತವಾಯಿತು. ಆಗ್ಗ ಅವನು ಪಿಝಾರೋನಿಗೆ ಹೇಳಿಕಳಿಸಿದ್ದೇನಂದರೆ, "ನನ್ನ ಹಾಗೂ ನನ್ನ ತಮ್ಮನ ನಡುವೆ ರಾಜ್ಯದ ಸಂಬಂಧವಾಗಿ ವಿರೋಧವಿದೆ. ತಮ್ಮಂಥ ಬಲಾಢ್ಯರಾದ ಪರಸ್ಥರು ಅದರ ನಿರ್ಣಯವನ್ನು ಮಾಡಬೇಕು." ಅಟಾಹುಲಪ್ಪಾನ ಮಲಅಣ್ಣನ ಈ ವಿನಂತಿಯು ಪಿಝಾರೋನಿಗೆ ಒಳ್ಳೆ ಹಿತಕರವಾಗಿ ಪರಿಣಮಿಸಿತು. ಯಾಕಂದರೆ, ಪೇರೂದ ಸಾಮ್ರಾಜ್ಯದ ಸ್ವಾಮಿತ್ವದ ಸಂಬಂಧವಾಗಿ ಉದ್ಭವಿಸಿದ ವಾದದ ನಿರ್ಣಯವನ್ನು ಮಾಡುವ ಕೆಲಸವೇ ತನ್ನ ಕಡೆಗೆ ಬಂದರೆ, ತನಗೆ ಅನುಕೂಲವಾದ ಹಸ್ತಕನೇ ಪಟ್ಟದ ಮೇಲೆ ಕುಳಿತು, ಪೇರೂದ ರಾಜ್ಯವು ಅನಾಯಾಸವಾಗಿಯೇ ಸ್ಪೇನ ದೇಶದ ಮಾಂಡಲಿಕ ಸಂಸ್ಥಾನವಾಗುವದೆಂದು ಅವನು ಯೋಚಿಸಿದನು.

ಹೌಸಕಾರ ಹಾಗೂ ಅಟಾಹುಲಪ್ಪಾ ಈ ಉಭಯ ರಾಜಪುರುಷರೂ ಆತ್ಮ ಘಾತಕರಾಗಿಯೂ, ರಾಜಕಾರಣದಲ್ಲಿ ತೀರ ಹೊಸಬರಾಗಿಯೂ ತೋರು ತ್ತಾರೆ. ಅಟಾಹುಲಪ್ಪಾನು ಬಂಧಮುಕ್ತನಾಗುವದಕ್ಕಾಗಿ ಒಂದು ಕೋಣೆಯ ತುಂಬ ಬಂಗಾರವನ್ನು ಮಾತ್ರ ಕೊಡಲಿಕ್ಕೆ ಒಪ್ಪಿಕೊಂಡಿದ್ದಾನೆಂಬ ಸಂಗ ತಿಯು ಹೌಸಕಾರನಿಗೆ ತಿಳಿದ ಕೂಡಲೆ, “ಕುಝ್ಕೋ ರಾಜಧಾನಿಯಲ್ಲಿ ಇಂಥ ಸಾವಿರಾರು ಕೋಣೆಗಳು ತುಂಬಿ ಉಳಿಯುವಷ್ಟು ಬಂಗಾರವಿದೆ. ನೀವು ನನ್ನನ್ನು ನನ್ನ ತಮ್ಮನ ಪ್ರತಿಬಂಧದಿಂದ ಮುಕ್ತಮಾಡಿ ಪೇರೂದ ಪಟ್ಟದ ಮೇಲೆ ಕೂಡಿಸಿದರೆ, ಅಟಾಹುಲಪ್ಪಾನು ಕೊಡಮಾಡಿದ ಬಂಗಾರದ ಹತ್ತುಮಡಿಯಷ್ಟು ಬಂಗಾರವನ್ನು ನಾನು ಕೊಡುತ್ತೇನೆ” ಂದು ಹೌಸ ಕಾರನು ತನ್ನ ಚಾರರ ಮುಖಾಂತರವಾಗಿ ಪಿಝಾರೋನಿಗೆ ತಿಳಿಸಿದನು. ಅಟಾಹುಲಪ್ಪಾನು ಪಿಝಾರೋನ ಶಿಬಿರದಲ್ಲಿ ಬಂದಿವಾನನಾಗಿದ್ದರೂ ದೊಡ್ಡ ದೊಡ್ಡ ಇಂಕಾ ಸರದಾರರಿಗೆ ಅವನ ಭೆಟ್ಟಿಗಾಗಿ ಬರುವದಕ್ಕೆ ಪ್ರತಿಬಂಧವಿದ್ದಿದ್ದಿಲ್ಲ. ಮೇಲಾಗಿ ಕೋಣೆತುಂಬ ಬಂಗಾರವನ್ನು ಕೊಡ ತಕ್ಕದ್ದು, ಅದಕ್ಕಾಗಿ ಯೋಗ್ಯ ಸ್ಥಳದಲ್ಲಿ ಚಾರರನ್ನು ಕಳಿಸತಕ್ಕದ್ದೆಂಬ ನೆವದಿಂದ ಅಟಾಹುಲಪ್ಪಾನು ತನ್ನ ಸೇವಕರನ್ನು ಮೇಲಿಂದ ಮೇಲೆ ತನ್ನ ಕಡೆಗೆ ಕರೆಸಿಕೊಳ್ಳುತ್ತಿದ್ದನು. ಇವರ ಮುಖಾಂತರವಾಗಿ ತನ್ನ ಮಲಅಣ್ಣ ನಾದ ಹೌಸಕಾರನು ಪಿಝಾರೋನ ಕೂಡ ನಡಿಸಿದ ಗುಪ್ತಕಾರಸ್ಥಾನವು ಅಟಾಹುಲಪ್ಪಾನಿಗೆ ತಿಳಿದುಬಂದಿತು. ಪಿಝಾರೋನು ಸುವರ್ಣದ ಆಶೆಗಾಗಿ ಹೌಸಕಾರನ ಪಕ್ಷವನ್ನು ಕಟ್ಟಿದರೆ, ತನಗೆ ಆಮರಣ ಬಂದಿವಾಸದಲ್ಲಿಯೇ ಇರಬೇಕಾಗುವದೆಂಬ ಭೀತಿಯು ಅಟಾಹುಲಪ್ಪಾನಿಗೆ ಹುಟ್ಟಹತ್ತಿತು. ಪಿಝಾರೋನಿಗೆ ಕೊಡಮಾಡಿದ ಸುವರ್ಣವನ್ನು ತರುವದಕ್ಕಾಗಿ ಕಳಿಸಿದ ಸೇವಕರ ಮುಖಾಂತರವಾಗಿ, ಅವನು ಕೆಲವು ಸಾಂಕೇತಿಕವಾದ ಸಂದೇಶ ಗಳನ್ನು ಕಳಿಸಿ, ತನ್ನ ಸಾಪತ್ನ ಅಣ್ಣನ ಕೊಲೆಮಾಡಿಸಿದನು. ಹೌಸಕಾರ ನನ್ನು ತಣ್ಣಗಿನ ನೀರಿನ ಸರೋವರದಲ್ಲಿ ಬಲಾತ್ಕಾರದಿಂದ ಮುಣುಗಿಸಿ, ಅಟಾಹುಲಪ್ಪಾನ ಪಕ್ಷದವರು ಅವನನ್ನು ಕೊಂದರು. “ನೀರಿನಲ್ಲಿ ಮುಣು ಗಿಸಿ ನನ್ನ ಶ್ವಾಸಗಳನ್ನು ನಿರೋಧಿಸಿ, ನನ್ನ ಪ್ರಾಣಗಳನ್ನು ತೆಗೆದುಕೊಳ್ಳು ತ್ತಿರುವ ಕ್ರೂರನಾದ, ನಿರ್ದಯನಾದ, ಬಂಧುಘಾತಕಿಯಾದ, ನರಪಶು

ವಾದ ಅಟಾಹುಲಪ್ಪಾನ ಜೀವವನ್ನು ಪರಮಾವಧಿಯ ನಿರ್ದಯತನದಿಂದ ಪರಕೀಯರಾದ ಸ್ಪಾನಿಆರ್ಡರು ತೆಗೆದುಕೊಳ್ಳದೆ ಇರಲಾರರೆ”ಂದು ನೀರಿನಲ್ಲಿ ಮುಣುಗಿ ಸಾಯುವದರ ಪೂರ್ವದಲ್ಲಿ ಹೌಸಕಾರನು ತನ್ನ ತಮ್ಮನನ್ನು ಶಾಪಿಸಿದನು. ರಾಜಮಂದಿರದೊಳಗಿನ ಸರೋವರದಲ್ಲಿ ಈಸುತ್ತಿರುವಾಗ ಕೈಸೋತು ಹೌಸಕಾರನು ಆಕಸ್ಮಿಕವಾಗಿ ನೀರಿನಲ್ಲಿ ಮುಣುಗಿ ಸತ್ತನೆಂದು ಅಟಾಹುಲಪ್ಪಾನ ಸೇವಕರು ಸುದ್ದಿಯನ್ನು ಹುಟ್ಟಿಸಿದರು. ಆದರೆ, ನಿಜವಾದ ಸಂಗತಿಯು ಪಿರ್ಝಾರೋನಿಗೆ ತಿಳಿದುಬಂದಿತು. “ನೀವು ನನ್ನ ಪ್ರತಿಬಂಧದಲ್ಲಿರುವಾಗ ಇಂಥ ಕೃಷ್ಣಕಾರಸ್ಥಾನಗಳನ್ನು ಮಾಡಿ ನಿಮ್ಮ ಅಣ್ಣನ ಕೊಲೆಯನ್ನು ಮಾಡಿಸಿದನೆಂಬ ಸಂಗತಿಯು ಅತ್ಯಂತ ನೀಚತನದೂ, ರಾಕ್ಷಸವೃತ್ತಿಯ ಮನುಷ್ಯನಿಗೆ ಮಾತ್ರ ಶೋಭಿಸುವಂಥದೂ ಆಗಿದೆ”ಂದು ಪಿರ್ಝಾರೋನು ಅಟಾಹುಲಪ್ಪಾನ ನಿರ್ಭರ್ತ್ಸನೆಯನ್ನು ಮಾಡಿದನು. “ನಾನು ಇಲ್ಲಿ ನಿಮ್ಮ ಪ್ರತಿಬಂಧದಲ್ಲಿದ್ದೇನೆ. ನನ್ನ ಪರೋಕ್ಷದಲ್ಲಿ ಬೇರೆ ಯಾರೋ ನನ್ನ ಅಪ್ಪಣೆಯ ಹೊರತು ಈ ಕಾರ್ಯವನ್ನು ಮಾಡಿದ್ದಾರೆ. ನನ್ನ ಅಣ್ಣನ ಕೊಲೆಯಲ್ಲಿ ನನ್ನ ಅಂಗವು ಯತ್‌ಕಿಂಚಿತವಾದರೂ ಇಲ್ಲ” ಮುಂತಾದ ಕಾರಣ ಪರಂಪರೆಯನ್ನು ಅಟಾಹುಲಪ್ಪಾನು ಮುಂದೆಮಾಡಿದನು.

ಇಷ್ಟರಲ್ಲಿ ಅಟಾಹುಲಪ್ಪಾನು ಕೊಡಮಾಡಿದ ಬಂಗಾರವು ದೂರದೂರ ಸ್ಥಳಗಳಿಂದ ಬರಹತ್ತಿತು. ಇಂಕಾನ ರಾಜಮಂದಿರದಲ್ಲಿಯೂ ದೇವಾಲಯದಲ್ಲಿಯೂ ಉಪಕರಣಿಯ ಪಾತ್ರೆಗಳೂ, ಕೂಡುವ ಮಣೆಗಳೂ, ದೀಪಗಳನ್ನು ಹಚ್ಚುವ ಸಮೆಗಳೂ ಬಂಗಾದವಾಗಿದ್ದವು. ಇದಲ್ಲದೆ ಎಷ್ಟೋ ದೇವಾಲಯಗಳ ಗೋಡೆಗಳೂ, ನೆಲವೂ ಬಂಗಾರದ ದಪ್ಪಾದ ತಗಡುಗಳಿಂದ ಆಚ್ಛಾದಿತವಾಗಿದ್ದವು. ಬಂಗಾರದ ಇಂಥ ಅಪರಂಪಾರವಾದ ಸಂಚಯವು ಪೇರೂ ದೇಶದಲ್ಲಿದ್ದದ್ದರಿಂದ ಅಟಾಹುಲಪ್ಪಾನು ಕೊಡಮಾಡಿದ ಒಂದು ಕೋಣೆಯು ತುಂಬ ಬಂಗಾರವು ಆಗಲೇ ಕೂಡಿತು. ಅವನು ಸ್ವಸಂತೋಷದಿಂದ ತಾನಾಗಿಯೇ ಕೊಡುತ್ತೇನೆಂದು ಹೇಳಿದ ಬೆಳ್ಳಿಯಾದರೂ ಪಿರ್ಝಾರೋನ ವಶಕ್ಕೆ ಬಂದಿತು. ಗೊತ್ತುಮಾಡಿದಂತೆ ನಿಮ್ಮ ಕಡಿಂದ ಬೆಳ್ಳಿಬಂಗಾರವು ಬಂದು ನಮಗೆ ಮುಟ್ಟಿತೆಂದು ಪಿರ್ಝಾರೋನು ಅಟಾಹುಲಪ್ಪಾನಿಗೆ ‘ಪಾವತಿ’ಯನ್ನಾದರೂ ಕೊಟ್ಟನು. ಇನ್ನು ಮೇಲೆ ಪಿರ್ಝಾರೋನು ತನ್ನನ್ನು ಬಿಟ್ಟು

ಕೊಡುವನೆಂದು ವಿಚಾರಮೂಢನಾದ ಅಟಾಹುಲಪ್ಪಾನು ಯೋಚಿಸಹತ್ತಿದನು. ಆದರೆ, ಪಿಝಾರೋನು ಇಲ್ಲದ್ದೊಂದು ಹೊಸ ಹೊಸ ನೆವಗಳನ್ನು ಹೇಳಿ ಇಂದುನಾಳೆ ಎನ್ನಹತ್ತಿದನು. ನಿಮ್ಮ ಬಂಗಾರದ ತೂಕವೇ ಆಗಿಲ್ಲೆಂದು ಕೆಲವು ದಿವಸಗಳು ಹೋದವು. ಕಡೆಗೆ ಬಂಗಾರದ ತೂಕವಾಗಿ ಅದನ್ನು ಕರಗಿಸಿ, ಅದರ ಇಟ್ಟಂಗೆಗಳು ಮಾಡಲ್ಪಟ್ಟವು. ಈ ಬಂಗಾರದ ಬೆಲೆಯು ೩೫ ಲಕ್ಷ ಗಿನಿಯಾಯಿತು. ೫। ಕೋಟಿ ರೂಪಾಯದ ಬಂಗಾರವನ್ನು ಪಿಝಾರೋನು ಎರಡು ತಿಂಗಳುಗಳಲ್ಲಿ ಸಂಪಾದಿಸಿದನು. ಪಿಝಾರೋನ ಸೈನ್ಯದಲ್ಲಿ ಎರಡುಸಾವಿರ ಸ್ಪಾನಿಆರ್ಡ‍ರು ಮಾತ್ರ ಇದ್ದರು. ಪ್ರತಿಯೊಬ್ಬ ಸ್ಪಾನಿಆರ್ಡನ ಪಾಲಿಗೆ ೨॥ ಲಕ್ಷ ಬೆಲೆಯ ಬಂಗಾರವು ಬರಬಹುದಾಗಿತ್ತು. ಇಷ್ಟು ದ್ರವ್ಯ ದೊರೆದರೂ ಪಿಝಾರೋನು ಅಟಾಹುಲಪ್ಪಾನನ್ನು ಮುಕ್ತಮಾಡಲಿಲ್ಲ. "ನೀನು ನಿನ್ನ ಅಣ್ಣನ ಕೊಲೆಯನ್ನು ಮಾಡಿಸಿರುವಿ, ಸ್ಪಾನಿಶ ಜನರ ವಿರುದ್ಧವಾಗಿ ಬಂಡಾಯವನ್ನು ಮಾಡುವದಕ್ಕೆ ನೀನು ನಿನ್ನ ಪ್ರಜರನ್ನು ಉತ್ತೇಜಿಸುತ್ತಿರುವಿ, ಸಹಸ್ರಾವಧಿ ಸ್ತ್ರೀಯರನ್ನು ಮದುವೆ ಮಾಡಿಕೊಂಡು ವ್ಯಭಿಚಾರದಂಥ ಘೋರವಾದ ಪಾತಕಗಳನ್ನು ಮಾಡಿರುವಿ; ಈ ಎಲ್ಲ ಕಾರಣಗಳ ಸಲುವಾಗಿ ನಿನ್ನ ವಿಚಾರಣೆಯಾಗುವದು ಅಗತ್ಯವಿದೆ;" ಈ ಪ್ರಕಾರವಾಗಿ ಪಿಝಾರೋನೂ ಅವನ ಸೈನ್ಯದವರೂ ಅಟಾಹುಲಪ್ಪಾನನ್ನು ಅಪರಾಧಿಯನ್ನಾಗಿ ಎಣಿಸಹತ್ತಿದರು.

## ಅಟಾಹುಲಪ್ಪಾನಿಗೆ ದೇಹಾಂತ ಶಿಕ್ಷೆಯು

ಅಟಾಹುಲಪ್ಪಾನು ತಂದುಕೊಟ್ಟ ಬೆಳ್ಳಿಬಂಗಾರದ ವಿಭಾಗಣಿಯಲ್ಲಿ ಸ್ಪೇನದ ಅರಸನ ಭಾಗವೆಂದು ಒಂದು ಪಂಚಮಾಂಶವು ಒಂದು ಕಡೆಯಲ್ಲಿ ತೆಗೆದಿಡಲ್ಪಟ್ಟಿತು. ಪಿಝಾರೋ, ಅವನ ತಮ್ಮನಾದ ಹರ್ನಾಂಡೊ ಹಾಗೂ ಡಿ. ಸೋಟೊ ಈ ತ್ರಿವರ್ಗರು ಮುಖ್ಯರಾದ ಸೇನಾನಿಗಳೆಂದು ಅರ್ಧ ಭಾಗವನ್ನು ಎತ್ತಿದರು. ಇಂಕಾ ರಾಜನ ಬಂಗಾರದ ಸಿಂಹಾಸನವು ಪಿಝಾರೋನಿಗೆ 'ಸ್ಪೆಶಲ್' ಪಾರಿತೋಷಕವೆಂದು ಕೊಡಲ್ಪಟ್ಟಿತು. ಸೈನ್ಯದೊಳಗಿನ ಪ್ರತಿಯೊಬ್ಬ ಶಿಪಾಯಿಗೆ ಇಪ್ಪತ್ತೈದರಿಂದ ಐವತ್ತು ಸಾವಿರ ರೂಪಾಯಿಗಳವರೆಗೆ ದೊರೆದವು. ಅಟಾಹುಲಪ್ಪಾನಿಂದ ದೊರೆದ ದ್ರವ್ಯದ ವ್ಯವಸ್ಥೆಯು ಈ ರೀತಿಯಾಗಿ ಆದಬಳಿಕ, ಅಟಾಹುಲಪ್ಪಾನ ವ್ಯವಸ್ಥೆಯನ್ನು ಹೇಗೆ ಹಚ್ಚ

ಬೇಕೆಂಬ ವಿವಂಚನೆಯಲ್ಲಿ ಸ್ಪಾನಿಶ ಸೈನ್ಯವು ಬಿದ್ದಿತು. ಪೇರೂವ್ಹಿಯನ ರಾಷ್ಟ್ರದೊಳಗಿನ ಅಸಂಖ್ಯಾತರಾದ ಜನರು ಅವನ ಮುಕ್ತತೆಗಾಗಿ ತಮ್ಮ ಚಿಕ್ಕ ಸೈನ್ಯದ ಮೇಲೆ ಸಾಗಿ ಬಂದರೆ, ಅಟಾಹುಲಪ್ಪಾನು ತಮ್ಮ ಕೈಯೊಳಗಿಂದ ಪಾರಾಗುವದಲ್ಲದೆ, ಅನಾಯಾಸವಾಗಿ ದೊರೆದ ಬಂಗಾರವಾದರೂ ತಮ್ಮ ಕೈಬಿಟ್ಟು ಹೋಗಿ ನಿರರ್ಥಕವಾಗಿ ತಮ್ಮ ಜೀವಕ್ಕಾದರೂ ಅಪಾಯವಾದೀತೆಂಬ ಭೀತಿಯು ಪಿರ್ಝಾರೋನ ಸೈನ್ಯಕ್ಕೆ ಹುಟ್ಟಹತ್ತಿ, ಅಟಾಹುಲಪ್ಪಾನ ವಿಷಯವಾಗಿ ನಮ್ಮನ್ನು ನಿರ್ಭೀತರನ್ನಾಗಿ ಮಾಡುವದಕ್ಕೆ ಯಾವದಾದರೊಂದು ಉಪಾಯವನ್ನು ಯೋಚಿಸಬೇಕೆಂದು ಸೈನ್ಯದವರು ಪಿರ್ಝಾರೋನ ಬೆನ್ನುಹತ್ತಿದರು. ತನ್ನ ಬಂಗಾರವನ್ನು ಎತ್ತಿಹಾಕಿಯೂ ತನ್ನನ್ನು ಬಂಧಮುಕ್ತನನ್ನಾಗಿ ಮಾಡುವದಕ್ಕೆ ಪಿರ್ಝಾರೋನು ಹಿಂದೆಮುಂದೆ ನೋಡುತ್ತಾನೆಂಬದನ್ನು ಕಂಡು ಅಟಾಹುಲಪ್ಪಾನು ತೀರ ಸಂತಾಪಗೊಂಡನು. ಆದರೆ, ಬಂದಿವಾಸದಲ್ಲಿ ಬಿದ್ದು ತೀರ ಬಲಹೀನನಾದ ರಾಜನ ಸಂತಾಪವನ್ನು ಕೇಳುವವರಾರು? "ನನ್ನ ಮುಕ್ತತೆಯು ಎಂದಾಗುವದು? ವಿಶ್ವಾಸಘಾತವನ್ನು ಮಾಡಿ ನನ್ನನ್ನು ಆಮರಣ ಪ್ರತಿಬಂಧದಲ್ಲಿಯೇ ಇಡುವ ವಿಚಾರವನ್ನು ನೀವು ಮಾಡಿರುವಿರೇನು?" ಮುಂತಾದ ಪ್ರಶ್ನಗಳ ವೃಷ್ಟಿಯನ್ನೇ ಇಂಕಾ ರಾಜನು ಪಿರ್ಝಾರೋನ ಮೇಲೆ ಪ್ರತಿನಿತ್ಯ ಮಾಡಹತ್ತಲು, ಅವನ ಮುಕ್ತತೆಯಾಗುವದು ಒತ್ತಟ್ಟಿಗುಳಿದು ಅವನ ಕೈಕಾಲುಗಳು ಮಾತ್ರ ಶೃಂಖಲೆಗಳಿಂದ ಬದ್ಧವಾದವು. ಅಟಾಹುಲಪ್ಪಾನನ್ನು ವಿಲಂಬಮಾಡದೆ ಕೊಂದುಹಾಕಬೇಕು; ಇಲ್ಲದಿದ್ದರೆ ಲಕ್ಷಾವಧಿ ಜನರು ನಮ್ಮ ಸೈಮೇಲೆ ಬಿದ್ದು ಸಂಪೂರ್ಣವಾಗಿ ನಮ್ಮ ನಾಶವನ್ನು ಮಾಡುವರೆಂದು ಪಿರ್ಝಾರೋನ ಸೈನ್ಯದವರು ಅನ್ನಹತ್ತಿದರು. ಆಗ್ಗೆ ಅಟಾಹುಲಪ್ಪಾನ ಮೇಲೆ ಹನ್ನೆರಡು ಅಪರಾಧಗಳನ್ನು ಮಾಡಿದ ದೋಷವು ಹೊರಿಸಲ್ಪಟ್ಟು, ಕೋರ್ಟಮಾರ್ಶಲ್ಲದ ಮುಂದೆ ಅವನ ವಿಚಾರಣೆಯಾಗತಕ್ಕದ್ದೆಂದು ಗೊತ್ತಾಯಿತು. ೧ ತನ್ನ ಅಣ್ಣನ ಕೊಲೆಮಾಡೋಣ, ೨. ಮೂರ್ತಿಪೂಜೆಯಂಥ ಪಾಪಕರ್ಮವನ್ನು ಆಚರಿಸೋಣ, ೩. ಅನೇಕ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳೋಣ, ಹಾಗೂ ವ್ಯಭಿಚಾರ ಮಾಡೋಣ, ೪ ತನ್ನ ಅಣ್ಣನನ್ನು ನಾಶಗೊಳಿಸುವದಕ್ಕಾಗಿ ಪೇರೂ ರಾಜ್ಯದೊಳಗಿನ ಸಂಪತ್ತಿಯ ದುರುಪಯೋಗ

ಮಾಡಿ ರಾಷ್ಟ್ರದ ಹಣವನ್ನು ಹಾಳು ಮಾಡೋಣ, ೫. ಪಿರ್ಯುರೋನ ವಿರುದ್ಧವಾಗಿ ತನ್ನ ಜನರಿಗೆ ಉತ್ತೇಜನವನ್ನು ಕೊಡೋಣ ಇವೇ ಮುಂತಾದವು ಹನ್ನೆರಡು ದೋಷಗಳಲ್ಲಿ ಮುಖ್ಯಮುಖ್ಯವಾದ ದೋಷಗಳಾಗಿದ್ದವು. ಇವುಗಳಿಗೆ ಅಟಾಹುಲಪ್ಪಾನು ಕೊಟ್ಟ ಉತ್ತರವೆಂದರೆ, "ಅನೇಕ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳುವದೂ, ಮೂರ್ತಿಪೂಜೆಯನ್ನು ಮಾಡುವದೂ ನನ್ನ ಧರ್ಮಕ್ಕೆ ಮಾನ್ಯವಾಗಿದೆ. ಅದರ ನ್ಯಾಯಾನ್ಯಾಯ ಮಾಡುವದಕ್ಕೆ ಪರಸ್ಥರಾದ ನಿಮಗೆ ಅಧಿಕಾರವಿಲ್ಲ. ನನ್ನ ಅಣ್ಣನ ಕೂಡ ನಾನು ಯುದ್ಧವನ್ನು ಮಾಡಿರಬಹುದು, ಇಲ್ಲವೆ ಪೇರೂ ದೇಶದೊಳಗಿನ ಸಂಪತ್ತಿಯನ್ನು ನಾನು ನನ್ನ ಮನಸ್ಸಿಗೆ ಬಂದಂತೆ ಹಾಳುಮಾಡಿರಬಹುದು, ಆದರೆ ಆ ಸಂಗತಿಗಳು ನನ್ನ ಅಧಿಕಾರಕ್ಕೆ ಒಳಪಟ್ಟದ್ದವು ಅದರ ಸಲುವಾಗಿ ನಾನು ನಿಮಗೆ ಉತ್ತರವನ್ನು ಕೊಡಬೇಕೆಂದು ನನಗೆ ಅವಶ್ಯ ತೋರುವದಿಲ್ಲ. ನಿಮ್ಮ ವಿರುದ್ಧವಾಗಿ ಬಂಡಾಯವನ್ನು ಎಬ್ಬಿಸುವದಕ್ಕೆ ನಾನು ನನ್ನ ಪ್ರಜರನ್ನು ಉತ್ತೇಜಿಸಿದೆನೆಂಬ ಮಾತು ಅಸಂಭವನೀಯವಾದದ್ದು; ಯಾಕಂದರೆ, ನಾನು ನಿಮ್ಮ ಪ್ರತಿಬಂಧದಲ್ಲಿದ್ದು, ನನ್ನ ಕಡೆಗೆ ಬರುವ ನನ್ನ ಸರದಾರರ ಭೆಟ್ಟಿಯನ್ನು ನಾನು ನಿಮ್ಮ ದ್ವಿಭಾಷಿಯ ಸಮಕ್ಷದಲ್ಲಿ ತೆಗೆದುಕೊಳ್ಳುತ್ತಿರುವದರಿಂದ, ಬಂಡಾಯ ಮಾಡುವದಕ್ಕೆ ಪ್ರೋತ್ಸಾಹಕವಾದ ಸಂದೇಶಗಳನ್ನು ನನ್ನ ಪ್ರಜರಿಗೆ ಕಳಿಸುವದು ನನಗೆ ಶಕ್ಯವಾದ ಮಾತಲ್ಲ." ಅಟಾಹುಲಪ್ಪಾನ ಈ ಉತ್ತರವು ಸರಲವಾದದ್ದೂ, ಸ್ಪಷ್ಟವಾದದ್ದೂ ಇತ್ತು. ಆದರೆ, ನ್ಯಾಯದ ಸೋಗು ಮಾಡಿ, ಇಂಥಾ ರಾಜನಿಗೆ ದೇಹಾಂತ ಶಿಕ್ಷೆಯನ್ನು ವಿಧಿಸುವ ನಿಶ್ಚಯವು ಸ್ಪಾನಿಶ ಲಷ್ಕರದಲ್ಲಿ ಮೊದಲೇ ಮಾಡಲ್ಪಟ್ಟದ್ದರಿಂದ, ಕೋರ್ಟಮಾರ್ಶಲವು ಅಟಾಹುಲಪ್ಪಾನು ದೋಷಿಯೆಂದು ನಿರ್ಣಯಿಸಿ, ಅವನನ್ನು ಕಂಬಕ್ಕೆ ಕಟ್ಟಿ ಅವನ ಸುತ್ತಲೂ ಕಟ್ಟಿಗೆಯ ರಾಶಿಯನ್ನು ರಚಿಸಿ ಅದಕ್ಕೆ ಬೆಂಕಿಯನ್ನು ಹಚ್ಚಿ, ಅವನನ್ನು ಜೀವಂತ ಸುಟ್ಟುಬಿಡಬೇಕೆಂಬ ಅಮಾನುಷವಾದ ಶಿಕ್ಷೆಯನ್ನು ವಿಧಿಸಿತು. ಸ್ಪಾನಿಶ ಸೈನ್ಯದಲ್ಲಿ ನ್ಯಾಯಪ್ರಿಯರೂ, ಸಹೃದಯ ಅಂತಃಕರಣದವರೂ ಆಗಿದ್ದ ಅಲ್ಪಸ್ವಲ್ಪ ಜನರು ಅಟಾಹುಲಪ್ಪಾನನ್ನು ಈ ರೀತಿಯಾಗಿ ನಿರ್ದಯತನದಿಂದಲೂ, ಅನ್ಯಾಯದಿಂದಲೂ ಸುಡುವದು ಅಯೋಗ್ಯವಾದದ್ದೆಂದು ಕೋರ್ಟಮಾರ್ಶಲಕ್ಕೆ ತಮ್ಮ ಲೇಖನ

ವನ್ನು ಸಾದರಿಸಿದರು. ಆದರೆ, ಇಂಥ ನ್ಯಾಯಪ್ರಿಯರಾದ ಜನರು ಹತ್ತರದಲ್ಲಿ ಒಬ್ಬರಂತೆ ಅಲ್ಪರಾಗಿದ್ದರಿಂದ ಅವರ ಪ್ರತಿಪಾದನೆಯ ಉಪಯೋಗವು ತುಸುವುಟ್ಟಿಗಾದರೂ ಆಗಲಿಲ್ಲ. ಲಷ್ಕರೀ ಕೋರ್ಟು ತನ್ನ ನಿರ್ಣಯವನ್ನು ಹೇಳಿದ ದಿವಸವೇ ಸೂರ್ಯಾಸ್ತವಾದ ಬಳಿಕ ರಾತ್ರಿಯಲ್ಲಿ ಅಟಾಹುಲಪ್ಪಾನಿಗೆ ಅಗ್ನಿಸಂಸ್ಕಾರವನ್ನು ಮಾಡಬೇಕೆಂದಾದರೂ ವಿಧಿಸಿತ್ತು. ಆ ದಿವಸವೆಂದರೆ, ೨೯ನೇ ಅಗಸ್ಟ ಸನ್ ೧೫೩೩ನೇ ಇಸ್ವಿಯು. ಆ ದಿವಸ ರಾತ್ರಿಯಲ್ಲಿ ಅಟಾಹುಲಪ್ಪಾನು ಕಬ್ಬಿಣದ ಸರಪಣಿಯಿಂದ ವಧಸ್ತಂಭಕ್ಕೆ ಬಿಗಿಯಾಗಿ ಕಟ್ಟಲ್ಪಟ್ಟನು; ಅವನ ಸುತ್ತಲೂ ಕಟ್ಟಿಗೆಯ ತುಂಡುಗಳು ರಚಿಸಲ್ಪಟ್ಟವು. ನಿನ್ನ ಮರಣಕಾಲದಲ್ಲಾದರೂ ನೀನು ಕ್ರಿಸ್ತಿ ಧರ್ಮದ ಬಾಪ್ತಿಸ್ಮಾ ತೆಗೆದುಕೊಂಡು ಆ ಧರ್ಮವನ್ನು ಸ್ವೀಕರಿಸೆಂದು ಫ್ರಾಯರ ವಾಲವರ್ದನು ಅವನಿಗೆ ಉಪದೇಶ ಮಾಡಹತ್ತಿದನು. ಕ್ರಿಸ್ತಿಯಾದರೆ, ನಿನ್ನನ್ನು ಸುಡುವವರ ಬದಲಾಗಿ, ಗಲಪಾಶದಿಂದ ನಿನ್ನ ಪ್ರಾಣವನ್ನು ತೆಗೆದುಕೊಳ್ಳುವೆವೆಂಬ ಆಶ್ವಾಸನವಾದರೂ ಅವನಿಗೆ ಕೊಡಲ್ಪಟ್ಟಿತು. ಈ ಆಶ್ವಾಸನವಾದರೂ ನಿಜವಾದದ್ದೇನೆಂದು ದೈನ್ಯಬಟ್ಟು ಅವನು ಪಿಝಾರೋನಿಗೆ ಪ್ರಶ್ನೆವನ್ನು ಮಾಡಿದನು. ಅವನಿಂದ ಆಶ್ವಾಸನ ದೊರೆತ ಬಳಿಕ, ಅಗ್ನಿಯಿಂದ ಸುಟ್ಟು ಒದ್ದಾಡಿ ಭಸ್ಮೀಭೂತವಾಗುವದಕ್ಕಿಂತ ಗಲಪಾಶದಿಂದ ಪ್ರಾಣವನ್ನು ಬಿಡುವದು ಒಳಿತಾದದ್ದೆಂದು ಯೋಚಿಸಿ, ಅಟಾಹುಲಪ್ಪಾನು ತನ್ನ ಧರ್ಮವನ್ನು ಬಿಟ್ಟು ವಾಲವರ್ದನ ಹಸ್ತದಿಂದ ಬಾಪ್ತಿಸ್ಮೆಯನ್ನು ತೆಗೆದುಕೊಂಡನು. ಬಳಿಕ 'ಗರೋಟ' ಎಂಬ ಗಲಪಾಶದಿಂದ ಅವನ ಪ್ರಾಣವು ತೆಗೆದುಕೊಳ್ಳಲ್ಪಟ್ಟಿತು.

ಈ ರೀತಿಯಾಗಿ ಅಟಾಹುಲಪ್ಪಾನು ಗತಪ್ರಾಣನಾದ ಬಳಿಕ ಪಿಝಾರೋನು ಮುಂದೆ ಸನ್ ೧೫೩೩ನೇ ಇಸ್ವಿಯ ನವೆಂಬರ ತಿಂಗಳಿನ ೧೫ನೇ ತಾರೀಖಿನ ದಿವಸ ಕುಝ್ಕೋ ರಾಜಧಾನಿಯ ಮೇಲೆ ಸಾಗಿಹೋಗಿ ಆ ಪಟ್ಟಣವನ್ನು ಹಸ್ತಗತ ಮಾಡಿಕೊಂಡನು. ಆ ಕಾಲಕ್ಕೆ ಪೇರುವ್ಹಿಯನ ಜನರು ಸ್ಪಾನಿಆರ್ಡರಿಗೆ ಸ್ವಲ್ಪ ಪ್ರತಿಬಂಧವನ್ನು ಮಾಡಿದರು. ಆದರೆ, ಸಿಂಹನ ಉಡ್ಡಾಣಕ್ಕೆ ಕುರಿಗಳು ಪ್ರತಿಬಂಧ ಮಾಡಿದಂತೆ ಪೇರುವ್ಹಿಯನ್ ಜನರ ಈ ಪ್ರತಿಬಂಧವು ಹಾಸ್ಯಾಸ್ಪದವಾಯಿತು. ಈ ರಾಜಧಾನಿಯ ಜನಸಂಖ್ಯೆಯು

ಎರಡು ಲಕ್ಷವಿದ್ದು, ಅಲ್ಲಿಯ ಸೂರ್ಯಮಂದಿರದೊಳಗಿನ ವೈಭವದ ವರ್ಣನೆಯನ್ನು ಓದಿದಂತೆ, ರಾಮಾಯಣದೊಳಗಿನ ರಾವಣನ ಲಂಕೆಯ ವರ್ಣನೆಯನ್ನು ಓದಿದಂತಾಗುತ್ತದೆ. ಇಂಥ ದುರ್ಬಲರಾದ ಜನರ ಕೈಯಲ್ಲಿ ಇಂಥ ವೈಭವ ಪೂರ್ಣವಾದ ದೇಶದ ಸ್ವಾಮಿತ್ವವನ್ನು ಕೊಡುವದರಲ್ಲಿ ಈಶ್ವರೀ ಸಂಕೇತವಾದರೂ ಯಾವದಾಗಿತ್ತೆಂಬದು ಆಶ್ಚರ್ಯಕಾರಕವಾಗಿದೆ. ಪೇರೂ ರಾಜ್ಯದ ಮೇಲೆ ಸ್ಪಾನಿಆರ್ಡರು ಮ್ಯಾಂಕೋ ಎಂಬ ಒಬ್ಬ ಇಂಕಾನನ್ನು ಸ್ಥಾಪಿಸಿ, ಸರ್ವಸತ್ತೆಯನ್ನು ತಮ್ಮ ಕೈಯಲ್ಲಿ ತೆಗೆದುಕೊಂಡರು. ಪರಸ್ಥರಾದ ಇನ್ನೂರು ಜನರು ಸಾವಿರಾರು ಮೈಲುಗಳ ಮೇಲಿಂದ ಬಂದು ಆರು ತಿಂಗಳಗಳಲ್ಲಿಯೇ ಪೇರೂದಂಥ ವಿಸ್ತೀರ್ಣ ರಾಜ್ಯದ ಸ್ವಾಮಿತ್ವವನ್ನು ಸಂಪಾದಿಸಿದ ಉದಾಹರಣವು ಜಗತ್ತಿನ ಇತಿಹಾಸದಲ್ಲಿ ಅನ್ಯತ್ರ ದೊರೆಯುವದು ದುರ್ಲಭವು.

---